# ಹೊಸತು




ನೆಮ್ಮದಿಯ ನಾಳೆ ನಮ್ಮದು



---


**ಚಿತ್ರಗಳು :** ಕಮಲಂ ಅರಸು, ನಾಮದೇವ ಕಾಗದಗಾರ

**ಮುಖಪುಟ :** ಅಕ್ಟೋಬರ್ ಕ್ರಾಂತಿ ಕುರಿತ ಕಲಾಕೃತಿ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ನ್ಯಾಯಾಂಗಕ್ಕೆ ಸಂಬಂಧಿಸಿದ ಈಚಿನ ಕೆಲವು ಘಟನೆಗಳು ಸ್ವಾರಸ್ಯಕರವಲ್ಲದಿದ್ದರೂ ಗಮನಾರ್ಹವಾಗಿವೆ. ಕರ್ನಾಟಕ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶ ಮುಖರ್ಜಿ ನಿವೃತ್ತರಾದಾಗ ಅವರಿಗೆ ಔಪಚಾರಿಕ ಬೀಳ್ಕೊಡುಗೆ ಇರಲಿಲ್ಲ. ಮುಖರ್ಜಿಯವರ ಖ್ಯಾತಿ ಮತ್ತು ಕಾರ್ಯವಿಧಾನಕ್ಕೆ ಅದೊಂದು ಸಂಕೇತ. ಅಂದು ಮಾನ್ಯ ಶ್ರೀ. ಉದಯ ಹೊಳ್ಳ ಅವರು ನ್ಯಾಯಾಲಯದಲ್ಲಿ ವಿಚಾರಣೆ ಮುಕ್ತಾಯವಾಗುವ ಸಮಯದಲ್ಲಿ ನ್ಯಾಯಾಧೀಶರ ನಿವೃತ್ತ ಜೀವನ ಸುಖಕರವಾಗಿರಲೆಂದು ವೈಯ್ಯಕ್ತಿಕವಾಗಿ ಹೇಳಿದುದಾಗಿ ವರದಿಯಾಗಿದೆ. ಎರಡನೆಯ ಸಂಗತಿ ಸರ್ವೋಚ್ಚ ನ್ಯಾಯಾಲಯದ ಕೊಲಿಜಿಯಂಗೆ ಸಂಬಂಧಿಸಿದ್ದು. ಇನ್ನು ಮುಂದೆ ಕೊಲಿಜಿಯಂನ ತೀರ್ಮಾನಗಳನ್ನು ವೆಬ್‌ಸೈಟ್‌ನಲ್ಲಿ ಬಹಿರಂಗಪಡಿಸುತ್ತಾರಂತೆ. ಅದರಿಂದೇನೂ ಮಹತ್ವದ ಪರಿಣಾಮ ಇರುವುದಿಲ್ಲ, ಏಕೆಂದರೆ ಈಗಲೂ ಒಂದೆರಡು ದಿನ ತಡವಾದರೂ ತೀರ್ಮಾನಗಳು ಸಾರ್ವಜನಿಕರಿಗೆ ತಿಳಿದುಬರುತ್ತವೆ. ಹಲವು ವರ್ಷಗಳಿಂದ ಇದು ನಡೆದುಬಂದಿದೆ. ಏಕೆ ಆ ತೀರ್ಮಾನಗಳನ್ನು ತೆಗೆದುಕೊಳ್ಳಲಾಯಿತು, ಯಾರ ಬಗ್ಗೆ ವ್ಯತಿರಿಕ್ತ ತೀರ್ಮಾನ ಕೈಗೊಳ್ಳಲಾಯಿತು, ಬೇರಿನ್ನಾವ ವಿಷಯಗಳು ಚರ್ಚೆಗೆ ಬಂದಿದ್ದವು ಎಂಬ ವಿವರಗಳಿಲ್ಲದೆ ಕೇವಲ ತೀರ್ಮಾನಗಳನ್ನು ಪ್ರಕಟಿಸಿದರೆ ಅದು ಅತಿಸಪ್ಪೆಯಾಗಿರುತ್ತದೆ. ಕೊಲಿಜಿಯಂನ ಕಾರ್ಯವಿಧಾನದ ಅಂತರಂಗವನ್ನು ಬಹಿರಂಗಪಡಿಸುವುದು ನಿಜವಾದ ಅಗತ್ಯ. ಮೂರನೆಯ ಸಂಗತಿ ಕರ್ನಾಟಕ ಉಚ್ಚ ನ್ಯಾಯಾಲಯದ ಒಬ್ಬ ನ್ಯಾಯಮೂರ್ತಿಯಾಗಿದ್ದ ಶ್ರೀ. ಪಟೇಲ್ ರಾಜಿನಾಮೆ ನೀಡಿದ್ದು. ಅವರಿಗೆ ಇನ್ನೂ ಹತ್ತು ತಿಂಗಳ ಕೆಲಸದ ಅವಧಿ ಇತ್ತು, ಆದರೆ ಏಕಾಏಕಿ ಅವರನ್ನು ಅಲಹಾಬಾದ್‌ಗೆ ವರ್ಗ ಮಾಡಲು ಸರ್ವೋಚ್ಚ ನ್ಯಾಯಾಲಯದ ಕೊಲಿಜಿಯಂ ತೀರ್ಮಾನಿಸಿತು. ಏಕೆ ಹಾಗೆ ಮಾಡಲಾಯಿತೆಂಬುದು ಎಂದೂ ಅಧಿಕೃತವಾಗಿ ತಿಳಿಯುವುದಿಲ್ಲ, ಆದರೆ ಅನಧಿಕೃತ ಊಹೆಗಳು ಸ್ಪಷ್ಟವಾಗಿವೆ. ಕರ್ನಾಟಕದಲ್ಲೇ ಇದ್ದಿದ್ದರೆ ಮುಖರ್ಜಿ ನಿವೃತ್ತರಾದಾಗ ಪಟೇಲ್ ಹಂಗಾಮಿ ಮುಖ್ಯ ನ್ಯಾಯಾಧೀಶರಾಗಿರುತ್ತಿದ್ದರು. ದೆಹಲಿಯ ಪ್ರಭುಗಳಿಗೆ ಇದು ಅಪಥ್ಯವಾಗಿ ಕಂಡಿತಾದ್ದರಿಂದ ಅವರನ್ನು ಸ್ಥಳಾಂತರ ಮಾಡಹೊರಟಿದ್ದರು. ಅದಕ್ಕೆ ಪ್ರತಿಭಟನೆಯೋ ಎಂಬಂತೆ ಶ್ರೀ. ಪಟೇಲ್ ರಾಜಿನಾಮೆ ನೀಡಿದ್ದಾರೆ. ಯಾರದೋ ಕೆಂಗಣ್ಣು ಇವರ ಮೇಲೆ ಬಿದ್ದಿತೆ ? ಹೌದು, ಬಿದ್ದಿತು, ಎನ್ನುತ್ತಾರೆ ಹಲವರು. ಗುಜರಾತ್ ಉಚ್ಚ ನ್ಯಾಯಾಲಯದಲ್ಲಿ ನ್ಯಾಯಮೂರ್ತಿಯಾಗಿದ್ದಾಗ ಶ್ರೀಯುತರು ಇಶ್ರತ್ ಜಹಾನ್ ಎಂಬಾಕೆಯ ಮೊಕದ್ದಮೆಯಲ್ಲಿ ಕೆಲವು ಅಧಿಕಾರಾರೂಢರಿಗೆ ಕಸಿವಿಸಿ ಉಂಟುಮಾಡಿದ ತೀರ್ಪು ನೀಡಿದ್ದರಂತೆ. ಇದಕ್ಕೂ ವರ್ಗಾವಣೆಗೂ ಸಂಬಂಧವಿಲ್ಲವೆಂದು ಕೊಲಿಜಿಯಂ ಹೇಳಿತು, ಆದರೆ ಊಹಾಪೋಹಗಳಂತೂ ಇರುತ್ತವಲ್ಲ. ಸರ್ಕಾರದಲ್ಲಿ ಅಧಿಕಾರದಲ್ಲಿರುವವರ ಮನಸ್ಸಿಗೆ ಘಾಸಿಯಾಗದಿರಲೆಂದು ಕೊಲಿಜಿಯಂ ವರ್ಗಾವಣೆ ತೀರ್ಮಾನ ಕೈಗೊಂಡಿತೆ ? ಅದಕ್ಕೆ ಉತ್ತರ ದೊರೆಯುವುದಿಲ್ಲ. ಏಕೆಂದರೆ, ಕೊಲಿಜಿಯಂ ತನ್ನ ಯಾವ ತೀರ್ಮಾನಕ್ಕೂ ವಿವರಣೆ ಮತ್ತು ಸಮರ್ಥನೆ ನೀಡಬೇಕಾಗಿಲ್ಲ. ಆದರೆ "ಡೆನ್ಮಾರ್ಕ್ ರಾಜ್ಯದಲ್ಲಿ ಏನೋ ಕೊಳೆತ ವಾಸನೆ" ಬರುತ್ತಿದ್ದುದಂತೂ ನಿಜವೆನ್ನುತ್ತಾರೆ.

ಮೂಲಭೂತ ಪ್ರಶ್ನೆಯು ಕೊಲಿಜಿಯಂ ಹೇಗೆ ಕೆಲಸ ಮಾಡಬೇಕೆಂದಲ್ಲ. ಅದು ಪಾರದರ್ಶಕವೋ ಅಲ್ಲವೋ ಎಂಬುದು ಗೌಣ. ಮೂಲತಃ ಕೊಲಿಜಿಯಂನ ರಚನೆಯೇ ಸಂವಿಧಾನಕ್ಕೆ ವಿರೋಧವಾದ್ದು. ಅದನ್ನು ಪಾರ್ಲಿಮೆಂಟ್ ಗಟ್ಟಿಯಾಗಿ ಹೇಳಿ ಕೊಲಿಜಿಯಂ ರದ್ದಾಗುವಂತೆ ಮಾಡಬೇಕಿತ್ತು, ಸಂವಿಧಾನ ರಚನಾ ಮಂಡಲಿಯು ಕೊಟ್ಟ ಸಂವಿಧಾನದಲ್ಲಿ ಕೊಲಿಜಿಯಂ ಎಂಬ ಕಲ್ಪನೆ ಇರಲಿಲ್ಲ. ಸರ್ವೋಚ್ಚ

**(೬ನೇ ಪುಟಕ್ಕೆ )**



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೯ ಸಂಚಿಕೆ-೪ ನವೆಂಬರ್ ೨೦೧೭

■ ***ಗೌರವ ಸಂಪಾದಕ***

ಜಿ. ರಾಮಕೃಷ್ಣ

■ ***ಸಂಪಾದಕ-ಮುದ್ರಕ-ಪ್ರಕಾಶಕ***

ಸಿದ್ದನಗೌಡ ಪಾಟೀಲ

■ ***ಸಹಸಂಪಾದಕರು***

ಇಂದಿರಾ ಕುಮಾರಿ

ಸಿ. ಆರ್. ಕೃಷ್ಣರಾವ್

ಎನ್. ಗಾಯತ್ರಿ

ಎಸ್. ಸುರೇಂದ್ರ

■ ***ವ್ಯವಸ್ಥಾಪಕ***

ಎ. ರಮೇಶ ಉಡುಪ

■ ***ಮುದ್ರಣ***

**ಶ್ರೀ ವಿನಾಯಕ ಪ್ರಿಂಟರ್ಸ್**
೭೩೮/೧೧, ೬೦ನೇ ಅಡ್ಡರಸ್ತೆ
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು – ೫೬೦ ೦೧೦

■ ***ಹೊಸತು ಕಚೇರಿಯ ವಿಳಾಸ***




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೮
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೨೨೧೬೯೧೧, ೨೨೧೬೯೧೨
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**




# ಸಂಪಾದಕೀಯ

## ಅಕ್ಟೋಬರ್ ಕ್ರಾಂತಿ ಶೋಷಿತ ವರ್ಗದ ಶಾಶ್ವತ ಪಥ್ಯ

ಅಕ್ಟೋಬರ್ ಕ್ರಾಂತಿಗೆ ನೂರು ವರ್ಷ. ಜನವಿರೋಧಿ ಪ್ರಭುತ್ವವನ್ನು ತೊಡೆದುಹಾಕಿ ದುಡಿವ ವರ್ಗದ ಅಧಿಕಾರವನ್ನು ಸ್ಥಾಪಿಸಿದ ಆ ಘಟನೆ ಇಂದಿಗೂ ಶೋಷಿತ ವರ್ಗದ ಶಾಶ್ವತ ಪಥ್ಯವಾಗಿ ಕಂಗೊಳಿಸುತ್ತಿದೆ. ಮಾರ್ಕ್ಸ್‌ವಾದದ ಬೆಳಕಿನಲ್ಲಿ ನಡೆದ ಆ ಕ್ರಾಂತಿ ಇಂದಿಗೂ ಶೋಷಕರನ್ನು, ಬಂಡವಾಳಶಾಹಿಗಳನ್ನು, ಸಾಮ್ರಾಜ್ಯಶಾಹಿಗಳನ್ನು ಬೆಚ್ಚಿಬೀಳಿಸುತ್ತಿದೆ. ಅಮೆರಿಕದ ಪತ್ರಕರ್ತ ಜಾನ್ ರೀಡ್ ಬರೆದಂತೆ 'ಜಗತ್ತನ್ನೇ ತಲ್ಲಣಿಸಿದ...' ಆ ಕ್ರಾಂತಿಗೆ ನೂರು ವರ್ಷಗಳಾಗಿವೆ. ೧೯೧೭ರ ಅಕ್ಟೋಬರ್ ೨೫ (ಹೊಸ ಕ್ಯಾಲೆಂಡರ್ ಪ್ರಕಾರ ನವೆಂಬರ್ ೭)ರಂದು ನಡೆದ ಆ ಕ್ರಾಂತಿ ದುಡಿವವರ್ಗದ ಮನೋಬಲವನ್ನು, ಕರ್ತೃತ್ವ ಶಕ್ತಿಯನ್ನು ಸಾಬೀತುಪಡಿಸಿದೆ. ಶೋಷಣೆಯ ವಿರುದ್ಧ ಸಿಡಿದೆದ್ದ ಸಾಮಾನ್ಯ ದುಡಿಯುವ ಜನ ಬಂಡವಾಳಶಾಹಿ, ಊಳಿಗಮಾನ್ಯ ಪ್ರಭುತ್ವವನ್ನು ಕಿತ್ತೆಸೆದು ಸಮಾಜವಾದಿ ಪ್ರಭುತ್ವ ಸ್ಥಾಪಿಸಿದ ಆ ಘಟನೆ ಆಕಸ್ಮಿಕವಾಗಿ ನಡೆದದ್ದಲ್ಲ. ಕಾರ್ಮಿಕರು, ರೈತರು, ಕೂಲಿಕಾರರು, ಸೈನಿಕರು ಸೇರಿ ನಡೆಸಿದ ಆ ಬಂಡಾಯ ದಶಕಗಳ ಕಾಲ ಯೋಜಿತ ಸಂಘಟನೆ, ಹೋರಾಟ, ಸಂಘರ್ಷಗಳ, ತ್ಯಾಗ, ಬಲಿದಾನಗಳ ಪ್ರತಿಫಲ. ಅಕ್ಟೋಬರ್ ಕ್ರಾಂತಿ ರಷ್ಯಾ ದೇಶದಲ್ಲಿ ನಡೆದಿದ್ದರೂ ಅದು ಜಗತ್ತನ್ನು ಸುತ್ತಿದ ಸಾಮ್ರಾಜ್ಯಶಾಹಿಗಳ ಶೋಷಣೆಯ ಸರಪಳಿಯನ್ನು ಕತ್ತರಿಸಿಹಾಕಿತ್ತು. ಅದರ ಪರಿಣಾಮ ಸಾಮ್ರಾಜ್ಯಶಾಹಿಗಳ, ಬಂಡವಾಳಶಾಹಿಗಳ, ಭೂಮಾಲಿಕರ ಗುಲಾಮಗಿರಿಯಲ್ಲಿ ನಲುಗಿಹೋಗಿದ್ದ ವಿಶ್ವದ ದುಡಿವ ಜನರ ಬದುಕಿನಲ್ಲಿ ಒಂದು ಆಶಾಕಿರಣವನ್ನೂ, ಕತ್ತಲೆಯ ಬದುಕಿನಲ್ಲಿ ಪ್ರಜ್ವಲಿಸುವ ಸೂರ್ಯನ ಬೆಳಕನ್ನೂ ತಂದುಕೊಟ್ಟಿತ್ತು. ರಷ್ಯಾ ಕ್ರಾಂತಿ ಕೇವಲ ದುಡಿವವರ್ಗಕ್ಕೆ ಮಾತ್ರವಲ್ಲ, ವಿಶ್ವದ ಸಾಮ್ರಾಜ್ಯಶಾಹಿಗಳ ವಿರುದ್ಧ ನಿರಂತರ ಸಂಘರ್ಷ, ಹೋರಾಟ ನಡೆಸುತ್ತಿದ್ದ, ಸ್ವಾತಂತ್ರ್ಯಕ್ಕಾಗಿ ಪರಿತಪಿಸುತ್ತಿದ್ದ ದೇಶಗಳ ಜನತೆಗೆ ಒಂದು ಮನೋಬಲವನ್ನು, ಸ್ವಯಮಾಡಳಿತದ ಛಲವನ್ನೂ ತಂದುಕೊಟ್ಟಿತು. ಸೂರ್ಯ ಮುಳುಗದ ಸಾಮ್ರಾಜ್ಯಗಳು ಬೆಚ್ಚಿಬಿದ್ದವು, ವಸಾಹತುಶಾಹಿಗಳು ಶೋಷಣೆ, ಸುಲಿಗೆಗಾಗಿ ದಮನಿಸಿ ನಿಯಂತ್ರಿಸಿದ್ದ ಒಂದೊಂದೇ ದೇಶಗಳನ್ನು ಕಳೆದುಕೊಂಡವು. ವಿಶ್ವದಾದ್ಯಂತ ಸ್ವಾತಂತ್ರ್ಯ, ಸಮಾನತೆಯ ಕೂಗು ಮುಖ್ಯವಾಹಿನಿಗೆ ಬಂದಿತು.

ಕಮ್ಯುನಿಸಂ ಒಂದು ಕಲ್ಪನೆ, ಸಮಾಜವಾದ ವಾಸ್ತವವಲ್ಲ, ಒಂದು ಕನಸು ಮಾತ್ರ, ಅಕ್ಟೋಬರ್ ಕ್ರಾಂತಿ ಒಂದು ಆಕಸ್ಮಿಕ ಎಂದು ಇಂದಿಗೂ ಬಲಪಂಥೀಯರು, ಸಾಮ್ರಾಜ್ಯಶಾಹಿಗಳು ವಾದಿಸುತ್ತಲೇ ಇದ್ದಾರೆ. ಆದರೆ ಅಕ್ಟೋಬರ್ ಕ್ರಾಂತಿ ಆಕಸ್ಮಿಕ ಅಲ್ಲ ಎಂಬುದು ಅವರಿಗೂ ಗೊತ್ತಿದೆ. ಅಕ್ಟೋಬರ್ ಕ್ರಾಂತಿ ಯಾರೋ ನಾಯಕರು, ಪವಾಡ ಪುರುಷರು ಮಾಡಿದ ಕ್ರಾಂತಿಯಲ್ಲ. ಅದು ಶೋಷಿತ ಜನತೆಯ ಆಕ್ರೋಶದ ಪ್ರತಿಫಲ. ಕೈಗಾರಿಕೆ, ಅಭಿವೃದ್ಧಿ, ಸಾಮಾಜಿಕವಾಗಿ ಪಶ್ಚಿಮ ಯುರೋಪ್‌ಗಿಂತಲೂ ಹಿಂದಿದ್ದ ರಷ್ಯಾದಲ್ಲಿ ೧೮೭೫ರಿಂದ ೧೮೮೫ರ ಅವಧಿಯಲ್ಲಿಯೇ ಕಾರ್ಮಿಕವರ್ಗದ ಹೋರಾಟಗಳು ಆರಂಭವಾಗಿವೆ. ಅಂದರೆ ಶಿಕಾಗೋ ಘಟನೆಗಳಿಗಿಂತ ಮುಂಚೆಯೇ. ರಷ್ಯಾದ ಜನತೆ ಹಸಿವು, ಬಡತನ, ನಿರುದ್ಯೋಗಗಳಂಥ ಪಿಡುಗುಗಳಿಂದ ಬಳಲುತ್ತಿರುವಾಗ, ರೈತರು ಕಾರ್ಮಿಕರು ಭೂಮಾಲಿಕರ, ಬಂಡವಾಳಶಾಹಿಗಳ ದಾಳಿ, ದಬ್ಬಾಳಿಕೆಗಳಿಗೆ ಬಲಿಯಾಗುತ್ತಿರುವಾಗ, ಶ್ರೀಮಂತವರ್ಗದ ಪರವಾಗಿದ್ದ ಝಾರ್ ಚಕ್ರವರ್ತಿಯ ವಿರುದ್ಧ ಬಂಡಾಯದ ಸರಣಿಗಳೇ ನಡೆದಿವೆ. ೧೮೬೧ರಲ್ಲಿಯೇ ಜೀತ ವಿಮೋಚನೆಯ ಚಳುವಳಿ ನಡೆದಿದೆ. ಆ ಚಳುವಳಿ ಎಷ್ಟು ತೀವ್ರವಾಗಿತ್ತೆಂದರೆ ಸರಕಾರ ಜೀತಪದ್ಧತಿಯನ್ನು ನಿಷೇಧ ಮಾಡಬೇಕಾಯಿತು. ಮಾರ್ಕ್ಸ್‌ವಾದ ರಷ್ಯಾದಲ್ಲಿ ಸಂಘಟನಾ ರೂಪದಲ್ಲಿ ಪ್ರವೇಶ ಮಾಡಿದ್ದು ೧೮೮೩ರಲ್ಲಿ, ಚಿಂತಕ ಪ್ಲೆಖನೋವ್ ಅವರ ಮೂಲಕ. ನಂತರವೇ ರಷ್ಯನ್ ಸೋಶಿಯಲ್ ಡೆಮಾಕ್ರೆಟಿಕ್ ಲೇಬರ್ ಪಾರ್ಟಿ (ಆರ್.ಎಸ್.ಡಿ.ಎಲ್.ಪಿ.) ಸ್ಥಾಪನೆಗೊಂಡದ್ದು, ೧೮೯೫ರಲ್ಲಿ ಅಕ್ಟೋಬರ್ ಕ್ರಾಂತಿಯ ಸೂತ್ರಧಾರ ಲೆನಿನ್ ಕಾರ್ಮಿಕವರ್ಗದ ಸಂಘಟನೆಯ ಮೂಲಕ ಪ್ರವೇಶ ಪಡೆದದ್ದು. ೨೦ನೇ ಶತಮಾನದ ಆರಂಭದ ಹೊತ್ತಿಗೆ ರೈತಪರ, ಕಾರ್ಮಿಕಪರ, ಮಧ್ಯಮವರ್ಗದ ಹಲವಾರು ತೀವ್ರವಾದಿ, ಸುಧಾರಣಾವಾದಿ ಪಕ್ಷಗಳು, ಸಂಘಟನೆಗಳು ಆರಂಭಗೊಂಡಿವೆ. ದುಡಿವವರ್ಗದ ಪರವಾಗಿದ್ದರೂ ಸುಧಾರಣಾವಾದಿ ನೆಲೆಯಲ್ಲಿ, ಆರ್ಥಿಕವಾದಿ ಧೋರಣೆಗಳಿಂದ, ಹಲವಾರು ಬಾರಿ ರಾಜಿಕೋರ ನೀತಿಯಿಂದ ಚಳುವಳಿಗಳು ನಡೆಯುತ್ತಿದ್ದ ಸಂದರ್ಭದಲ್ಲಿ, ಮಾರ್ಕ್ಸ್‌ವಾದಿ ಧೋರಣೆಯಂತೆ ದುಡಿವವರ್ಗದ ಪ್ರಭುತ್ವ ಸ್ಥಾಪನೆಯ ಗುರಿಹೊಂದಿದ್ದು ಲೆನಿನ್ ಅವರ ನಾಯಕತ್ವದ ಬೋಲ್ಶೆವಿಕ್ ಗುಂಪು ಮಾತ್ರ. 'ಝಾರ್‌ನ ನಿರಂಕುಶ ಆಧಿಪತ್ಯ ಕೊನೆಯಾಗಲಿ' ಎಂಬ ಘೋಷಣೆ ಪ್ರಧಾನವಾಗಿತ್ತೇ ಹೊರತು ಪರ್ಯಾಯದ ಸ್ಪಷ್ಟ ಕಲ್ಪನೆ ಬೋಲ್ಶೆವಿಕ್‌ರನ್ನು ಹೊರತುಪಡಿಸಿ

ಬೇರೆಯವರಿಗಿರಲಿಲ್ಲ. ಇದರ ಪರಿಣಾಮವಾಗಿಯೇ ಲೆನಿನ್ ಮತ್ತು ಬೋಲ್ಶೆವಿಕ್ ಪಕ್ಷ ನಿಷೇಧ ಮತ್ತು ಗಡಿ ಪಾರು ಶಿಕ್ಷೆಗಳನ್ನು ಎದುರಿಸಬೇಕಾಯಿತು.

೧೯೧೭ರ ಅಕ್ಟೋಬರ್ ಕ್ರಾಂತಿ ಆಕಸ್ಮಿಕ ಎನ್ನುವವರು ಕ್ರಾಂತಿಯ ಮುಂಚಿನ ಒಂದು ದಶಕದ ಬೆಳವಣಿಗೆಯನ್ನು ಗಮನಿಸಬೇಕು. ಇಪ್ಪತ್ತನೇ ಶತಮಾನದ ಆರಂಭಕ್ಕೆ ಇಡೀ ರಷ್ಯಾ ಕಾರ್ಮಿಕರ, ರೈತರ, ಮಹಿಳೆಯರ, ಸೈನಿಕರ ಬಂಡಾಯಗಳಿಗೆ ಸಾಕ್ಷಿಯಾಗಿದೆ. ೧೯೦೫ರ ಕಾರ್ಮಿಕರ ಬಂಡಾಯವನ್ನು ಮೊದಲನೇ ಕ್ರಾಂತಿ ಎಂದೇ ಕರೆಯಲಾಗಿದೆ. ಝಾರ್ ಎರಡನೇ ನಿಕೊಲಾಸ್‌ನ ವಿರುದ್ಧ ನಡೆದ ಈ ಬಂಡಾಯವನ್ನು ಸರಕಾರ ಸದೆಬಡೆಯಿತು. ಆ ವರ್ಷದ ಆರಂಭದಲ್ಲಿ ಜನವರಿ ೯ರಂದು ನಡೆದ ನರಮೇಧ ಅತ್ಯಂತ ಅಮಾನವೀಯವಾಗಿತ್ತು. ಝಾರ್‌ನ ಪಡೆಗಳು ಕಾರ್ಮಿಕರು, ಮಕ್ಕಳು, ಮಹಿಳೆಯರ ಮೇಲೆ ಗುಂಡಿನ ಮಳೆ ಸುರಿಸಿದವು. ಆ ದಿನ 'ಬ್ಲಡಿ ಸಂಡೆ' ಅಂತಲೇ ಇತಿಹಾಸದಲ್ಲಿ ದಾಖಲಾಗಿದೆ. ಆ ಘಟನೆಯನ್ನು ದೇಶದಾದ್ಯಂತ ಸುಮಾರು ೫ ಲಕ್ಷ ಕಾರ್ಮಿಕರು ಸಂಘಟಿತರಾಗಿ ಪ್ರತಿಭಟಿಸಿದ್ದಾರೆ. ಸರಕಾರದ ಈ ದಮನದ ಘಟನೆ ಇಡೀ ರಷ್ಯಾದ ಜನತೆಯನ್ನು ಬಡಿದೆಬ್ಬಿಸಿದೆ. ಕಾರ್ಮಿಕರು, ರೈತರು ಮಾತ್ರವಲ್ಲ ಸೇನೆಯಲ್ಲೂ ಬಂಡಾಯಗಳು ನಡೆದಿವೆ. ಪೊಟೆಮ್ಕಿನ್ ನೌಕೆಯ ಸೇನಾ ಬಂಡಾಯವೇ ಇದಕ್ಕೆ ಉದಾಹರಣೆ. ೧೯೦೫ರ ಮೊದಲ ಕ್ರಾಂತಿಯನ್ನು ಸದೆಬಡೆದರೂ ಅದು ರಷ್ಯಾದ ರಾಜಕೀಯದಲ್ಲಿ ಹಲವಾರು ಸುಧಾರಣೆಗಳು ಬರಲು ಕಾರಣವಾಯಿತು. ಆದರೆ ಬೋಲ್ಶೆವಿಕ್‌ರ ಮೇಲೆ ನಿರಂತರ ದಾಳಿಗಳು ನಡೆದು ಬಹುಸಂಖ್ಯಾತರಾಗಿದ್ದ ಈ ಗುಂಪು ಭೂಗತವಾದ ಕಾರಣ ಅಲ್ಪಸಂಖ್ಯಾತವಾಯಿತು. ಆದರೆ ದೇಶದ ಕಾರ್ಮಿಕ, ರೈತರ ಮಧ್ಯೆ ತನ್ನ ಪ್ರಭಾವವನ್ನು ವಿಸ್ತರಿಸಿತು.

ಮೊದಲನೇ ಜಾಗತಿಕ ಯುದ್ಧದ ಆರಂಭದ ಹೊತ್ತಿಗೆ ರಷ್ಯಾದ ಜನತೆಯ ಸಂಕಷ್ಟಗಳು ತೀವ್ರವಾದವು. ದೇಶದ ಜನತೆಯ ವಿರೋಧವಿದ್ದಾಗಲೂ ರಷ್ಯ ಸರಕಾರ ಯುದ್ಧದಲ್ಲಿ ಭಾಗಿಯಾಯಿತು. ರೈತರ ಮಕ್ಕಳನ್ನು ಕಡ್ಡಾಯವಾಗಿ, ಬಲವಂತದಿಂದ ಸೈನ್ಯಕ್ಕೆ ಸೇರಿಸಲಾಯಿತು. ಈ ಯುದ್ಧ ರಷ್ಯಾದ ಬಂಡವಾಳಗಾರರಿಗೆ, ವ್ಯಾಪಾರಿಗಳಿಗೆ ಲಾಭದಾಯಕವಾಗಿತ್ತೆ ಹೊರತು ಜನರಿಗೆ ಸಂಕಷ್ಟಗಳ ಸರಮಾಲೆಯನ್ನೇ ತಂದಿತ್ತು. ಲೆನಿನ್ ನಾಯಕತ್ವದ ಬೋಲ್ಶೆವಿಕ್ ಗುಂಪು ಯುದ್ಧವನ್ನು ವಿರೋಧಿಸಿತು. ಆಗ ಆಳುವ ವರ್ಗ ಕಮ್ಯುನಿಸ್ಟರಿಗೆ ದೇಶದ್ರೋಹಿಗಳೆಂಬ ಪಟ್ಟ ಕಟ್ಟಿತು. ಯುದ್ಧದಲ್ಲಿ ಬ್ರಿಟನ್, ಫ್ರಾನ್ಸ್ ಕೂಟದ ಭಾಗವಾಗಿದ್ದ ರಷ್ಯಾ ಪ್ರಭುತ್ವ ಕಮ್ಯುನಿಸ್ಟರನ್ನು ಜರ್ಮನಿಯ ಏಜೆಂಟರೆಂದು ಪ್ರಚಾರ ಮಾಡಿತು. ಆದರೆ ಯುದ್ಧದ ಪರಿಣಾಮಗಳಿಂದ ಬೇಸತ್ತ ಜನತೆ, ರೈತರು, ಕಾರ್ಮಿಕರು, ಸೈನಿಕರು ಸರಕಾರದ ವಿರುದ್ಧ ಬಂಡೇಳತೊಡಗಿದರು. ೧೯೦೫ರ ದಂಗೆಯನ್ನು ಸದೆಬಡಿದನಂತರ ನಿಧಾನವಾಗಿದ್ದ ಕ್ರಾಂತಿಕಾರಿ ಚಟುವಟಿಕೆಗಳು ಮತ್ತೆ ತೀವ್ರವಾದವು. ಕಮ್ಯುನಿಸ್ಟರ ಮೇಲೆ 'ರಾಜದ್ರೋಹ'ದ ಆರೋಪಗಳನ್ನು ಹೊರಿಸಿ ಸರಕಾರ ಬಂಧನ ಸತ್ರ ಆರಂಭಿಸಿತು. ಸಾವಿರಾರು ಕಾರ್ಯಕರ್ತರನ್ನು ಸೈಬೀರಿಯಾಕ್ಕೆ ತಳ್ಳಿತು. ನಾಯಕರೆಲ್ಲ ಭೂಗತರಾಗಿ ಕೆಲಸ ಮಾಡತೊಡಗಿದರು. ಜನರ ತಾಳ್ಮೆಯ ದಿನಗಳು ಮುಗಿದಿದ್ದವು.

೧೯೧೭ರ ಫೆಬ್ರವರಿ ೨೩ರಂದು ಟೆಕ್ಸ್‌ಟೈಲ್ ಕಾರ್ಖಾನೆಯ ಮಹಿಳಾ ಕಾರ್ಮಿಕರು ಬೀದಿಗಿಳಿದರು. 'ಯುದ್ಧ ಬೇಡ ಶಾಂತಿ ಬೇಕು', 'ತಿನ್ನಲು ಅನ್ನ ಬೇಕು' ಎಂಬ ಅವರ ಘೋಷಣೆ ಸಂಚಲನ ಮೂಡಿಸಿತ್ತು. ಮಹಿಳೆಯರು ಮತ್ತು ಮಕ್ಕಳು ನಡೆಸಿದ ಈ ಹೋರಾಟಕ್ಕೆ ಬೆಂಬಲ ಹರಿದುಬಂತು. ಸಾವಿರ ಸಂಖ್ಯೆಯಲ್ಲಿದ್ದ ಪ್ರತಿಭಟನಾಕಾರರು ಲಕ್ಷದಷ್ಟಾದರು. ಪ್ರತಿಭಟನೆ ದೇಶವ್ಯಾಪಿ ಹರಡಿತು. ತಮ್ಮ ನೋವು ಸಂಕಟಗಳನ್ನು ಹಿಡಿದಿಟ್ಟುಕೊಂಡಿದ್ದ ಜನತೆಯ ಆಕ್ರೋಶ ಮತ್ತೊಮ್ಮೆ ಭುಗಿಲೆದ್ದಿತು. ಕಾರ್ಮಿಕರು, ರೈತರು, ಸೈನಿಕರು ಬೀದಿಗಿಳಿದರು. ಕೇವಲ ಐದು ದಿನದಲ್ಲಿ ಪ್ರತಿಭಟನೆ ದಂಗೆಯ ರೂಪ ಪಡೆಯಿತು, ದಂಗೆ ಕ್ರಾಂತಿಯ ರೂಪ ಪಡೆಯಿತು. ಜನರ ಆಕ್ರೋಶ ಯಾವ ಪರಿ ಇತ್ತೆಂದರೆ ಫೆಬ್ರವರಿ ೨೭ಕ್ಕೆ ಝಾರ್ ಸರಕಾರವನ್ನೇ ಕಿತ್ತೆಸೆಯಿತು. ಇದು ಇತಿಹಾಸದಲ್ಲಿ ಫೆಬ್ರವರಿ ಕ್ರಾಂತಿಯೆಂದು ಹೆಸರಾಗಿದೆ. ಕಮ್ಯುನಿಸ್ಟರು ಭೂಗತವಾಗಿದ್ದರೂ ಈ ಕ್ರಾಂತಿಯ ಒಡಲಾಳದ ಶಕ್ತಿಯಾಗಿದ್ದರು.

ಝಾರ್‌ನ ನಂತರ ಅಧಿಕಾರಕ್ಕೆ ಬಂದ ಕಿಚಡಿ ಸರಕಾರ ಜನರ ಭಾವನೆಗಳನ್ನು ಗೌರವಿಸದೆ, ಯುದ್ಧದಿಂದ ಹಿಂದಕ್ಕೆ ಸರಿಯದೆ, ಸಮಸ್ಯೆಗಳ ಪರಿಹಾರ ಮಾಡದೇ ಇದ್ದಾಗ ಕೇವಲ ಎರಡು ತಿಂಗಳಲ್ಲಿ ಮತ್ತೆ ಪ್ರತಿರೋಧ ಆರಂಭವಾಯಿತು. ಆಗ ಬೋಲ್ಶೆವಿಕ್ (ಕಮ್ಯುನಿಸ್ಟ್) ಪಕ್ಷ ಸಮಾಜವಾದಿ ಕ್ರಾಂತಿಯಾಗದೆ ಜನತೆಯ ಸಂಕಷ್ಟ ಪರಿಹಾರ ಸಾಧ್ಯವಿಲ್ಲ ಎಂಬ ತೀರ್ಮಾನಕ್ಕೆ ಬಂತು. ಲೆನಿನ್ ಅವರ 'ಏಪ್ರಿಲ್ ಥೀಸಿಸ್' ಸಿದ್ಧವಾಯಿತು. ಬಂಡವಾಳಗಾರರ ಹಿತ ಕಾಯುತ್ತಿದ್ದ, ಜನತೆಗೆ ದ್ರೋಹ ಬಗೆದ ಕೆರೆನ್‌ಸ್ಕಿ ಸರಕಾರದ ವಿರುದ್ಧ ಅಂತಿಮ ಹೋರಾಟ ನಡೆಯಿತು. ಕಾರ್ಮಿಕರ, ರೈತರ, ಸೈನಿಕರ ಐಕ್ಯತೆ ಈ ಹೋರಾಟದ ಕೇಂದ್ರವಾಯಿತು. ಕ್ರಾಂತಿಯ ಸೂಚನೆಗಳು ಸಿಗುತ್ತಲೇ ಕಮ್ಯುನಿಸ್ಟರ ಮೇಲೆ ದಾಳಿ, ಜರ್ಮನ್ ಏಜೆಂಟರೆಂಬ ಪ್ರಚಾರ ತೀವ್ರವಾದವು. ಲೆನಿನ್ ಆದಿಯಾಗಿ ಎಲ್ಲರೂ ಭೂಗತರಾದರು. ಆದರೆ ಕಾರ್ಯಕರ್ತರ ಸಂಖ್ಯೆ ನಿರೀಕ್ಷೆ ಮೀರಿ ಬೆಳೆದಿತ್ತು. 'ಜರ್ಮನ್ ಏಜೆಂಟರು' ದೇಶದ್ರೋಹಿಗಳು ಎಂಬ ಅಪಪ್ರಚಾರಕ್ಕೆ ಒಂದು ತಿಂಗಳಲ್ಲಿ ಕ್ರಾಂತಿಕಾರಿಗಳು ಉತ್ತರ ಕೊಟ್ಟರು. ಆಗಸ್ಟ್, ಸೆಪ್ಟೆಂಬರ್ ಎರಡು ತಿಂಗಳ ತಯಾರಿಯಲ್ಲಿ ಇಡೀ ದೇಶದಲ್ಲಿ ಕ್ರಾಂತಿಯ ವಾತಾವರಣ ವಿಸ್ತರಿಸಿತು. ೧೯೧೭ ಜುಲೈನಿಂದ ಲೆನಿನ್ ಭೂಗತರಾಗಿ ಕ್ರಾಂತಿಗೆ ನಿರ್ದೇಶನ ಕೊಡುತ್ತಿದ್ದರು. ಸೇನಾಧಿಕಾರಿ



ತಿಂಗಳ ಪತ್ರಿಕೆ
**ಹೊಸತು**
ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| **ಬಿಡಿ ಸಂಚಿಕೆ** | ₹ ೨೦/- |
| **ವಾರ್ಷಿಕ ಚಂದಾ** | ₹ ೨೫೦/- |
| **ಮೂರು ವರ್ಷಕ್ಕೆ** | ₹ ೫೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಕೋರ್ನಿಲೋವ್ ಕಮ್ಯುನಿಸ್ಟರ ಬೇಟೆ ಆಡತೊಡಗಿದ. ಕಮ್ಯುನಿಸ್ಟ್ ಪಕ್ಷದ ಕಾರ್ಯಾಲಯಗಳಿಗೆ ಬೆಂಕಿ ಹತ್ತಿಸಿದ. ದೇಶದಾದ್ಯಂತ ಕ್ರಾಂತಿಕಾರಿಗಳ, ಅವರ ಬೆಂಬಲಿಗರ ಬಂಧನ, ಕೊಲೆ ನಡೆದವು. ಜನತೆಯ ಆಕ್ರೋಶದ ಕಟ್ಟೆ ಒಡೆಯಿತು. ಕಾರ್ಮಿಕರು, ರೈತರು, ಸೈನಿಕರು ಕ್ರಾಂತಿಯ ಕರೆಗೆ ಕಾಯುತ್ತಿದ್ದರು. ಲೆನಿನ್ ದಿನ ನಿಗದಿ ಮಾಡಿದರು. 'ಅಕ್ಟೋಬರ್ – ೨೫'. ಕಾರ್ಮಿಕರು, ರೈತರು, ಸೇನೆ, ರೆಡ್‌ಗಾರ್ಡ್ಸ್ ಎಲ್ಲ ನುಗ್ಗಿದರು, ಸರಕಾರಿ ಕಚೇರಿಗಳನ್ನು ವಶಪಡಿಸಿಕೊಂಡರು. ಕೊನೆಗೆ ಆಡಳಿತಗಾರರ ಕೇಂದ್ರ ಪೆಟ್ರೋಗ್ರಾಡ್‌ನ 'ವಿಂಟರ್ ಪ್ಯಾಲೇಸ್' ಕ್ರಾಂತಿಕಾರರ ವಶವಾಯಿತು, ಕೆರೆನ್‌ಸ್ಕಿ ಪಲಾಯನ ಮಾಡಿದ, ಸೇನಾಧಿಕಾರಿ ಕೋರ್ನಿಲೋವ್ ಕ್ರಾಂತಿಕಾರಿಗಳ ಕೈಗೆ ಸಿಕ್ಕಿಬಿದ್ದ. ಕ್ರಾಂತಿ ಯಶಸ್ವಿಯಾಯಿತು. ಅದು ೧೯೧೭ ಅಕ್ಟೋಬರ್ – ೨೫ (ನವೆಂಬರ್, ೭) ಮಾರನೇ ದಿನ ಸಮಾಜವಾದಿ ಸರಕಾರ ಸ್ಥಾಪನೆಯಾಯಿತು. ಜನರ ಮೊದಲ ಬೇಡಿಕೆಯಾಗಿದ್ದ 'ಶಾಂತಿ' ಮೊದಲ ಶಾಸನವಾಯಿತು.

ಮೇಲಿನ ಎಲ್ಲ ಘಟನಾವಳಿಗಳನ್ನು ಗಮನಿಸಿದರೆ ಅಕ್ಟೋಬರ್ ಕ್ರಾಂತಿ ಆಕಸ್ಮಿಕ ಹೇಗಾಗುತ್ತದೆ ? ಕ್ರಾಂತಿಯ ಯಶಸ್ಸಿಗಿಂತಲೂ ಪ್ರತಿಕ್ರಾಂತಿಯನ್ನು ಎದುರಿಸಿ ಕ್ರಾಂತಿಕಾರಿ ಸರಕಾರವನ್ನು ಮುನ್ನಡೆಸಿದ್ದು ಮಹಾನ್ ಸಾಧನೆ. ಏಳು ದಶಕಗಳ ಕಾಲ ಹಸಿವು, ನಿರುದ್ಯೋಗಗಳಿಲ್ಲದ, ಸಮಾನತೆಯ ಸಿದ್ಧಾಂತದ ಮೇಲೆ ಜನಪರ ಅಧಿಕಾರ ನಡೆಸಿ, ಸಾಮ್ರಾಜ್ಯಶಾಹಿ ಅಮೆರಿಕಕ್ಕೆ ಸರಿಸಾಟಿಯಾಗಿ ಬೆಳೆದ ಸೋವಿಯೆತ್ ಯೂನಿಯನ್ ಇಂದು ಪತನವಾಗಿರಬಹುದು. ಆದರೆ ದುಡಿವ ಜನ ಜನರ ಪರವಾಗಿ ಆಡಳಿತವನ್ನು ಮಾಡಬಲ್ಲರು ಎಂದು ಮೊಟ್ಟಮೊದಲು ತೋರಿಸಿಕೊಟ್ಟ ಅಕ್ಟೋಬರ್ ಕ್ರಾಂತಿ ವಿಶ್ವದ ಜನಪರ ಹೋರಾಟಗಾರರಿಗೆ ಒಂದು ಮಾದರಿಯಾಗಿ, ಪಠ್ಯವಾಗಿ ಯಾವತ್ತೂ ಇರುತ್ತದೆ. ಒಂದು ಸಮಾಜವಾದಿ ಸರಕಾರ ಹೇಗಿರುತ್ತದೆ ಎಂಬುದನ್ನು ಸಾಬೀತುಮಾಡಲಾಗಿದೆ. ಮೊದಲ ಮಹಾಯುದ್ಧದಿಂದ ಹಿಂದೆ ಬರಬೇಕು ಎಂದು ಹೇಳಿದ ರಷ್ಯಾದ ಮೇಲೆ ಎರಡನೇ ಮಹಾಯುದ್ಧವನ್ನು ಹೇರಲಾಯಿತು. ಹಿಟ್ಲರ್‌ನ ಫ್ಯಾಸಿಸ್ಟ್ ಸೇನೆಯನ್ನು ಸದೆಬಡಿದು ಎರಡನೇ ಮಹಾಯುದ್ಧವನ್ನು ಮುಕ್ತಾಯಗೊಳಿಸಿದ್ದು ಸಮಾಜವಾದಿ ಶಕ್ತಿ. ಅದಕ್ಕೆ ಅದು ತನ್ನ ೨೦ರಿಂದ ೨೫ ಮಿಲಿಯನ್ ಸೈನಿಕರನ್ನೂ, ನಾಗರಿಕರನ್ನೂ ಕಳೆದುಕೊಂಡಿತು. ಎರಡನೇ ಜಾಗತಿಕ ಯುದ್ಧದ ಮುಕ್ತಾಯದೊಂದಿಗೆ ವಿಶ್ವದಲ್ಲಿ ಸಾಮ್ರಾಜ್ಯಶಾಹಿ ಯುಗ ಕೊನೆಗೊಂಡು ಸ್ವಾತಂತ್ರ್ಯ ಸಂಗ್ರಾಮಗಳ ಯುಗ ಆರಂಭವಾಯಿತು. ಪೂರ್ವ ಯುರೋಪ್ ದೇಶಗಳಲ್ಲಿ ಸಮಾಜವಾದಿ ಸರಕಾರಗಳು ಸ್ಥಾಪನೆಯಾದವು. ಚೀನಾ, ವಿಯೆಟ್ನಾಂ, ಕ್ಯೂಬ ಮುಂತಾದೆಡೆ ಕ್ರಾತಿಯಾದವು. ಎಲ್ಲ ಸಮಾಜವಾದಿ ದೇಶಗಳಲ್ಲಿ ಭೂಮಿ, ಕೈಗಾರಿಕೆ ಮುಂತಾದ ಉತ್ಪಾದನಾ ಮೂಲಗಳ ಸಮಾಜೀಕರಣದ ಮಾದರಿ, ವಿವಿಧ ರಾಷ್ಟ್ರೀಯತೆಗಳ ಸಹಬಾಳ್ವೆ, ಮೂಲಭೂತ ಅವಶ್ಯಕತೆಗಳ ಪೂರೈಕೆ, ಭಾರತದಂಥ ತೃತೀಯ ಜಗತ್ತಿನ ದೇಶಗಳಲ್ಲಿ 'ಕಲ್ಯಾಣ ರಾಜ್ಯ'ದ ಪರಿಕಲ್ಪನೆ ಇವೆಲ್ಲಕ್ಕೂ ಅಕ್ಟೋಬರ್ ಸಮಾಜವಾದಿ ಕ್ರಾಂತಿ ಮಾದರಿಗಳನ್ನು ಒದಗಿಸಿದೆ. ಇಂಥ ಒಂದು ಮಾದರಿಯ ಪತನವಾದ ನಂತರ ಅಮೆರಿಕ ಮತ್ತು ನವ ಉದಾರವಾದಿ ನೀತಿಯ ರೂವಾರಿಗಳು 'ಬಂಡವಾಳವಾದ'ಕ್ಕೆ ಬದಲಿ ಇಲ್ಲ ಎಂದು ಹೇಳುತ್ತಿದ್ದಾರೆ. ಜಾಗತೀಕರಣ ನೀತಿ ಜಾರಿಗೆ ಬಂದು ೨೫ ವರ್ಷಗಳಾದವು. ಬಡತನ, ಹಸಿವು, ನಿರುದ್ಯೋಗ ಹೆಚ್ಚುತ್ತಿದೆ. ಭಾರತದಲ್ಲಿ ಅಂಬಾನಿ, ಅದಾನಿಯಂಥವರ ಆದಾಯ ದ್ವಿಗುಣಗೊಳ್ಳುತ್ತಿದೆ. ಕೆಲವೇ ಉದ್ಯಮಿ ವ್ಯಾಪಾರಿಗಳ ಸಂಪತ್ತು ಲಕ್ಷ ಕೋಟಿಗಳ ಲೆಕ್ಕದಲ್ಲಿ ಹೆಚ್ಚುತ್ತಿದೆ. ಆದರೆ ದೇಶದ ಜಿ.ಡಿ.ಪಿ. ಇಳಿಯುತ್ತಿದೆ. ರೈತರ ಆತ್ಮಹತ್ಯೆ ಹೆಚ್ಚುತ್ತಿದೆ. ಸಂಪತ್ತಿನ ಕೇಂದ್ರೀಕರಣ, ಬಡತನದ ಸಾರ್ವತ್ರೀಕರಣ ಜಾಗತೀಕರಣದ ಫಲಿತಾಂಶವಾಗಿದೆ. ಬಂಡವಾಳವಾದಕ್ಕೆ ಬದಲಿ ಇಲ್ಲ ಎನ್ನುವವರು ಆರ್ಥಿಕ ಬಿಕ್ಕಟ್ಟುಗಳನ್ನು ಹೇಗೆ ವಿಶ್ಲೇಷಿಸುತ್ತಾರೆ? ಬಂಡವಾಳವಾದ, ನವ ಉದಾರೀಕರಣ ನೀತಿಗಳೇ ಅಂತಿಮವಾದರೆ 'ವಾಲ್‌ಸ್ಟ್ರೀಟ್' ಚಳುವಳಿ ಏಕೆ ನಡೆಯುತ್ತಿತ್ತು ? ರಷ್ಯಾದ ಜ಼ಾರ್ ಚಕ್ರವರ್ತಿ ತನಗೆ ಬದಲಿ ಇಲ್ಲ ಎಂದು ತಿಳಿದಿದ್ದ, ನಂತರ ಅಧಿಕಾರ ವಹಿಸಿದ್ದ ಕರೆನ್‌ಸ್ಕಿ ಸಮಾಜವಾದದ ಪ್ರತಿಪಾದಕರನ್ನು ನಾಶಮಾಡಿದೆ ಎಂದು ತಿಳಿದಿದ್ದ. ಆದರೆ ಅವರಿಗೆ ಸಮಾಜವಾದವೇ ಪರ್ಯಾಯವಾಗಿತ್ತು. ಇಂದು ಭಾರತದಲ್ಲಿಯೂ ಕಮ್ಯುನಿಸ್ಟರನ್ನು ದೇಶದ್ರೋಹಿಗಳು ಎಂದು ಆಳುವ ಪ್ರಭುತ್ವಗಳು ಅವರ ಹಿಂಬಾಲಕರು ಪ್ರಚಾರ ಮಾಡುತ್ತಿದ್ದಾರೆ. ಅಕ್ಟೋಬರ್ ಕ್ರಾಂತಿಯ ಸಂದರ್ಭದಲ್ಲಿ ರಷ್ಯಾ ಸರಕಾರ ಕಮ್ಯುನಿಸ್ಟರನ್ನು ರಾಜದ್ರೋಹಿಗಳು, ದೇಶದ್ರೋಹಿಗಳು ಎಂದು ಪ್ರಚಾರಮಾಡಿ ದಾಳಿ ಮಾಡಿತ್ತು. ಅಂತಿಮವಾಗಿ ಜನರಿಗೆ ಮನವರಿಕೆಯಾಯಿತು. ಶ್ರೀಮಂತರ ಪರ ಪ್ರಭುತ್ವಗಳು ಬಡವರ ಪರ ಮಾತನಾಡುವವರನ್ನೆಲ್ಲ ದೇಶದ್ರೋಹಿಗಳು ಎನ್ನುತ್ತದೆ, ಯಾಕೆಂದರೆ ಮೂಲದಲ್ಲಿ ಅವರು ಜನದ್ರೋಹಿಗಳಾಗಿರುತ್ತಾರೆ. ಇಂಥ ಜನದ್ರೋಹಿಗಳಿಗೆ ಜನ ಎಂಥ ಪಾಠ ಕಲಿಸಬೇಕು ಎನ್ನುವುದೇ ಅಕ್ಟೋಬರ್ ಕ್ರಾಂತಿಯ ಪಠ್ಯ.

ಸಿದ್ದನಗೌಡ ಪಾಟೀಲ

---

*(ಈ ತಿಂಗಳು ೩ನೇ ಪುಟದಿಂದ)*

ನ್ಯಾಯಾಲಯವು ೧೯೯೦ರ ದಶಕದಲ್ಲಿ ತನ್ನ ಮನಬಂದಂತೆ ಅದನ್ನು ರಚಿಸಿಕೊಂಡಿತು. ಅದು ಅಸಿಂಧುವೇ ಎಂದು ಮೊಕದ್ದಮೆ ಹೂಡಿದರೆ ಅದಕ್ಕೆ ತೀರ್ಪು ಕೊಡುವುದು ಅದೇ ಸರ್ವೋಚ್ಚ ನ್ಯಾಯಾಲಯ ! ಸಂವಿಧಾನಕ್ಕೆ ಪಾರ್ಲಿಮೆಂಟ್ ಸಕ್ರಮವಾಗಿ ತಿದ್ದುಪಡಿ ತಂದಿದ್ದರೆ ಅದು ಬೇರೆ ವಿಷಯವಾಗುತ್ತಿತ್ತು. ಸಂವಿಧಾನಕ್ಕೆ ತಿದ್ದುಪಡಿ ತರುವುದು ಪಾರ್ಲಿಮೆಂಟ್ ಕೆಲಸವೇ ವಿನಾ ಬೇರಾರದೂ ಅಲ್ಲ. ಆದರೆ ಸರ್ವೋಚ್ಚ ನ್ಯಾಯಾಲಯವು ಸ್ವಯಂ ಮಾಡಿದಾಗ ಪಾರ್ಲಿಮೆಂಟ್ ಆಕ್ಷೇಪವೆತ್ತಲಿಲ್ಲ. ನ್ಯಾಯಾಲಯ ವನ್ನು ವಿರೋಧಿಸಿದರೆ ಇನ್ನೇನು ಕಂಟಕವೋ ಎಂಬ ಭೀತಿ ಇದ್ದಿತೋ ಏನೋ ತಿಳಿಯದು, ಅಂತೂ ಸ್ಪಷ್ಟವಾಗಿ ಸಂವಿಧಾನಕ್ಕೆ ಹೊರತಾದ ಕೊಲಿಜಿಯಂ ನ್ಯಾಯಾಲಯಗಳ ಆಡಳಿತ ನಡೆಸುತ್ತಿದೆ. "ನಾವೇನು ತಪ್ಪೆಸಗಿದ್ದೇವೆ, ತೋರಿಸಿ" ಎಂದು ಕೊಲಿಜಿಯಂ ಒಂದೆರಡು ತಿಂಗಳ ಹಿಂದೆ ಕೇಂದ್ರ ಸರ್ಕಾರಕ್ಕೆ ಸವಾಲು ಹಾಕಿತ್ತು. ತಪ್ಪು – ನೆಪ್ಪಿನ ವಿಷಯ ಅಲ್ಲ ಇದು, ಕೊಲಿಜಿಯಂ ರಚನೆಯೇ ಮೂಲವಾದ ತಪ್ಪು. ಅದನ್ನು ಬಾಯಿಬಿಟ್ಟು ಉಚ್ಚಸ್ವರದಲ್ಲಿ ಪಾರ್ಲಿಮೆಂಟ್ ಹೇಳುವುದಿಲ್ಲ, ಕೊಲಿಜಿಯಂ ಇಲ್ಲವಾಗುವುದಿಲ್ಲ. ಒಟ್ಟಿನಲ್ಲಿ ಸಂವಿಧಾನ ನಗಣ್ಯವಾಗಿದೆ. ಎಲ್ಲದಕ್ಕೂ "ಡಾ॥ ಬಾಬಾಸಾಹೇಬ್ ಅಂಬೇಡ್ಕರ್ ನೀಡಿದ ಸಂವಿಧಾನ" ಎಂದು ಘೋಷಿಸುವವರು ಅಸಾಂವಿಧಾನಿಕವಾಗಿ ಸಂವಿಧಾನಕ್ಕೆ ತಿದ್ದುಪಡಿ ತಂದಿರುವುದನ್ನು ಪ್ರಶ್ನಿಸಿಲ್ಲ. ಪಾರ್ಲಿಮೆಂಟ್ ಗಪ್ – ಚುಪ್.

ಹೀಗೆ ಮುನ್ನಡೆಯುತ್ತಿದೆ ನಮ್ಮ ಗಣರಾಜ್ಯದ ಪ್ರಜಾಪ್ರಭುತ್ವ. ಹೇಗೋ ಚಲಿಸುತ್ತಿದ್ದರೆ ಅದು ಗಾಡಿಯಲ್ಲವೇ ? ನಾವು ಚಲಿಸುತ್ತಿರುವುದು ಹಾಗೆ !

* * *

ಉತ್ತರ ಪ್ರದೇಶದ ಪ್ರವಾಸೋದ್ಯಮ ಇಲಾಖೆಯ ಕಣ್ಣಿಂದ ತಾಜಮಹಲ್ ದೂರವಾಗಿದೆ. ಇಲಾಖೆಯು ಪ್ರಕಟಿಸಿರುವ ಮಾಹಿತಿ ಪುಸ್ತಕದಲ್ಲಿ ಅದರ ಹೆಸರಿಲ್ಲ. "ಅದನ್ನು ಕಟ್ಟಿದವರ ಕೈಗಳನ್ನು ಕತ್ತರಿಸಿಹಾಕಿದ್ದ ಆ ಷಹಜಹಾನ್, ಗೊತ್ತೆ ?" ಎಂದು ಆಗ್ರಾದ ಲೋಕಸಭಾ ಸದಸ್ಯ ಸವಾಲೆಸೆದಿದ್ದಾರೆ. ಅದು ತಲೆಬುಡವಿಲ್ಲದ ಸವಾಲೆಂದು ಇತಿಹಾಸ ತಜ್ಞರು ಅದನ್ನು ಕಸದ ಬುಟ್ಟಿಗೆ ಎಸೆದಿದ್ದಾರೆ. ಮುಂದೊಂದು ದಿನ ತಾಜಮಹಲ್ ಕಟ್ಟಡವನ್ನು ಉರುಳಿಸಲಡ್ಡಿಯಿಲ್ಲ, ಏಕೆಂದರೆ ಅದನ್ನು ಸಾರ್ವಜನಿಕರ ಹಣದಿಂದ ರಾಜನ ಪ್ರೇಯಸಿಗಾಗಿ ಕಟ್ಟಿಸಿದ ಯಃಕಶ್ಚಿತ್ ಸ್ಮಾರಕ ! ಸ್ಮಾರಕವನ್ನು ಕೆಡವಿದ ನಂತರ ಅಲ್ಲೊಂದು ಕೇದಾರೇಶ್ವರ ದೇವಾಲಯ ನಿರ್ಮಿಸಿದರೆ ಸೊಗಸು ಹೆಚ್ಚುತ್ತದೆ, ಏಕೆಂದರೆ ಕೆಲವು ಉಪಹಾಸಕಾರರ ಇತಿಹಾಸದ ಪ್ರಕಾರ ಆ ಸ್ಮಾರಕವು ಮೊದಲಿಗೆ ಈಶ್ವರನ ಗುಡಿಯಾಗಿತ್ತು ! ನಗೆಹನಿಯಾಗಿ ಇದು ರಂಜನೆ ನೀಡುತ್ತದೆ, ಆದರೆ ಕೆಲವು ತಥಾಕಥಿತ "ಸಂಸ್ಕೃತಿ ವೀರರು" ಇದನ್ನು ಬಹಳ ಗಂಭೀರ ವಿದ್ವತ್ತಿನ ಹೆಸರಿನಲ್ಲಿ ಬೋಧಿಸುತ್ತಿದ್ದಾರೆ. ಆ ಮಟ್ಟಕ್ಕೆ ಕುಸಿದಿದೆ ನಮ್ಮ

ವಿದ್ವತ್ಪ್ರಪಂಚ. ಸಂಸ್ಕೃತಿಯೆಂದರೆ ಶಿವನ ಭಜನೆ ಎಂಬುದು ನಾಳಿನ ನಮ್ಮ ಸಾಂಸ್ಕೃತಿಕ ನೀತಿ ಯಾಗುತ್ತದೇನೋ ಯಾರಿಗೆ ಗೊತ್ತು! ಈಗಿನ ಭಾರತೀಯ ಇತಿಹಾಸ ಸಂಶೋಧನಾ ಸಮಿತಿಯು ಇನ್ನೂ ಎಂತೆಂತಹ ಸಂಶೋಧನೆಗಳನ್ನು ಮಾಡಿಸಲಿದೆಯೋ ಕಾದು ನೋಡೋಣ.

ಆದರೆ ವಿಷಯವನ್ನು ನಗೆಪಾಟಲಿಗೆ ಈಡಾಗಿಸಿ ಸುಮ್ಮನಿರುವಂತಿಲ್ಲ. ಏಕೆಂದರೆ, ಮುಂದಿನ ಬೆಳವಣಿಗೆಗಳಿಗೆ ಇದು ಪೂರ್ವ ಸೂಚನೆ. ಈಗಾಗಲೆ ನಮ್ಮ ಇತಿಹಾಸ ತಜ್ಞರೋ ಅಜ್ಞರೋ ರಾಜಸ್ತಾನದಲ್ಲಿ ನೆಹರು ಅವರ ಹೆಸರನ್ನು ಇಲ್ಲವಾಗಿಸಿದ್ದಾರೆ. ಶಾಲಾ ಪಠ್ಯಪುಸ್ತಕದಿಂದ ಹೆಸರು ಕಿತ್ತುಹಾಕಿದರೂ ವಿಶ್ವಸಂಸ್ಥೆಯ ಕಡತಗಳಲ್ಲಿ ಮತ್ತು ಜಗತ್ತಿನಾದ್ಯಂತ ನೈಜ ಇತಿಹಾಸದ ದಾಖಲೆಗಳಲ್ಲಿ ಆ ಹೆಸರು ಇದ್ದೇ ಇರುತ್ತದೆ. ತಾಜಮಹಲ್ ಇಲ್ಲದಂತೆ ಮಾಡಿ ನಂತರ ಇತಿಹಾಸದ ಗ್ರಂಥಗಳನ್ನು ರಿಪೇರಿ ಮಾಡುವ ಕೆಲಸ ಆರಂಭವಾಗುತ್ತದೆ. ಕಮ್ಯುನಿಸ್ಟ್ ನಾಯಕ ಎಸ್. ಎ. ಡಾಂಗೆ ೧೯೨೪ರಲ್ಲಿ ಬ್ರಿಟಿಷರ ಜೈಲಿಗೆ ತಳ್ಳಲ್ಪಟ್ಟು ಮೂರು ವರ್ಷ ಅಲ್ಲಿಯೇ ಇದ್ದಾಗ ಕೊಳೆತುಹೋಗಲಿಲ್ಲ, ಬದಲಾಗಿ ಪ್ರಬಲ ಇತಿಹಾಸ ವಿದ್ವಾಂಸನಾಗಿ ಹೊರಬಂದ. ಇಂದು ತಾಜಮಹಲ್ ಇಲ್ಲವಾಗಿಸುತ್ತಿರುವವರ ಅಪ್ಪ ಮತ್ತು ತಾತಂದಿರು ೧೯೨೪ರಲ್ಲಿ ಇತಿಹಾಸವನ್ನು ಓದಲೂ ಇಲ್ಲ, ಇತಿಹಾಸದ ವ್ಯಕ್ತಿಗಳಾಗಲೂ ಇಲ್ಲ. ಆದರೆ, ನಾಳೆ ನಮ್ಮ ಎನ್‌ಸಿಇಆರ್‌ಟಿ ಪಠ್ಯಪುಸ್ತಕ ಗಳಲ್ಲಿ ಆ ತಾತಂದಿರ ಮೊಮ್ಮಕ್ಕಳು ಸಿಂಧು ನಾಗರಿಕತೆಯ ಕರ್ತೃಗಳು ಮತ್ತು ಋಗ್ವೇದದ ಕರ್ತೃಗಳು ಒಬ್ಬರೇ ಎಂಬ ಘನಸಿದ್ಧಾಂತವನ್ನು ಪ್ರತಿಪಾದಿಸಿ ಮಕ್ಕಳ ತಲೆಗಳನ್ನು ತೊಟ್ಟಿ ಮಾಡಲಿದ್ದಾರೆ. ೧೯೨೪ರಿಂದ ೧೯೪೭ರವರೆಗೆ ಬ್ರಿಟಿಷರ ವಿರುದ್ಧ ಹೋರಾಡಲು ಒಂದು ಅಂಚಿಕಡ್ಡಿ ಯನ್ನು ಎತ್ತಿರದಿದ್ದ ಮಂದಿ ಸ್ವಾತಂತ್ರ್ಯವೀರರಾಗಿ ಪುಸ್ತಕಗಳಲ್ಲಿ ಕಂಗೊಳಿಸುತ್ತಾರೆ. ಇನ್ನೂ ಮುಂದೆ ಹೋಗಿ, ನಿಜವಾದ ಸ್ವತಂತ್ರ ಭಾರತವು ಅಸ್ತಿತ್ವಕ್ಕೆ ಬಂದಿದ್ದೇ ೨೦೧೪ರಲ್ಲಿ ಎಂಬ ಘೋಷಣೆ ಕೊಟ್ಟರೂ ಆಶ್ಚರ್ಯವಿಲ್ಲ. ನಮ್ಮ ದೇಶದ ಬೌದ್ಧಿಕ ಕಣಜದಲ್ಲಿದ್ದ ರಾಗಿಯು ರಾಜಕಾಲುವೆಗಳ ಚರಂಡಿ ನೀರು ತುಂಬಿ ದುರ್ವಾಸನೆ ಬೀರುತ್ತಿದೆ. ಇತಿಹಾಸವನ್ನು ಮಾಡದಿದ್ದರೇನು, ಇತಿಹಾಸ ಬರೆದರೆ ಸಾಕಲ್ಲವೆ? "ಭಾರತದಲ್ಲಿ ಮಾಡಿ" ಎಂಬ ಅಭಿಯಾನ ಸೊರಗಿ ಹೋದರೇನಂತೆ, ಭವ್ಯ ಭಾರತವನ್ನು ಮನಸ್ಸಿಗೆ ಬಂದಂತೆ ಪುಸ್ತಕಗಳಲ್ಲಿ ಬರೆದಿಡಲು ಬಾಡಿಗೆ ವಿದ್ವಾಂಸರು ಹೇಗೂ ಸಾಲಿನಲ್ಲಿ ನಿಂತಿದ್ದಾರಲ್ಲ! ಆದರೆ ಹತಾಶರಾಗುವ ಅಗತ್ಯವಿಲ್ಲ. ನೈಜ ಇತಿಹಾಸ ತಜ್ಞರು ಷಹಜಹಾನನನ್ನು ಮರೆಸದೆಯೇ ತಾಜಮಹಲ್ಲಿನ ಸೌಂದರ್ಯವನ್ನು ವರ್ಣಿಸಬಲ್ಲರು. ಅದನ್ನು ಕಟ್ಟಿದ ಭಾರತೀಯ ಕೈಗಳ ಕಲಾವಂತಿಕೆಯೇ ದುಡಿಮೆಗಾರರಿಗೆ ಒಂದು ಭವ್ಯ ಸ್ಮಾರಕ. ವಿದ್ಯಾರ್ಥಿಗಳು ಉತ್ತರ ಪ್ರದೇಶದ ಸರ್ಕಾರ ಪ್ರಕಟಿಸಿದ ಪಠ್ಯಪುಸ್ತಕಗಳನ್ನು ಮಾತ್ರವೇ ಓದುವುದಿಲ್ಲ; ಅವರು ಹಾರ್ವರ್ಡ್, ಮಾಸ್ಕೊ ಮತ್ತು ಕೇಂಬ್ರಿಜ್ ವಿಶ್ವವಿದ್ಯಾನಿಲಯಗಳು ಪ್ರಕಟಿಸಿರುವ ಪುಸ್ತಕಗಳನ್ನೂ ಓದುತ್ತಾರೆ. ವಿದ್ಯಾರ್ಥಿಗಳ ತಲೆಯಲ್ಲಿ ಮಿದುಳಿದೆ, ಅದು ಕಸದ ತೊಟ್ಟಿಯಲ್ಲ.

* * *

ಉತ್ತರ ಪ್ರದೇಶ ಸರಕಾರ ಪ್ರಕಟಿಸಿರುವ 'ಪ್ರವಾಸಿ ಕೈಪಿಡಿ'ಯಲ್ಲಿ ವಿಶ್ವವಿಖ್ಯಾತ, ಪ್ರಪಂಚದ ಅದ್ಭುತಗಳಲ್ಲಿ ಒಂದಾದ ತಾಜ್‌ಮಹಲ್ ಅನ್ನು ಕೈಬಿಡಲಾಗಿದೆ. ಇದು ಮುಖ್ಯಮಂತ್ರಿ ಯೋಗಿ ಆದಿತ್ಯಾನಾಥ ಸರಕಾರ ಬಂದಮೇಲೆ ಆದ ಬದಲಾವಣೆ. ಆನಂತರ ಅವರ ಪಕ್ಷದ ಶಾಸಕ ಸೋಮ್ ತಾಜ್‌ಮಹಲ್ ಕುರಿತ ಅವಹೇಳನಕಾರಿ ಹೇಳಿಕೆ ಸಾಕಷ್ಟು ಧೂಳೆಬ್ಬಿಸಿತು. ಇನ್ನೊಬ್ಬ ತಲೆಹರಟೆ ಶಾಸಕ ತಾಜ್‌ಮಹಲ್ ಇದ್ದ ಜಾಗದಲ್ಲಿ ದೇವಾಲಯವೊಂದಿತ್ತು ಎಂಬ ಹಳೆಯ ವಾದ ಮಂಡಿಸಿ, ಅದನ್ನು 'ತೇಜಸ್ ಮಹಲ್' ಎಂದು ಮರುನಾಮಕರಣ ಮಾಡಬೇಕು ಎಂದಿದ್ದಾನೆ. ಹಿಂದುತ್ವವಾದಿ ಉಗ್ರರು ಮೊಗಲಾಯಿ ಆಡಳಿತದ ಕಾಲದಲ್ಲಿ ನಿರ್ಮಿತವಾಗಿರುವ ಎಲ್ಲ ಸ್ಮಾರಕಗಳ ಮೇಲೂ ಕಣ್ಣಿರಿಸಿದ್ದಾರೆ. ಅಂಥವನ್ನೆಲ್ಲ ನಿರ್ಮೂಲ ಮಾಡುವುದೇ ಸಂಘಪರಿವಾರದ ಗುರಿ. ಅವೆಲ್ಲ ದೇಶಕ್ಕೆ ಕಳಂಕ. ಮೋದಿ ಸರಕಾರ ೨೦೧೪ರಲ್ಲಿ ಕೇಂದ್ರದಲ್ಲಿ ಅಧಿಕಾರ ವಹಿಸಿಕೊಂಡ ಮೇಲೆ ಭಾಜಪ ನಾಯಕರು, ಸಂಘಪರಿವಾರದ ಕಾರ್ಯಕರ್ತರು ಬೇಕಾದಷ್ಟು ಅವಾಂತರಗಳನ್ನು ಸೃಷ್ಟಿಸುತ್ತ ಬಂದಿದ್ದಾರೆ. ಗೋರಕ್ಷಣೆ, ಹಬ್ಬಹರಿದಿನ ಗಳಲ್ಲಿ ಮಾಂಸಾಹಾರಕ್ಕೆ ನಿಷೇಧ, ಅಲ್ಪಸಂಖ್ಯಾತರು ಮತ್ತು ದಲಿತರ ಮೇಲೆ ದಾಳಿ, ಲವ್ ಜಿಹಾದ್ ದಾಂಧಲೆ ಮುಂತಾದವೆಲ್ಲ ವಿಪರೀತವಾಗಿಬಿಟ್ಟಿದೆ. ಸರಕಾರ ಇಂಥವನ್ನೆಲ್ಲ ಕಂಡೂಕಾಣದ ಹಾಗೆ ಕಣ್ಣುಮುಚ್ಚಿ ಕುಳಿತಿದೆ.

ಮೋದಿ ಸರಕಾರ ಆಡಳಿತ ವಹಿಸಿಕೊಂಡ ಮೇಲೆ ಭಾರತವನ್ನು ಪ್ರಪಂಚದಲ್ಲಿ 'ನಂಬರ್ ಒನ್' ಆಗಿ ಮಾಡಲು ಹೊರಟಿದ್ದು ರಹಸ್ಯ ವೇನಲ್ಲ. ಅದಕ್ಕಾಗಿ ವರದಿಯೊಂದನ್ನು ಯಾ ಬ್ಲೂ ಪ್ರಿಂಟನ್ನು ತಯಾರಿಸಲು ಬಹಾಮಾಸ್ ನಲ್ಲಿರುವ ಕಂಪೆನಿ 'ಬೇಟಾಜಿ, ಮಾಮಾಜಿ, ಕಾಕಾಜಿ ಅಂಡ್ ಜೀಜಾಜಿ' ಎಂಬ ಸಂಸ್ಥೆಗೆ ವಹಿಸಿಕೊಟ್ಟಿತ್ತು. ಇದು ಗುಜರಾತ್ ಸಂಸ್ಥೆ ಎಂದು ಹೆಸರಿನಿಂದಲೇ ಗೊತ್ತಾಗುತ್ತದೆ. ಆ ಕಂಪೆನಿ ೫೬೦ ಪುಟಗಳ ದಸ್ತಾವೇಜೊಂದನ್ನು ತಯಾರಿಸಿದೆ ಯಂತೆ. ಅದನ್ನು ಸರಕಾರ ಗೋಪ್ಯವಾಗಿ ಕಾಪಾಡಿ ಕೊಂಡಿದೆ. ಅದು ಸೂಚಿಸಿರುವ ಒಂದು ಬೃಹತ್ ಸ್ಮಾರಕ 'ಗೋಮಾತೆಯ ಪುತ್ಥಳಿ' ಎಂಬ ವಿಷಯ ಸೋರಿಕೆಯಾಗಿದೆ. ಇದೊಂದು ಎವರೆಸ್ಟ್ ಶಿಖರ ವನ್ನೂ ಮೀರಿಸಿರುವಂಥದ್ದು. ಪ್ರಪಂಚದಲ್ಲೇ ಅತಿ ಎತ್ತರದ ಈ ವಿಗ್ರಹವು ೮,೮೪೯ ಮೀಟರುಗಳು ಇರುವುದು ಎಂದು ಅಂದಾಜು. ಇಂಥ ಅಗಾಧವಾದ ಪ್ರಕ್ರಿಯೆಯ ಸೃಷ್ಟಿಗೆ ತಗಲುವ ವೆಚ್ಚದ ಕುರಿತು ವರದಿಯಲ್ಲಿ ಪ್ರಸ್ತಾಪವಿಲ್ಲ. ಭಾಜಪ ಸರಕಾರಕ್ಕೆ ಅದರ ಚಿಂತೆ ಬೇಡ, ಗೋಮಾತೆಗೆ ಎಷ್ಟು ಖರ್ಚಾದರೂ ಸರಿಯೆ ಎಂದಿರಬೇಕು. ಅದೇ ವರದಿಯಲ್ಲೇ ಸರದಾರ ಪಟೇಲರ ಮೂರ್ತಿ ಸ್ಥಾಪನೆಯ ಪ್ರಸ್ತಾಪವೂ ಇದೆ. ಗುಜರಾತ್‌ನ ಸಮುದ್ರತೀರದಲ್ಲಿ ನಿರ್ಮಾಣ ವಾಗುವ ಈ ಮೂರ್ತಿ ೧೮೨ ಮೀಟರುಗಳಿದ್ದು ೨೯೮೯ ಕೋಟಿ ರೂಪಾಯಿಗಳಾಗುತ್ತವೆ. ಇದು ನೆಹರೂಗೆ ಪರ್ಯಾಯವಾಗಿ ಪಟೇಲರನ್ನು ಬಳಸಿಕೊಳ್ಳುವ ಹುನ್ನಾರ. ಗೋಮಾತೆ ವಿಗ್ರಹ ಎಲ್ಲಿ ಸ್ಥಾಪಿಸುವುದು ಎನ್ನುವ ಪ್ರಶ್ನೆ ಮೋದಿ ಸರಕಾರಕ್ಕೇ ಬಿಟ್ಟಿದೆ ವರದಿ. ಈ ಮಧ್ಯೆ ಉತ್ತರ ಪ್ರದೇಶದ ಯೋಗಿ ಸರಕಾರ ಅಯೋಧ್ಯೆಯಲ್ಲಿ ಬೃಹದಾಕಾರದ ಶ್ರೀರಾಮನ ಶಿಲ್ಪ ಕಲಾಕೃತಿ ಯೊಂದನ್ನು ಸ್ಥಾಪಿಸಲು ಯೋಜಿಸಿದೆ. ಈ ರಾಮನ ವಿಗ್ರಹದ ಎತ್ತರ ಸರ್ದಾರ್ ಪಟೇಲರ ಮೂರ್ತಿಗಿಂತ ಎತ್ತರವಾಗಿ ಇರುತ್ತದಂತೆ. ದೀಪಾವಳಿಯಂದು ಅಯೋಧ್ಯೆಯಲ್ಲಿ ಲಕ್ಷ ದೀಪೋತ್ಸವ ನಡೆಸಿರುವ ಯೋಗಿ ಕೋಟಿ ರಾಮ ಜಪ ಆಯೋಜಿಸಿದ್ದಾರೆ, ಅಂತೂ ಭಾಜಪ ಸರಕಾರದ ಅವಾಂತರಗಳಲ್ಲಿ ಇನ್ನೂ ಏನೇನು ಕಾದಿದೆಯೋ! ಒಂದೆಡೆ ಹಳೆಯ ಮೊಗಲ್ ಆಳ್ವಿಕೆಯ ಸ್ಮಾರಕಗಳ ಧ್ವಂಸ, ಇನ್ನೊಂದೆಡೆ ನವ ಹಿಂದುತ್ವದ ಪ್ರತೀಕಗಳ ನಿರ್ಮಾಣ! ಹೇಗಿದೆ ಕಸರತ್ತು?

* * *

ಮೂರು ವರ್ಷಗಳಲ್ಲಿ ಮೋದಿ–ಜೇಟ್ಲಿ–ಷಾ ಉಂಟುಮಾಡಿರುವ ಅನಾಹುತ ಅಷ್ಟಿಷ್ಟಲ್ಲ. ಸರಕಾರವೇ ಪ್ರಕಟಿಸಿರುವ ಅಂಕಿ ಅಂಶಗಳ ಪ್ರಕಾರ ಜೆಡಿಪಿ ತೀವ್ರವಾಗಿ ಕುಸಿದಿದೆ. ನೋಟು ರದ್ದತಿ, 'ಒಂದು ದೇಶ ಒಂದು ಕಾನೂನು' ಘೋಷಣೆ ಅಡಿಯಲ್ಲಿ, ತರಾತುರಿಯಲ್ಲಿ ಅಮಲಿಗೆ ತಂದಿರುವ 'ಜಿಎಸ್‌ಟಿ' ಆರ್ಥಿಕ ವಲಯದಲ್ಲಿ ಆತಂಕ ಉಂಟುಮಾಡಿದೆ. ಮುಂದಿನ ದಿನಗಳಲ್ಲಿ ಅರ್ಥವ್ಯವಸ್ಥೆಯೇ ಕುಸಿದುಬೀಳುವ ಸಂಭವದ ಬಗ್ಗೆ ಅರ್ಥಶಾಸ್ತ್ರಜ್ಞರು ಎಚ್ಚರಿಸಿದ್ದಾರೆ ಮತ್ತು ಚೇತರಿಕೆಗೆ ಸರಕಾರ ತುರ್ತು ಕ್ರಮಗಳನ್ನು ಕೈಗೊಳ್ಳುವುದು ಸೂಕ್ತ ಎಂದಿದ್ದಾರೆ. ಇವೆಲ್ಲ ಪ್ರತಿಪಕ್ಷಗಳ ಸಂಕುಚಿತ ಪ್ರವೃತ್ತಿಯ ಸೃಷ್ಟಿ ಎಂದು ಸೂತ್ರಧಾರಿ ತ್ರಿಮೂರ್ತಿಗಳು ತಳ್ಳಿಹಾಕಿಬಿಟ್ಟಿದ್ದಾರೆ. ಆದರೆ ಅವರ ಪಕ್ಷದವರೇ ಆಗಿರುವ ಕೆಲವು ಮಂದಿಯ ಎಚ್ಚರಿಕೆಯ ನುಡಿಗಳು ಸರಕಾರವನ್ನು ಪೇಚಿಗೆ ಸಿಕ್ಕಿಸಿವೆ. ಭಾಜಪ ವರಿಷ್ಠರ ನಿದ್ರೆ ಕೆಡಿಸಿವೆ. ಮೋದಿ ಹೇಳುವ ಹಾಗೆ ಟೀಕಾಕಾರರ ನಿದ್ರಾಭಂಗ ವಾಗಿಲ್ಲ. ಉದ್ದಿಮೆದಾರರಿಗೆ, ವ್ಯಾಪಾರಸ್ಥರಿಗೆ, ಗ್ರಾಹಕರಿಗೆ ಜಿಎಸ್‌ಟಿ ಬಿಸಿ ತಟ್ಟಿದೆ. ಇದಲ್ಲದೆ ಮೋದಿ–ಜೇಟ್ಲಿ–ಷಾ ಕಂಪೈನಿಗೆ ನಿದ್ದೆಗೆಡಿಸಿರುವುದು ಅವರ ಪಕ್ಷದವರೇ ಆದ ವಾಜಪೇಯಿ ಸರಕಾರ ದಲ್ಲಿ ಹಣಕಾಸಿನ ಸಚಿವರಾಗಿದ್ದ ಯಶವಂತ ಸಿನ್ಹಾ



## ಚಂಪಾ ಅವರಿಗೆ ಅಭಿನಂದನೆಗಳು...

ಮೈಸೂರಿನಲ್ಲಿ ಈ ತಿಂಗಳ ದಿನಾಂಕ ೨೪ರಿಂದ ೨೬ರವರೆಗೆ ನಡೆಯುವ ೮೩ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಗೊಂಡ ನಾಡಿನ ಹೆಮ್ಮೆಯ ಸಾಹಿತಿ, ಕನ್ನಡ ಚಳುವಳಿಗಾರರಾದ ಪ್ರೊ॥ ಚಂದ್ರಶೇಖರ ಪಾಟೀಲ ಅವರಿಗೆ 'ನವಕರ್ನಾಟಕ ಪ್ರಕಾಶನ' ಹಾಗೂ 'ಹೊಸತು'ವಿನ ಅಭಿನಂದನೆಗಳು. ಮುಂದಿನ ಸಂಚಿಕೆಯಲ್ಲಿ 'ಚಂಪಾ' ಸಂದರ್ಶನ ಪ್ರಕಟವಾಗಲಿದೆ.

ಆರ್ಥಿಕ ಅನಾಹುತಗಳ ಕುರಿತು ಎಬ್ಬಿಸಿರುವ ಧೂಳು. ಇವರ ಜೊತೆಗೆ ಮಾಜಿ ಸಚಿವ ಅರುಣ್ ಶೌರಿ, ಸಂಘಪರಿವಾರದ ಅರ್ಥಶಾಸ್ತ್ರಿ ಎಸ್. ಗುರುಮೂರ್ತಿ, ತರಲೆ ರಾಜಕಾರಣಕ್ಕೆ ಹೆಸರಾದ ಸುಬ್ರಹ್ಮಣ್ಯಸ್ವಾಮಿ ಕೈಜೋಡಿಸಿದ್ದಾರೆ. ರಿಸರ್ವ್ ಬ್ಯಾಂಕಿನ ಮಾಜಿ ಗವರ್ನರ್ ರಘುರಾಮ ರಾಜನ್ ಅರ್ಥವ್ಯವಸ್ಥೆಯ ಕುಸಿತ ವನ್ನು ಕುರಿತು ಎಚ್ಚರಿಸಿದ್ದಾರೆ. ಈ ಎಲ್ಲ ಟೀಕೆಗಳ ಹಿನ್ನೆಲೆಯಲ್ಲಿ ಮೋದಿ ಸರಕಾರ ತಾನೇ ಸೃಷ್ಟಿಸಿದ ಹದಗೆಟ್ಟ ಸ್ಥಿತಿಯಿಂದ ಹೊರಬರಲು ನೋಡುತ್ತಿದೆ. ನೋಟುರದ್ದತಿಯಂಥ ದುಸ್ಸಾಹಸ ಮೋದಿ ಸರಕಾರವನ್ನು ಅಲುಗಾಡಿಸುತ್ತಿದೆ.

ಮೂರು ವರ್ಷಗಳ ಅವಧಿಯಲ್ಲಿ ಪ್ರತಿಪಕ್ಷ ಗಳನ್ನು ಮೂಲೆಗೊತ್ತಿರುವುದನ್ನು ಬಿಟ್ಟರೆ ಭಾಜಪ ಸರಕಾರದ ಸಾಧನೆ ಬೇರೆ ಇಲ್ಲ. ದೇಶದಲ್ಲಿ ರೈತರ ಸ್ಥಿತಿ ಚಿಂತಾಜನಕವಾಗಿದೆ. ೨೦೧೫ರ ಸಾಲೊಂದರಲ್ಲೇ ಹನ್ನೆರಡು ಸಾವಿರ ರೈತರು ಆತ್ಮಹತ್ಯೆಗೀಡಾಗಿ ರುವುದೇ ಅದಕ್ಕೆ ಸಾಕ್ಷಿ. ಒಂದು ಕೋಟಿ ಉದ್ಯೋಗ ಸೃಷ್ಟಿಸುವ ಭರವಸೆ ನೀಡಿದ್ದ ಮೋದಿ ಕಂಗಾಲಾಗಿದ್ದಾರೆ. ಕಪ್ಪುಹಣವನ್ನು ತರುವ ವಿಚಾರ ಈಗ ಮೋದಿ ಕೈಬಿಟ್ಟಿದ್ದಾರೆಂದು ತೋರುತ್ತದೆ. ಆ ಬಗ್ಗೆ ಈಗ ಗೊತ್ತಿಲ್ಲ. ಸರ್ಕಾರಿ ವಲಯದ ಬ್ಯಾಂಕುಗಳ ಬಳಿ ಉದ್ಯಮಿಗಳಿಗೆ ಸಾಲ ನೀಡಲು ಹಣವೇ ಇಲ್ಲ. ನಿರುತ್ಪಾದಕ ಆಸ್ತಿಗಳೆಂಬ ಮರಳಿ ಬಾರದ ಕಾರ್ಪೊರೇಟ್ ಸಾಲಗಳು ಹಾಗೇ ಸ್ಥಗಿತ ಗೊಂಡಿವೆ. ಮಹದಾಕಾಂಕ್ಷೆಯ 'ಭಾರತದಲ್ಲೇ ತಯಾರಿಸಿ' ಯೋಜನೆ ಕಾಗದದ ಮೇಲೇ ಉಳಿದಿದೆ. ಒಂದು ಅಂಕಿಅಂಶದ ಪ್ರಕಾರ ಭಾರತದ ಶೇಕಡ ಒಂದರಷ್ಟು ಜನರ ಕೈಯಲ್ಲಿದೆ ದೇಶದ ಶೇಕಡ ೫೮.೪ರಷ್ಟು ಸಿರಿಸಂಪತ್ತು. ನೂರು ಮಂದಿ ಬಳಿ ಇರುವ ಸಂಪತ್ತು ಶೇಕಡ ೬೦-೭೦ರಷ್ಟು ಜನರ ಬಳಿ ಇರುವ ಆಸ್ತಿಪಾಸ್ತಿಗೆ ಸಮ. ಒಂದು ಲೆಕ್ಕಾಚಾರದ ಪ್ರಕಾರ ಉದ್ಯಮಿ ಮುಕೇಶ್ ಅಂಬಾನಿ ಬಳಿ ಇರುವ ಸಂಪತ್ತು ದೇಶದ ೫೦ ಕೋಟಿ ಜನರ ಆಸ್ತಿಪಾಸ್ತಿಗೆ ಸಮ. ಮೋದಿ ರಾಜ್ಯದಲ್ಲಿ ಅಂಬಾನಿ-ಅದಾನಿ ಯವರದ್ದೇ ದರ್ಬಾರು. ಇದರಿಂದ ಮೋದಿ ಸರಕಾರ ಯಾರ ಪರವಾಗಿದೆ ಎಂಬುದು ಅರ್ಥವಾಗುತ್ತದೆ, ಜನಪರವಾಗಿಯಂತೂ ಇಲ್ಲ. ಆದರೂ ಸಾಧನೆಗಳ ಕುರಿತು ಅಬ್ಬರ ಮಾತ್ರ ಕಮ್ಮಿಯಾಗಿಲ್ಲ.

✶ ✶ ✶

ವಿಶ್ವಸಂಸ್ಥೆಯ ಕಚೇರಿಯನ್ನು ಅಮೆರಿಕದ ನ್ಯೂಯಾರ್ಕ್ ನಗರದಲ್ಲೇ ಉಳಿಸಿಕೊಳ್ಳಲು ಅಮೆರಿಕ ಸರಕಾರವು ಅಂದು ಒಪ್ಪಿಕೊಂಡಿದ್ದ ವಂತಿಗೆ ಹಣವನ್ನು ಎಂದೂ ಪೂರ್ಣವಾಗಿ ಸಂದಾಯ ಮಾಡಿಲ್ಲ. ಅದು ವಿಶ್ವಸಂಸ್ಥೆಗೆ ಕೊಡಬೇಕಾಗಿರುವ ಬಾಕಿ ಬೆಟ್ಟದಷ್ಟು ಬೆಳೆದಿದೆ. ಸಂಸ್ಥೆ ಕಚೇರಿಯನ್ನು ಉಳಿಸಿಕೊಂಡಿರುವುದರಿಂದ ಅಮೆರಿಕ ಬೇಕಾದಷ್ಟು ವರಮಾನ ಪಡೆದು ಕೊಳ್ಳುತ್ತಿದೆ. ವಿಶ್ವಸಂಸ್ಥೆಯ ಅಂಗಸಂಸ್ಥೆಗಳಿಗೂ ಕೂಡ ಅಮೆರಿಕ ತನ್ನ ಪಾಲನ್ನು ನೀಡದೆ ಬಾಕಿ ಉಳಿಸಿಕೊಂಡಿದೆ. ಅದು ಒಪ್ಪಿಕೊಂಡಿರುವ ಹಣವನ್ನು ಪಾವತಿ ಮಾಡಿದರೆ ಎಷ್ಟೋ ಯೋಜನೆಗಳು ಕಾರ್ಯಗತವಾದೀತು. ಆದರೆ ಭಂಡತನದಿಂದ ಅಮೆರಿಕ ಮುಂದುವರಿಯುತ್ತಿದೆ. ಡೋನಾಲ್ಡ್ ಟ್ರಂಪ್ ಅಧ್ಯಕ್ಷ ಪದವಿಗೇರಿದ ಮೇಲೆ 'ಅಮೆರಿಕ ಮೊದಲು' ಹೆಸರಿನಲ್ಲಿ ಅಮೆರಿಕ ಒಂದೊಂದಾಗಿ ಹೊಣೆಗಾರಿಕೆಯಿಂದ ಕಳಚಿ ಕೊಳ್ಳುತ್ತಿದೆ. ಅಷ್ಟೇ ಕಿತಾಪತಿಯನ್ನು ಹೆಚ್ಚಿಸುತ್ತಿದೆ. ಅಮೆರಿಕ ಪರಿಸರ ಮಾಲಿನ್ಯ ಹಾಳುಗೆಡವುದರಲ್ಲಿ ಅಗ್ರಸ್ಥಾನದಲ್ಲಿದೆ. ಈ ಬಗ್ಗೆ ಒಂದು ಅಂತರ ರಾಷ್ಟ್ರೀಯ ಒಪ್ಪಂದಕ್ಕೆ ಬರಲು ಅಡ್ಡಗಾಲು ಹಾಕುತ್ತಿದ್ದುದು ಕೂಡ ಆ ದೇಶವೇ. ಬೇಕಾದಷ್ಟು ಜುಗ್ಗಾಟವಾದ ಮೇಲೆ ಆಗಿದ್ದು ಪ್ಯಾರಿಸ್ ಒಪ್ಪಂದ. ಟ್ರಂಪ್ ಬಂದಮೇಲೆ ಈ ಒಪ್ಪಂದದಿಂದ ಅಮೆರಿಕ ಹೊರಬಂದಿತು. ಇದು ಮೊದಲ ಹೆಜ್ಜೆ. ಈಗ ಯುನೆಸ್ಕೊದಿಂದ ಹೊರಬರುತ್ತಿದೆ. ಈ ತೀರ್ಮಾನವನ್ನು ಟ್ರಂಪ್ ಈಚೆಗೆ ಪ್ರಕಟಿಸಿದ್ದಾರೆ. ಈ ಸಂಸ್ಥೆಗೆ ಅಮೆರಿಕ ಕೊಡಬೇಕಾಗಿರುವ ಬಾಕಿ ಸಾಕಷ್ಟಿದೆ. ಇನ್ನೂ ಯಾವ ಯಾವ ಸಂಸ್ಥೆಯಿಂದ ಕಾಲ್ತೆಗೆಯುವುದೋ ನೋಡಬೇಕು. ಇದು ಒಂದು ಕಡೆಯಾದರೆ ದುರಾಕ್ರಮಣ ನೀತಿಗೆ ಮಾತ್ರ ಯಾವ ಕಡಿವಾಣವೂ ಇಲ್ಲ. ಉತ್ತರ ಕೊರಿಯಾದ ಕುರಿತ ಯುದ್ಧೋನ್ಮಾದ ಹಳೆಯ ಕತೆಯಾಗಿದೆ. ಈಗ ಹೊಸದಾಗಿ ಇರಾನಿನ ಕಾಲು ಕೆರೆಯ ತೊಡಗಿದ್ದಾರೆ ಟ್ರಂಪ್ ಮಹಾಶಯ. ಮಾಜಿ ಅಧ್ಯಕ್ಷ ಬರಾಕ್ ಒಬಾಮಾ ಸುದೀರ್ಘ ಕಾಲ ನಡೆಸಿದ ಸಂಧಾನಗಳ ಪರಿಣಾಮವಾಗಿ ಇರಾನಿನ ನ್ಯೂಕ್ಲಿಯರ್ ಕಾರ್ಯಕ್ರಮದ ಕುರಿತು ಒಪ್ಪಂದ ಮಾಡಿಕೊಂಡು, ಆರ್ಥಿಕ ದಿಗ್ಬಂಧನವನ್ನು ತೆಗೆದು ಹಾಕಿದ್ದರು. ಈಗ ಟ್ರಂಪ್ ಅದನ್ನು ರದ್ದುಗೊಳಿಸಿ ಮತ್ತೆ ದ್ವೇಷ ಸಾಧನೆಗೆ ಹೊರಟಿದ್ದಾರೆ.

✶ ✶ ✶

ಮುಂದಿನ ವರ್ಷದ ಆದಿಯಲ್ಲಿ ಕರ್ನಾಟಕ ರಾಜ್ಯದಲ್ಲಿ ನಡೆಯುವ ಚುನಾವಣೆಗಳು ಕೈ ಪಾಳ್ಯಕ್ಕೆ ಅಗ್ನಿಪರೀಕ್ಷೆಯಾಗಲಿವೆ. ಶತಾಯಗತಾಯ ಓರಪ್ಪೇರಲು ಭಾಜಪ ರಣಕಹಳೆಯೂದಿದೆ. ಮಾಜಿ ಪ್ರಧಾನಿ ದೇವೇಗೌಡರ ಪಕ್ಷ ಜೆಡಿಎಸ್‌ನ ಪ್ರಾಬಲ್ಯವನ್ನು ಯಾರೂ ಕಡೆಗಣಿಸುವ ಹಾಗಿಲ್ಲ. ಮೂರೂ ಪಕ್ಷಗಳು ಚುನಾವಣೆಯ ಸಿದ್ಧತೆಯಲ್ಲಿ ತೊಡಗಿದ್ದು, ಕೆಸರೆರಚಾಟ ಈಗಲೇ ಪ್ರಾರಂಭವಾಗಿ ಬಿಟ್ಟಿದೆ. ಈ ಪಕ್ಷದಿಂದ ಆ ಪಕ್ಷಕ್ಕೆ ಪರದಾಟ ಶುರು ವಾಗಿದೆ. ಚುನಾವಣೆ ಹತ್ತಿರವಾಗುತ್ತಿದ್ದ ಹಾಗೆ, ವಿವಿಧ ಪಕ್ಷಗಳ ಅಭ್ಯರ್ಥಿಗಳ ಪಟ್ಟಿ ಹೊರಬೀಳುವ ಸಮಯದಲ್ಲಿ ಈ ಹಾರಾಟ ಇನ್ನಷ್ಟು ವರ್ಧಿಸುತ್ತದೆ. ರಾಜ್ಯ ಕಾಂಗ್ರೆಸ್ ಇನ್ನೂ ಭ್ರಮಾಲೋಕದಲ್ಲಿದೆಯೇ ಹೊರತು, ವಾಸ್ತವ ಜಗತ್ತಿಗೆ ಬಂದಂತೆ ತೋರುತ್ತಿಲ್ಲ, ಗೆಲುವಿನ ಲೆಕ್ಕಾಚಾರದಲ್ಲೇ ಇದೆ. ಸಿದ್ದರಾಮಯ್ಯ ಸರಕಾರ ನಾಲ್ಕು ವರ್ಷಗಳಲ್ಲಿ ಏನೂ ಪಾಠ ಕಲಿತಂತೆ ತೋರುತ್ತಿಲ್ಲ, ಅದು ಯಾವತ್ತಿನ ನಿರ್ಲಕ್ಷ್ಯ ತೋರುತ್ತದೆ. ಮುಂದೇನಾಗುತ್ತದೋ ನೋಡೋಣ.

ಈ ಮಧ್ಯೆ ರಾಜ್ಯದಲ್ಲಿ, ಮುಖ್ಯವಾಗಿ ರಾಜಧಾನಿ ಬೆಂಗಳೂರಿನಲ್ಲಿ ಸುರಿದ ಮಳೆ ಸೃಷ್ಟಿಸಿದ ಅನಾಹುತ ಮಾತ್ರ ಅಷ್ಟಿಷ್ಟಲ್ಲ. ಇದು ಆಡಳಿತದ ನಿಷ್ಕ್ರಿಯೆಯನ್ನು ಬಯಲು ಮಾಡಿದೆ. ರಾಜ್ಯದಲ್ಲಿ ಮಳೆಯಿಂದಾಗಿ ಸಾವುನೋವುಗಳು ಸಂಭವಿಸಿ, ಜನಜೀವನ ಅಸ್ತವ್ಯಸ್ತಗೊಂಡಿದ್ದು ಎಲ್ಲರಿಗೂ ತಿಳಿದಿರುವ ವಿಚಾರ. ಇದೇನೂ ಹೊಸದಲ್ಲ. ಪ್ರತಿವರ್ಷ ಮಳೆಗಾಲದಲ್ಲೂ ಒಂದೇ ಕಥೆ. ಮುಂದಿನ ಮಳೆಗಾಲದವರೆಗೆ ಸರಕಾರಿ ಯಂತ್ರ ತೂಕಡಿಸುತ್ತದೆ. ಬೆಂಗಳೂರು ನಗರದಲ್ಲಂತೂ ಮಳೆಯಿಂದಾದ ಅವಾಂತರ ಹೇಳತೀರದು. ರಾಜಾಕಾಲುವೆಗಳು ಎಂದಿನಂತೆ ತುಂಬಿ ರಸ್ತೆಗಿಳಿದು ಮನೆಮಠಗಳಿಗೂ ನುಗ್ಗುವುದು, ಸಂಚಾರದ ದಟ್ಟಣೆ, ವಾಹನಗಳ ಮುಳುಗಡೆ ಎಲ್ಲ ಮಾಮೂಲು. ಎಲ್ಲದಕ್ಕಿಂತ ಹೆಚ್ಚಾಗಿ ರಸ್ತೆ ಈ ಬಾರಿ ಹಾಳಾಗಿ ರುವಷ್ಟು ಹಿಂದೆಂದೂ ಆಗಿರಲಿಲ್ಲ ಎನ್ನಬೇಕು. ಟ್ರ್ಯಾಫಿಕ್ ಜಾಮಿನಲ್ಲಿ ಗಂಟೆಗಟ್ಟಲೆ ಕಾಯುವುದು ಬೆಂಗಳೂರಿಗರ ಹಣೆಬರಹ. ರಸ್ತೆ ರಿಪೇರಿ ಕಾರ್ಯ ರಾತ್ರೆಯ ವೇಳೆ ಮಾಡುವ ಪರಿಪಾಠವನ್ನು ನಮ್ಮವರು ಇನ್ನೂ ರೂಢಿಸಿಕೊಂಡಿಲ್ಲ. ಹಾಗಾಗಿ ಯಾವೊಂದು ರಸ್ತೆಯಲ್ಲಿ ಚಲಿಸಿದರೂ ಸಂಚಾರ ದಟ್ಟಣೆ ಕಟ್ಟಿಟ್ಟ ಬುತ್ತಿ. ಈಚೆಗೆ ಒಂದು ದಿನ ಮೆಜೆಸ್ಟಿಕ್‌ನಿಂದ ಬಸವನಗುಡಿಗೆ ಬರಲು ಎರಡೂವರೆ ಗಂಟೆ ಹಿಡಿಯಿತು. ದಿನವೂ ಕಚೇರಿಗೆ ಹೋಗಿಬರುವವರ ಪಾಡೇನು ಎನ್ನುವುದನ್ನು ಊಹಿಸಿಕೊಳ್ಳಬಹುದು. ನಗರ ವಾಸದಲ್ಲಿ ಈ ಬವಣೆ ತಪ್ಪಿದ್ದಲ್ಲ ಎಂದುಕೊಳ್ಳಬೇಕು, ಅಷ್ಟೆ. ಅಧಿಕಾರಿಗಳು, ಇಂಜಿನಿಯರುಗಳು, ಕಂಟ್ರಾಕ್ಟರುಗಳು ಮಾತ್ರ ಇಂಥ ಅವಾಂತರಗಳಿಂದ ನೆಮ್ಮದಿಯಿಂದಿರುತ್ತಾರೆ ಜೇಬು ತುಂಬಿಕೊಂಡು.




### ಆಧುನಿಕ ದೇವರುಗಳು ಮತ್ತವರ ಅವತಾರಗಳು

ಗುರುಮಿತ್‌ಸಿಂಗ್ ಪ್ರಕರಣಕ್ಕೆ ಸಂಬಂಧಿಸಿದಂತೆ ಹರಿಯಾಣದಲ್ಲಿ ನಡೆದ ಹಿಂಸಾಚಾರ ಹಾಗೂ ಪ್ರಾಣಹಾನಿ ಆಧುನಿಕ ನಾಗರಿಕ ಸಮಾಜವು ಎತ್ತ ಸಾಗುತ್ತಿದೆ ಎಂದು ಯೋಚಿಸುವಂತೆ ಮಾಡಿದೆ.

ವಿಜ್ಞಾನ ಹಾಗೂ ತಂತ್ರಜ್ಞಾನ ಕ್ಷೇತ್ರಗಳಲ್ಲಿ ಉತ್ತಮ ಸಾಧನೆಗಳನ್ನು ಮಾಡುತ್ತಿರುವ ಭಾರತದಲ್ಲಿ ಧಾರ್ಮಿಕತೆ ಹಾಗೂ ಆಧ್ಯಾತ್ಮಿಕತೆಯ ಹೆಸರಿನಲ್ಲಿ ನಡೆಯುತ್ತಿರುವ ವಿಪರೀತಗಳು ಚಿಂತನೆಗೀಡು ಮಾಡುತ್ತಿವೆ. ಜ್ಯೋತಿಷ್ಯ, ಮಾಟಮಂತ್ರ ಮುಂತಾದವುಗಳ ಹೆಸರಿನಲ್ಲಿ ನಡೆವ ಅನೇಕ ವಿಚಿತ್ರ ಆಚರಣೆಗಳಿಂದ ಹಿಡಿದು ನರಬಲಿಯನ್ನು ಮಾಡಿಸುವ ಮಹಾತ್ಮರು ಮತ್ತು ಅವನ್ನು ನಂಬುತ್ತಾ ಬಂದಿರುವ ಜನರ ವಿಪರೀತ ವರ್ತನೆಗಳು ಮತ್ತಷ್ಟು ವಿಭಿನ್ನ ರೂಪದಲ್ಲಿ ಆಧುನಿಕ ಜಗತ್ತಿನಲ್ಲೂ ಸವಾಲಾಗಿ ನಿಂತಿರುವುದು ಆಘಾತಕಾರಿ ಬೆಳವಣಿಗೆಯಾಗಿದೆ.

ತನ್ನ ಮಿತಿಗೆ ಮೀರಿದ ಶಕ್ತಿಗೆ ಮನುಷ್ಯ ಕೊಟ್ಟುಕೊಂಡ ಹೆಸರು "ದೇವರು". ಜಗತ್ತಿನಲ್ಲಿ ಈ ವಿಚಾರ ಹಲವು ತೆರನಾಗಿವೆ. ಎಲ್ಲಾ ಧರ್ಮಗಳು, ಜಾತಿಗಳಿಗೂ ದೇವರದೇ ವಿವಿಧ ರೂಪ, ನಾಮಗಳಿವೆ. ಒಂದು ಮಟ್ಟಿಗೆ ಈ ನಂಬಿಕೆ ಮಾನಸಿಕ ಸ್ಥೈರ್ಯವಾಗಿರುವುದು, ನೈತಿಕ ಶಕ್ತಿಯಾಗಿರುವುದು ಸುಳ್ಳಲ್ಲ. ಆದರೆ ಈ ಮುಗ್ಧ ನಂಬಿಕೆಗಳನ್ನೇ ಬಂಡವಾಳ ಮಾಡಿಕೊಳ್ಳುವ ಧೂರ್ತತನದಿಂದ "ದೇವಮಾನವರು" ಹುಟ್ಟಿಕೊಳ್ಳುತ್ತಾರೆ, ಅನಾಚಾರಗಳು ನಡೆಯುತ್ತವೆ.

ಯಾವುದೋ ಸಣ್ಣ ಹಳ್ಳಿಯ ಮಾಟಗಾರರೋ, ಮಾಂತ್ರಿಕರೋ, ಜ್ಯೋತಿಷಿಗಳಿಂದಲೋ ಹಿಡಿದು ನಗರಗಳಲ್ಲಿನ ಸ್ವಯಂಘೋಷಿತ ಹೈಟೆಕ್ ದೇವಮಾನವರವರೆಗೂ ಇದರ ವ್ಯಾಪ್ತಿ ಹರಡಿಕೊಂಡಿದೆ. ಇದರ ಬಲಿಪಶುಗಳು ಎಲ್ಲಾ ವರ್ಗದ, ಎಲ್ಲಾ ವಯೋಮಾನದ ಜನರು.

ಸಾವಿರಾರು ವರ್ಷಗಳಿಂದಲೂ ಮಾನಸಿಕ ಸ್ಥೈರ್ಯ ಹಾಗೂ ಬೆಂಬಲಗಳಿಗಾಗಿ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಹಲವು ರೀತಿಯ ಧಾರ್ಮಿಕ, ಆಧ್ಯಾತ್ಮಿಕ ಶ್ರದ್ಧೆ-ನಂಬಿಕೆಗಳನ್ನು ಜನರು ಮೈಗೂಡಿಸಿಕೊಂಡು ಬಂದಿರುವುದು ಸರಿಯಷ್ಟೆ. ಆದರೆ ಇವುಗಳ ದಿಕ್ಕುತಪ್ಪಿಸಿ ಮಾನಸಿಕ ದಾಸ್ಯಕ್ಕೆ ಮುಗ್ಧ ಜನರನ್ನು ದೂಡುತ್ತಿರುವವರಿಂದಾಗಿ ಇಷ್ಟೆಲ್ಲಾ ಅನರ್ಥಗಳು ನಡೆಯುತ್ತಿವೆ.

ಮನಸೋಇಚ್ಛೆ ವ್ಯಾಖ್ಯಾನಗಳನ್ನು ಪಡೆಯುತ್ತಾ ಬಂದಿರುವ ಗುರು, ಶ್ರದ್ಧೆ, ಶರಣಾಗತಿ ಎಂಬಿತ್ಯಾದಿ ವಿಷಯಗಳು ಒಂದು ರೀತಿ ಭ್ರಮಾಧೀನತೆಯನ್ನು ಸೃಷ್ಟಿಸಿ ಜನರನ್ನು ಮೂರ್ಖರನ್ನಾಗಿ ಮಾಡುತ್ತಿರುವುದು 'ಅಮಾಯಕ ಅನುಯಾಯಿ'ಗಳ ಹುಟ್ಟಿಗೆ ಕಾರಣವಾಗಿದೆ.

ಜನರ ಮುಗ್ಧತೆಯನ್ನು ದುರುಪಯೋಗಪಡಿಸಿಕೊಳ್ಳುವ ಸ್ವಯಂಘೋಷಿತ ಗುರುಗಳ ಹಾಗೂ ಅಮಾಯಕ ಅನುಯಾಯಿಗಳ ಹುಟ್ಟಿಗೆ ಕಾರಣವಾಗುವ ಸಾಮಾಜಿಕ ಅಂಶಗಳು ನಮ್ಮ ದೇಶದಲ್ಲಿ ಸಾಕಷ್ಟಿವೆ. ಬಡತನ, ನಿರುದ್ಯೋಗ, ಅನಕ್ಷರತೆ, ಶೋಷಿತ-ಶೋಷಕ ಸಮುದಾಯಗಳು, ಸ್ತ್ರೀಯರ ದಯನೀಯ ಸ್ಥಿತಿಗತಿಗಳು, ಕೌಟುಂಬಿಕ ಸಮಸ್ಯೆಗಳು, ಸಂಪ್ರದಾಯಗಳು, ವಾಸ್ತವ ಬದುಕಿನ ಸವಾಲುಗಳನ್ನು




ಎದುರಿಸುವ ಮಾನಸಿಕ ಕ್ಷಮತೆ ಇಲ್ಲದಿರುವುದು... ಇತ್ಯಾದಿ. ಹಾಗೆಯೇ ಶ್ರೀಮಂತರ ದುರಾಸೆ, ವ್ಯಾಮೋಹಗಳು ಕಾರಣವಾಗುತ್ತವೆ. ಜಾತೀಯತೆ ತೋರುವ ಭೇದಭಾವಗಳನ್ನು ಆಧ್ಯಾತ್ಮಿಕ ಪಂಥಗಳಾಗಲೀ, ಮಠ, ಆಶ್ರಮಗಳಾಗಲೀ ಸಾಮಾನ್ಯವಾಗಿ ಮಾಡುವುದಿಲ್ಲವಾದ ಕಾರಣ ಹೆಚ್ಚು ಜನರು ಅಂತಹ ಒಂದು ಸಮಾನತೆಗಾಗಿಯೂ ಅತ್ತ ಮುಖ ಮಾಡುತ್ತಾರೆ.

ಇದಕ್ಕೆ ಪುಷ್ಟಿ ನೀಡುವಂತಹ ರಾಜಕೀಯ ಕಾರಣಗಳೂ ಕಂಡುಬರುತ್ತವೆ. ಬಹಳಷ್ಟು ದೇವಮಾನವರು ವೋಟ್ ಬ್ಯಾಂಕುಗಳ ಒಡೆಯರಾಗಿರುವುದು, ಕಾಳಧನದ ರಕ್ಷಕರಾಗಿರುವುದು ಇಂದು ಮುಚ್ಚುಮರೆಯ ವಿಷಯವಾಗಿ ಉಳಿದಿಲ್ಲ. ಉನ್ನತ ಹುದ್ದೆಯ, ಉನ್ನತ ಸ್ತರದ ಗಣ್ಯರ ದಂಡೇ ಕೋಟೆಯಂತೆ ನಿಂತು ಪೋಷಿಸುತ್ತಿರುವುದು, ಭದ್ರತೆಯನ್ನು ಒದಗಿಸುತ್ತಿರುವುದು ಇನ್ನೊಂದು ರೀತಿಯ ವಿಪರ್ಯಾಸವಾಗಿದೆ.

ಆಧ್ಯಾತ್ಮಿಕ ಉದ್ದೇಶವನ್ನೇ ಮುಖ್ಯವಾಗುಳ್ಳ ಸಾಮಾಜಿಕ ಸೇವೆಯಲ್ಲಿ ತೊಡಗಿರುವ ಹಲವಾರು ಆಶ್ರಮಗಳು ಇರುವಂತೆಯೇ ಧಾರ್ಮಿಕತೆಯ ಸೋಗಿನಲ್ಲಿ ಜನರನ್ನು, ಸರ್ಕಾರವನ್ನು ವಂಚಿಸುವ ದೇವಮಾನವರೂ ಸಾಕಷ್ಟು ಸಂಖ್ಯೆಯಲ್ಲಿದ್ದಾರೆ.

ಗುರುಗಳು, ದೇವಮಾನವರು, ಬಾಬಾಗಳು ಇನ್ನಿತರ ಏನೇ ಹೆಸರುಗಳಿಂದ ತಮ್ಮನ್ನು ಕರೆದುಕೊಂಡು ಜನರ ನಂಬಿಕೆಗಳೊಡನೆ ಆಟವಾಡುತ್ತಾ ಆರ್ಥಿಕವಾಗಿ ಬಲಾಢ್ಯರಾಗುತ್ತಿರುವ ಇಂತಹ ಅಪರೋಕ್ಷ ಸಮಾಜಘಾತಕ ವ್ಯಕ್ತಿಗಳ ಮೇಲೆ ನಿಯಂತ್ರಣವಾಗಲೀ, ನೀತಿನಿಯಮಗಳ ಲಗಾಮಾಗಲೀ, ಕಾನೂನಿನ ಕಡಿವಾಣವಾಗಲೀ ಇದೆಯೇ? ಇದ್ದರೂ ಅದು ಎಷ್ಟರಮಟ್ಟಿಗೆ ಪರಿಣಾಮಕಾರಿಯಾಗಿದೆ ಎಂಬುದನ್ನು ಇಂದಿನ ಪರಿಸ್ಥಿತಿಗಳೇ ವಿವರಿಸಬಲ್ಲವು. ಧಾರ್ಮಿಕ ಆಚರಣೆ ಅಥವಾ ಆಧ್ಯಾತ್ಮಿಕ ಸಾಧನೆ ಎಂಬ ಹೆಸರು ಬಳಸಿಕೊಂಡು ಇಂತಹ ಸ್ಥಳಗಳ ಒಳಗೆ ಏನು ನಡೆಯುತ್ತದೆ ಎಂಬುದು ಯಾರಿಗೂ ತಿಳಿಯದಾದಾಗ ಏನು ಬೇಕಾದರೂ ನಡೆಯಬಹುದು ಎಂಬುದನ್ನು ಹಲವಾರು ಪ್ರಕರಣಗಳು ಕನ್ನಡಿ ಹಿಡಿದಂತೆ ತೋರಿಸಿವೆ.

ಏಕೆಂದರೆ ಸಾರ್ವಜನಿಕರಿಗಾಗಲೀ, ಸರ್ಕಾರಕ್ಕಾಗಲೀ ಮಠ, ಆಶ್ರಮಗಳ ಆಪ್ತ ವಲಯಗಳಲ್ಲಿ ಯಾರಿದ್ದಾರೆ, ಏನೇನು ನಡೆಯುತ್ತದೆ ಎಂಬುದನ್ನು ತಿಳಿದುಕೊಳ್ಳುವ ಪಾರದರ್ಶಕ ವ್ಯವಸ್ಥೆ ಇಲ್ಲವಾಗಿದೆ. ಭಕ್ತರ ಮಾಹಿತಿಯಾಗಲೀ, ಆರ್ಥಿಕ ವ್ಯವಹಾರಗಳ ಮಾಹಿತಿಯಾಗಲೀ, ಆಚರಣೆ-ಪದ್ಧತಿಗಳ ಮಾಹಿತಿಯಾಗಲೀ ನಿಷ್ಪಕ್ಷಪಾತವಾಗಿ ಪಾರದರ್ಶಕವಾಗಿ ಸಿಗುತ್ತಿಲ್ಲ.

ಯಾವುದೇ ಕಚೇರಿಗಳ ವ್ಯವಹಾರಗಳನ್ನು ತಿಳಿಯಲು ಇಂದು ಕಾನೂನುಬದ್ಧ ಅವಕಾಶಗಳು ಸಾಕಷ್ಟಿದ್ದರೂ ಧಾರ್ಮಿಕ, ಆಧ್ಯಾತ್ಮಿಕ ಸಂಸ್ಥೆಗಳ ಚಲನವಲನ, ಚಟುವಟಿಕೆಗಳ ಸಂಪೂರ್ಣ ಮಾಹಿತಿ ಸಿಗದಿರುವುದು ಹಾಗೂ ಮಾಹಿತಿಗಳನ್ನು ತಿಳಿಯಲು, ತಿಳಿಸಲು ಹೋಗುವ ಸಾಮಾನ್ಯ ಜನರಿಗಾಗಲೀ, ಮಾಧ್ಯಮದವರಿಗಾಗಲೀ ಭಯ ಹುಟ್ಟಿಸುವಂತಹ ಸನ್ನಿವೇಶಗಳಿರುವುದು ಕಳವಳಕಾರಿ ಅಂಶವಾಗಿದೆ.

ಆಶ್ರಮಗಳಲ್ಲಿ ವಾಸಿಸುವ ಭಕ್ತರ ಮಾಹಿತಿ ಹಾಗೂ ರಕ್ಷಣೆಯ ಬಗ್ಗೆ ನೀತಿನಿಯಮಗಳನ್ನು ರೂಪಿಸುವುದು ಒಳ್ಳೆಯದು. ಯಾವುದೇ ಧಾರ್ಮಿಕ, ಆಧ್ಯಾತ್ಮಿಕ ಸಂಸ್ಥೆಗಳಾಗಲೀ ಅದರ ಎಲ್ಲಾ ರೀತಿಯ ಚಲನವಲನಗಳೂ, ಚಟುವಟಿಕೆಗಳೂ ಪಾರದರ್ಶಕವಾದರೆ ಅಮಾಯಕ ಅನುಯಾಯಿಗಳನ್ನು, ಮುಗ್ಧ ಭಕ್ತರನ್ನು ವಂಚಕರಿಂದ ರಕ್ಷಿಸಬಹುದು.

ಮೈಸೂರು **ಪಿ. ಶಿಲ್ಪಾ**

ಸರ್ಕಾರದಿಂದ ಬರುವಂತಹ ಅನೇಕ ಯೋಜನೆಗಳು ಸರಿಯಾದ ಫಲಾನುಭವಿಗಳಿಗೆ ದೊರೆಯದೆ ಅವು ಕೇವಲ ಉಳ್ಳವರಿಗೆ ದೊರೆಯುವಂತಹ ಯೋಜನೆಗಳು ಆಗಿಬಿಟ್ಟಿವೆ. ಅದು ಯಾವ

ರೀತಿಯಲ್ಲಿ ಅಂದರೆ ಸ್ಥಳೀಯ ಸರ್ಕಾರಕ್ಕೆಂದು ಕೆಲವೊಂದು ಯೋಜನೆಗಳನ್ನು ನೀಡುತ್ತಾರೆ. ಅದರಲ್ಲಿ ಮುಖ್ಯವಾದದ್ದು ಆಶ್ರಯ ಯೋಜನೆಯಾಗಿದೆ. ಆದರೆ ಈ ಯೋಜನೆಯನ್ನು ಪಡೆಯುವಂತಹ ಫಲಾನುಭವಿಗಳು ಯಾರು ಗೊತ್ತೆ? ಗ್ರಾಮ ಪಂಚಾಯಿತಿ ಸದಸ್ಯರು ಮತ್ತು ಅಧ್ಯಕ್ಷರು. ಈ ಚುನಾಯಿತ ಪ್ರತಿನಿಧಿಗಳು ತಮಗೆ ಎಷ್ಟು ಬೇಕೊ ಅಷ್ಟನ್ನು ಪಡೆದುಕೊಂಡು ಅದರ ಮಾರಾಟವನ್ನು ಮಾಡುತ್ತಾರೆ. ಈ ಆಶ್ರಯ ಯೋಜನೆಯಡಿ ಮನೆಗಳನ್ನು ಹಂಚಬೇಕೆಂದರೆ ಅದಕ್ಕೆ ಪ್ರತಿಯೊಂದು ಗ್ರಾಮಗಳಲ್ಲಿ ಗ್ರಾಮಸಭೆಯನ್ನು ಮಾಡಿ ನಂತರ ಅವರು ಸರಿಯಾದ ಫಲಾನುಭವಿ ಹೌದೊ ಅಲ್ವೊ ಎಂಬುದನ್ನು ತೀರ್ಮಾನ ಮಾಡಿ ನಂತರ ಮನೆಗಳ ಹಂಚಿಕೆಯನ್ನು ಮಾಡಬೇಕು. ಆದರೆ ಈ ಸದಸ್ಯರು ಮತ್ತು ಅಧ್ಯಕ್ಷರು ಯಾರು ಹಣವನ್ನು ನೀಡುತ್ತಾರೊ ಅವರಿಗೆ ಮನೆಗಳ ಹಂಚಿಕೆಯನ್ನು ಮಾಡುತ್ತಾರೆ. ಈ ಅಧ್ಯಕ್ಷರು ಮತ್ತು ಸದಸ್ಯರುಗಳು ಹಾಗೂ ಪಿಡಿಒ ಅಧಿಕಾರಿಗಳು ಸಹ ಇದರಲ್ಲಿ ಭಾಗಿಯಾಗಿರುತ್ತಾರೆ. ಇವರು ಕೇಳುವ ಹಣವೆಷ್ಟು ಗೊತ್ತಾ? ಸುಮಾರು ೩೦ರಿಂದ ೪೦ ಸಾವಿರ ರೂಪಾಯಿಗಳು. ಇಷ್ಟು ಹಣ ನೀಡಿದರೆ ಮಾತ್ರ ಮನೆಗಳು ಸಿಗುತ್ತವೆ. ಇದನ್ನು ಪ್ರಶ್ನಿಸಿದರೆ ಅವರಿಗೆ ಅವರ ಅವಧಿ ಮುಗಿಯೋ ವರೆಗೂ ಯಾವುದೇ ಒಂದು ಯೋಜನೆಯ ಪ್ರಯೋಜನವನ್ನೂ ಪಡೆಯಲಿಕ್ಕೆ ಆಗುವುದಿಲ್ಲ. ಹಾಗೂ ಪಂಚಾಯಿತಿಗಳಲ್ಲಿ ಯಾವುದೇ ಕೆಲಸ ಕೂಡ ಆಗದ ರೀತಿಯಲ್ಲಿ ತೊಂದರೆ ನೀಡುತ್ತಾರೆ. ಇದೇ ರೀತಿ ಮುಂದುವರಿದರೆ ಗ್ರಾಮ ಪಂಚಾಯಿತಿ ಅಧಿಕಾರಿಗಳು, ಅಧ್ಯಕ್ಷರು ಮತ್ತು ಸದಸ್ಯರುಗಳ ಮೇಲೆ ಯಾವುದೇ ರೀತಿಯ ನಂಬಿಕೆಯೂ ಇಲ್ಲದ ಪರಿಸ್ಥಿತಿ ಉಂಟಾಗುತ್ತದೆ. ಅದಕ್ಕಾಗಿ ಸಂಬಂಧಪಟ್ಟ ಅಧಿಕಾರಿಗಳು ಇದಕ್ಕೆ ಸೂಕ್ತ ಕ್ರಮ ಕೈಗೊಳ್ಳಬೇಕು ಹಾಗೂ ಅವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಹೂಡಬೇಕು, ಹಾಗಾದರೆ ಮಾತ್ರ ಮುಂದೆ ಬರುವ ವ್ಯಕ್ತಿಗಳಿಗೆ ದಾರಿದೀಪವಾಗುತ್ತದೆ.

ದಾವಣಗೆರೆ **ರವಿಕುಮಾರ್ ಪೂಜಾರ್**
**ರಾಮಘಟ್ಟತಾಂಡ**

### ಮಾಧ್ಯಮ ಅಭಿವ್ಯಕ್ತಿ ಮತ್ತು ಸಾಮಾಜಿಕ ಹೊಣೆಗಾರಿಕೆ

✉ ಆಧುನಿಕ ತಂತ್ರಜ್ಞಾನ ಸಾಮಾಜಿಕ ವಲಯದಲ್ಲಿ ಸಂವಹನವನ್ನು ಜಂಗಮ ಸ್ವರೂಪಿಯಾಗಿಸಿದ್ದು ವ್ಯಕ್ತಿಗಳ ನಡುವೆ ನೇರಾನೇರ ಸಂಪರ್ಕ ಸಾಧಿಸಲು ನೆರವಾಗಿದೆ. ಇಂದು ಜಗತ್ತಿನ ಮತ್ತೊಂದು ತುದಿಯಲ್ಲಿ ನಡೆಯುವ ಘಟನೆಗಳ ಬಗ್ಗೆ ತಿಳಿಯಲು ಯಾವುದೇ ಒಂದು ನೆಲೆಯನ್ನು ಹುಡುಕುವ ಅವಶ್ಯಕತೆ ಇಲ್ಲ. ಎಲ್ಲವೂ ತಂತ್ರಜ್ಞಾನದ ಚೌಕಟ್ಟಿನಲ್ಲಿ ಪಸರಿಸುತ್ತಿದೆ. ವಿದ್ಯುನ್ಮಾನ ಕ್ಷೇತ್ರದಲ್ಲಿನ ಕ್ರಾಂತಿಕಾರಿ ಬೆಳವಣಿಗೆಗಳು ಸುದ್ದಿ ಸಂಗ್ರಹ ಪ್ರಕ್ರಿಯೆಯನ್ನು ಬೆರಳ ತುದಿಯಲ್ಲಿನ ವಿದ್ಯಮಾನವನ್ನಾಗಿ ಮಾಡಿವೆ. ವ್ಯಕ್ತಿಗತ ಅಗತ್ಯತೆ ಮತ್ತು ಆದ್ಯತೆಗಳನ್ನೂ ಲೆಕ್ಕಿಸದೆ ಇಂದು ಜಗತ್ತಿನ ಸುದ್ದಿ ವಾಟ್ಸ್ಯಾಪ್, ಫೇಸ್‌ಬುಕ್, ಟ್ವಿಟರ್ ಮೂಲಕ ಎಲ್ಲರನ್ನು ತಲುಪುತ್ತಿರುವುದು ಸಂವಹನ ಕ್ರಿಯೆಯ ಒಂದು ಬೃಹತ್ ಹೆಜ್ಜೆ ಎನ್ನಬಹುದು.

ಈ ಬೆಳವಣಿಗೆಗೆ ಕಾರಣಗಳನ್ನು ಗ್ರಹಿಸಲು ಭೂತಗನ್ನಡಿ ಬೇಕಿಲ್ಲ. ಔದ್ಯಮಿಕ ಹಿತಾಸಕ್ತಿ, ರಾಜಕೀಯ ಒಲವು, ಕಾರ್ಪೊರೇಟ್ ರಾಜಕಾರಣ ಮತ್ತು ಲಾಭ ಗಳಿಕೆಯ ಹಪಾಹಪಿ ಆವರಿಸುವ ಎಲ್ಲ ಕ್ಷೇತ್ರಗಳೂ ಬಹುಶಃ ಹೀಗೆಯೇ ಇರುತ್ತವೆ. ಮೂರು ನಾಲ್ಕು ದಶಕಗಳ ಹಿಂದೆ ಮುದ್ರಣ ಮಾಧ್ಯಮಗಳೇ ಪ್ರಧಾನವಾಗಿದ್ದ ಸಂದರ್ಭದಲ್ಲಿಯೂ ಔದ್ಯಮಿಕ ಹಿತಾಸಕ್ತಿ ಪ್ರಧಾನವಾಗಿತ್ತು. ದುರಂತ ಎಂದರೆ ಇಂದು ಯಾವುದೇ ಮಾಧ್ಯಮ ಸಮೂಹವೂ ಈ ಸಾಕ್ಷಿ ಪ್ರಜ್ಞೆಯನ್ನು ಪ್ರತಿನಿಧಿಸುವ ಮನಸ್ಥಿತಿಯಲ್ಲಿಲ್ಲ. ತಂತ್ರಜ್ಞಾನ ಕ್ಷೇತ್ರದ ಮುನ್ನಡೆಯಲ್ಲಿ, ಸಾಕ್ಷರತೆಯಲ್ಲಿ ಮತ್ತು ಅಂತರರಾಷ್ಟ್ರೀಯ ಮಾರುಕಟ್ಟೆಯನ್ನು ಪ್ರತಿನಿಧಿಸುವಲ್ಲಿ ಕೊಂಚ ಮುನ್ನಡೆ ಸಾಧಿಸಿರುವುದನ್ನು ಬಿಟ್ಟರೆ ೧೯೭೦ರ ದಶಕದ ಭಾರತಕ್ಕೂ ೨೦೧೭ರ ಭಾರತಕ್ಕೂ ಹೆಚ್ಚಿನ ವ್ಯತ್ಯಾಸವೇನೂ ಕಾಣುವುದಿಲ್ಲ. ಅಂದಿನ ಪರಿಸ್ಥಿತಿಯಲ್ಲಿ ಜನಸಾಮಾನ್ಯರು ಭ್ರಮನಿರಸನರಾಗಿದ್ದರು, ಶ್ರಮಜೀವಿಗಳ ಜೀವನ ದುರ್ಭರವಾಗಿತ್ತು, ಮಹಿಳೆಯರ ಮೇಲಿನ ದೌರ್ಜನ್ಯ ಪರಾಕಾಷ್ಠೆ ತಲುಪಿತ್ತು, ಜಾತಿ ದೌರ್ಜನ್ಯ ಹೆಚ್ಚಾಗಿತ್ತು, ಅರ್ಥ ವ್ಯವಸ್ಥೆ ಕುಸಿಯುತ್ತಿತ್ತು, ಪ್ರಭುತ್ವದ ಹಿಡಿತ ಬಿಗಿಯಾಗುತ್ತಿತ್ತು, ಕರಾಳ ಶಾಸನಗಳು ಪ್ರತಿರೋಧದ ದನಿಗಳನ್ನು ಅಡಗಿಸುತ್ತಿದ್ದವು. ಈ ಎಲ್ಲ ವಿದ್ಯಮಾನಗಳನ್ನು ೨೦೧೭ರಲ್ಲಿ ಪುನಃ ಕಾಣುತ್ತಿದ್ದೇವೆ. ನಾವು ಕಾಣಬಹುದಾದ ಒಂದೇ ವ್ಯತ್ಯಾಸ ಎಂದರೆ ಅಂದು ಮಾಧ್ಯಮಗಳು ಜನಸಾಮಾನ್ಯರ ದನಿಯಾಗಿದ್ದವು, ಇಂದು ಪ್ರಭುತ್ವದ ದನಿಯಾಗಿವೆ, ಕೆಲವು ಅಪವಾದಗಳನ್ನು ಹೊರತುಪಡಿಸಿ.

ಪ್ರಭುತ್ವ ಸುಳ್ಳು ಹೇಳುತ್ತದೆ. ಮಾಧ್ಯಮ ಸತ್ಯವನ್ನು ಬಿತ್ತರಿಸುತ್ತದೆ. ಪತ್ರಿಕೋದ್ಯಮ ಮತ್ತು ಮಾಧ್ಯಮಗಳು ಸತ್ಯವನ್ನು ಸಾಕಾರಗೊಳಿಸಲು ಶ್ರಮಿಸುತ್ತವೆ. ಹಾಗಾಗಿಯೇ ಮಾಧ್ಯಮ ಕ್ಷೇತ್ರವನ್ನು ಪ್ರಜಾತಂತ್ರ ವ್ಯವಸ್ಥೆಯ ನಾಲ್ಕನೆಯ ಸ್ತಂಭ ಎಂದು ಹೇಳಲಾಗುತ್ತದೆ. ಆದರೆ ಇಂದು ಮಾಧ್ಯಮಗಳು ತಮ್ಮ ಸಾಮಾಜಿಕ ಹೊಣೆಗಾರಿಕೆಯನ್ನು ಮರೆತಿವೆ. ಕಾರ್ಪೊರೇಟ್ ಸಂಸ್ಕೃತಿಯ ಅಡಿಯಾಳುಗಳಾಗಿವೆ. ಹಾಗಾಗಿ ಪ್ರಭುತ್ವದ ತಪ್ಪು ಹೆಜ್ಜೆಗಳನ್ನು ಗುರುತಿಸಲು ಹಿಂಜರಿಯುತ್ತವೆ. ಇದರ ನೇರ ಪರಿಣಾಮವನ್ನು ಇಂದು ಶ್ರಮಜೀವಿ ವರ್ಗ ಎದುರಿಸುತ್ತಿದೆ. ನರೇಂದ್ರ ಮೋದಿ ಸರ್ಕಾರದ ನೋಟು ಅಮಾನ್ಯೀಕರಣ ಅಥವಾ ನೋಟು ರದ್ದತಿಯ ನಂತರ, ಗೋರಕ್ಷಣೆಯ ನೆಪದಲ್ಲಿ ದೇಶಾದ್ಯಂತ ಅವ್ಯಾಹತವಾಗಿ ನಡೆದ ಹತ್ಯೆಗಳ ನಂತರ, ಆಹಾರ ಪದ್ಧತಿಯ ಮೇಲಿನ ಪ್ರಹಾರದ ನಂತರ, ದಾದ್ರಿ, ಊನ, ಪೆಹ್ಲುಖಾನ್, ಆಲ್ವಾರ್ ಘಟನೆಗಳ ನಂತರ ಮಾಧ್ಯಮಗಳು ತಮ್ಮ ಸಾಮಾಜಿಕ ಹೊಣೆಗಾರಿಕೆಯನ್ನು ಅರಿತು ಸತ್ಯ ನುಡಿದಿದ್ದರೆ ಬಹುಶಃ ಪಾನ್ಸರೆ, ದಾಭೋಲ್ಕರ್, ಕಲಬುರ್ಗಿ ಮತ್ತು ಗೌರಿ ಲಂಕೇಶರ ಹಂತಕರು ಇಷ್ಟು ನಿರ್ಭೀತಿಯಿಂದ ಇರುತ್ತಿರಲಿಲ್ಲ.

ಇಂದಿಗೂ ಕಾಲ ಮಿಂಚಿಲ್ಲ. ಅಮಾನ್ಯೀಕರಣ ವಿಫಲವಾಗಿದೆ. ಅಷ್ಟೇಕೆ, ಜಾಗತೀಕರಣ ವಿಫಲವಾಗಿದೆ. ಹಣಕಾಸು ಬಂಡವಾಳದ ಅಧಿಪತ್ಯ ಹಲವಾರು ಸವಾಲುಗಳನ್ನು ಎದುರಿಸುತ್ತಿದೆ. ಜನಸಾಮಾನ್ಯರ ಬವಣೆ ಹೇಳತೀರದಾಗಿದೆ. ನಿರುದ್ಯೋಗ ಶಿಖರ ತಲುಪಿದೆ. ಆರ್ಥಿಕ ಹಿಂಜರಿತ ಮತ್ತು ಕುಸಿತ ಖಚಿತವಾಗಿದೆ. ಲಕ್ಷಾಂತರ ಕಾರ್ಮಿಕರು ನೌಕರಿ ಕಳೆದುಕೊಳ್ಳಲಿದ್ದಾರೆ. ನಿತ್ಯಬಳಕೆಯ ವಸ್ತುಗಳ ಬೆಲೆಗಳು ಗಗನಕ್ಕೇರುತ್ತಿವೆ. ಮಧ್ಯಮ ವರ್ಗಗಳ ಜೀವನವೇ ತತ್ತರಿಸಿಹೋಗುವಂತಿದೆ. ಶ್ರಮಜೀವಿಗಳ ಬದುಕು ಮೂರಾಬಟ್ಟೆಯಾಗಲಿದೆ.

ಮೈಸೂರು **ನಾ. ದಿವಾಕರ**

### ಖಾದಿ ಕನವರಿಕೆ ಹಾಗೂ ಬುಲೆಟ್ ರೈಲು

✉ ಆರು ದಶಕಗಳ ಹಿಂದಿನ ಮಾತು. ಹಳ್ಳಿಯಿಂದ ಆಲೂರು ಎಂಬ ಪೇಟೆಯ ಮಾಧ್ಯಮಿಕ ಶಾಲೆಗೆ ನನ್ನನ್ನು ನನ್ನಪ್ಪ ಸೇರಿಸಿದರು. ನನ್ನಜ್ಜನಿಗೆ ಗಾಂಧಿ ತಾತನದೇ ಪ್ರತಿರೂಪದ ದಿರಿಸಿತ್ತು. ನನ್ನಪ್ಪನಿಗೆ ನೆಹರುವಿನದು ಬದಲಾಗಿತ್ತು. ಸಕಲೇಶಪುರ ಕ್ಷೇತ್ರ ನಮ್ಮದು. ಗಾಂಧಿಭಕ್ತ ಬೋರಣ್ಣಗೌಡರ ಚುನಾವಣಾ ಪ್ರಚಾರ. ಜೋಡೆತ್ತಿನ ಗುರುತಿಗೆ ವೋಟು ಕೊಡಿ ಎಂದು ರಾಜಕೀಯದ ಅರಿವಿಲ್ಲದ ಶಾಲಾ ಹುಡುಗರು ನಾವು ಕೂಗುತ್ತಿದ್ದುದು ನೆನಪು. ಖಂಡೇರಾವ್ ಎಂಬ ಶಿಸ್ತಿನ ಮುಖ್ಯೋಪಾಧ್ಯಾಯರು ಖಾದಿ ಸೂಟು ಹಾಕಿ ಬರುತ್ತಿದ್ದರು. ಉಳಿದ ಅಧ್ಯಾಪಕರುಗಳದು ಸಹ ತುಸು ಅದೇ ರೀತಿಯದು. ಹಳ್ಳಿ ಮಕ್ಕಳು ಶಾಲೆಗೆ ಬರುವಾಗ ಕೈ ಉತ್ಪನ್ನದ ಸಂತೆ ಚಡ್ಡಿ ಅಂಗಿಗಳದು ಆಸರೆ. ಸಮವಸ್ತ್ರದ ಭಾರವನ್ನು ಮಕ್ಕಳ ಮೇಲೆ ಹೇರಬಾರದೆಂದು ಮುಖ್ಯೋಪಾಧ್ಯಾಯರು 'ಗಾಂಧಿ ಟೋಪಿ ಮಾತ್ರ ಕಡ್ಡಾಯ' ಮಾಡಿದ್ದರು. ಗೋಡೆಗೂಟದಲ್ಲಿರುತ್ತಿದ್ದ ಖಾದಿ ಟೋಪಿಗಳು ನನ್ನಪ್ಪನವು ನನ್ನ ನೆರವಿಗೆ ಬಂದವು. ಬಟ್ಟೆ ಅಂಗಡೀಲಿ ಕುಳಿತ ಅಪ್ಪ ಜಗಲಿ ಮೇಲಿನ ಟೈಲರನಿಂದ ಖಾದಿ ಚಡ್ಡಿ ಹಾಗೂ ಕೋಟನ್ನು

### ದುರಂತ

ಬಾಳಿನಲಿ ಖರೀದಿಸಿದ
ಭಾವಗಳನ್ನು
ಪ್ರೀತಿಗಾಗಿ
ಮಾರಾಟ ಮಾಡಿದಳು
ಕೊನೆಗೊಮ್ಮೆ ಪ್ರೀತಿಯನ್ನೂ!

**ಶೋಭಾ ಪ್ರಮೋದ್**
ರಾಯಗಢ, ಮಹಾರಾಷ್ಟ್ರ

ಹೊಲಿಸಿಕೊಟ್ಟಿದ್ದರು. ಕಾಲ ಸರಿದಿದೆ. ಈಗ ಪ್ರಸನ್ನ ಅವರ 'ದೇಶಿ' ಉಡುಪು ನಾನು ತೊಡುವಾಗ ಅದೆಲ್ಲ ನೆನಪಾಗುತ್ತದೆ.

ಅದೊಂದು ಸ್ವದೇಶಿ ಚಳುವಳಿಯಾಗಿ ಅಭಿವೃದ್ಧಿಯಾಗಬೇಕಿತ್ತು. ದೇಶವು ಜಗದ ಚಲನೆಯ ನೆಪವೊಡ್ಡಿ ನೆಹರು ಹೆಜ್ಜೆಗಳಲ್ಲಿ ಹೆಜ್ಜೆ ಹಾಕಿತು. ನೆಹರುಗೆ ಖಾದಿ 'ಭಾರತದ ಸ್ವಾತಂತ್ರ್ಯದ ಸಂಕೇತದ ಮಂಗಳ ವಸ್ತ್ರವಾಗಿತ್ತು'. ಆದರೆ ಗಾಂಧೀಜಿಗದು 'ಭಾರತದ ಜನತೆಯ ಒಗ್ಗಟ್ಟಿನ ಸಂಕೇತ. ಆರ್ಥಿಕ ಸ್ವಾತಂತ್ರ್ಯ ಹಾಗೂ ಸಮಾನತೆಯ ಸಂಕೇತ'ವಾಗಿತ್ತು. 'ಚರಕವು ಒಲೆಯಂತೆ ಪ್ರತಿಯೊಂದು ಹಳ್ಳಿಯ ಮನೆಯಲ್ಲಿಯೂ ಇರಬೇಕು' ಎಂಬುದು ಅವರು ಅರಿತ ಸ್ವದೇಶಿ ಪರಂಪರೆಯ ಜ್ಞಾನದ ತಳಹದಿ. ಬಡವರ ಊರುಗೋಲಾಗಿದ್ದ ಕೈಮಗ್ಗವನ್ನು ಲಂಡನ್ ಅಧಿಕಾರ ಕಿತ್ತುಕೊಂಡಾಗಿತ್ತು. ಅದೆಲ್ಲದರ ಪುನರುಜ್ಜೀವನ ಮಂತ್ರಕ್ಕೆ ಚರಕ ಸಾಂಕೇತಿಕವಾಗಿತ್ತು. ಸ್ವತಂತ್ರ ಭಾರತದಲ್ಲಿ ಅದಾಗಲೇ ಇಲ್ಲ. ಈಗೇನೋ ರಾಷ್ಟ್ರೋತ್ಥಾನ ಪರಿಷತ್ತು ಚೀನಾದ ವಸ್ತುಗಳನ್ನು ಬಹಿಷ್ಕರಿಸಲು ಕರೆ ನೀಡಿ ಆ ವಸ್ತುಗಳನ್ನು ಏಕೆ ಬಹಿಷ್ಕರಿಸಬೇಕು ? ಪಾಕ್ ಭಯೋತ್ಪಾದನೆಗೆ ಹೇಗೆ ಚೀನಾ ಬೆಂಗಾವಲು ! ಎಂದು ಶಾಲಾ ಮಕ್ಕಳ ಕೈಯಲ್ಲೆಲ್ಲ ರಸವತ್ತಾಗಿ ದ್ವೇಷದ ಸಾಹಿತ್ಯ ನೀಡುತ್ತಿದೆ. ಇದೇ ಸಂದರ್ಭದಲ್ಲಿ ದೇಶದ ಪ್ರಧಾನಿ ಚೀನಾದ ಪ್ರವಾಸ ಮಾಡಿ ಬಂದಿದ್ದಾರೆ. ಜಪಾನ್ ಪ್ರಧಾನಿ ಹಾಗೂ ಅವರ ಪತ್ನಿಯನ್ನು ತನ್ನ ಜೊತೆಯಲ್ಲಿ ಖಾದಿ ದಿರುಸು ಉಡಿಸಿ ಅಹಮದಾಬಾದಿನಿಂದ ಗಾಂಧಿ ಆಶ್ರಮದವರೆಗೆ ಎಂಟು ಕಿಲೋಮೀಟರ್ ರೋಡ್ ಷೋ ಮಾಡಿಸಿದ್ದಾರೆ. ಆಗ ಬೆಂಗಾವಲು ಅಧಿಕಾರಿಗಳೆಲ್ಲ ವಿದೇಶಿ ಸೂಟು ಹಾಕಿಕೊಂಡು ಕಾರಿನ ಹಿಂದೆ ಓಡುತ್ತಿದ್ದ ದೃಶ್ಯ ಮಾಧ್ಯಮದಲ್ಲಿ ಬರುತ್ತಿತ್ತು. ಇದು ಜಗದ್ಗುರುಗಳನ್ನು ಪಲ್ಲಕ್ಕಿ ಮೇಲಿರಿಸಿ ಹೊರುತ್ತಾ ಓಡಿಹೋಗುವ ಪ್ರಹಸನದಂತಿತ್ತು. ಬಡ ಭಾರತಕ್ಕೆ ಹೀಗೆ ಬುಲೆಟ್ ರೈಲು ಈ ಮಾರ್ಗದಲ್ಲಿ ಸ್ವದೇಶಿಯಾಗಿ ಹರಿದುಬರುತ್ತಿದೆ. ಗಾಂಧಿ ನೋಟುಗಳು ಸ್ಥಾನ ಬದಲಿಸಿದವು. ಬಡವನಿಗೆ ಜಿಡಿಪಿ ಎಂದರೇನು ಎಂದು ಅರ್ಥವಾಗಲಿಲ್ಲ. ಈಗ ಜಿಎಸ್‌ಟಿ ಬಂದಿದೆ. 'ಗಾಂಧಿ ಟೋಪಿ ಒಂದಕ್ಕೆ ಮಾತ್ರ ತೆರಿಗೆ ಇಲ್ಲ'. ಉಳಿದೆಲ್ಲ ಕೈ ಉತ್ಪನ್ನ ಬಟ್ಟೆಗಳಿಗೂ ತೆರಿಗೆ ಬಿದ್ದಿದೆಯಷ್ಟೆ ಅಲ್ಲ, ಏಳು ದಶಕಗಳಲ್ಲಿ ಮೊದಲ ಬಾರಿಗೆ ಅದರ ಎಲ್ಲಾ ಸಬ್ಸಿಡಿಯನ್ನು ರದ್ದುಪಡಿಸಲಾಗಿದೆ.

ಪ್ರಸನ್ನ ಗಾಂಧಿ ಚರಕ ಹಿಡಿದ ಸ್ವದೇಶಿ ಮನುಷ್ಯ. ಗಾಂಧಿ ಹೆಜ್ಜೆಗಳಲ್ಲಿ ಕರ ವಿರೋಧಿ ಚಳುವಳಿ ಸಂಘಟಿಸುತ್ತಿದ್ದಾರೆ. ಖಾದಿಗೆ ಕಸುವು ತುಂಬುವ ಅನೇಕ ಮನಸ್ಸುಗಳಿವೆ. ಲಕ್ಷಾಂತರ ನೇಕಾರರ ಉಳಿವಿನ ಪ್ರಶ್ನೆಯಿದು. ಕೈ ಉತ್ಪನ್ನ ಸಕಲ ರೈತಾಪಿ ಶ್ರಮದ ಸಂಕೇತ. ದೇಶದ ಚಿತ್ತ ಬುಲೆಟ್ ರೈಲಿನಲ್ಲಿ ಮುಳುಗಿಹೋಗಿದೆ. ಆರ್ಥಿಕ ಸ್ಥಿತಿ ತಾರಾಮಾರಿಯಾಗುತ್ತಿರುವಾಗ ಚರಕದ ಚಕ್ರ ಸ್ಥಗಿತವಾಗದಂತೆ ನೋಡಿಕೊಳ್ಳುವುದು ಎಲ್ಲರ ಜವಾಬ್ದಾರಿ. ದೇಶದ ಶಿಕ್ಷಣ, ರೈತಾಪಿ ಶಿಕ್ಷಣ, ಧಾರ್ಮಿಕ ಶಿಕ್ಷಣ ಎಲ್ಲಕ್ಕೂ ಸ್ವದೇಶಿ ಜ್ಞಾನ ವಿಜ್ಞಾನದ ಕಸುವು ನೀಡಬೇಕಾಗಿತ್ತು. ಮನೆಮನೆಗೂ ಕಿರುಯಂತ್ರಗಳು ಬೇಕಾಗಿತ್ತು. ಅವು ಸ್ವದೇಶಿ ಪುನರುಜ್ಜೀವನದಲ್ಲಿ ಇರಬೇಕಾಗಿತ್ತು. ಅದಾಗಲಿಲ್ಲ. ಬಡವರ ಬದುಕು ನಗರೀಕರಣ ಭಾರದಲ್ಲಿ ಬಸವಳಿದುಹೋಗಿದೆ. ಮಣ್ಣು ಕೈಕಾಲು ಕಾಯಕದ ತಿರುಗಣಿಯಲ್ಲಿಲ್ಲ. ಮಣ್ಣನ್ನು ಉಸಿರಿರುವ ಜೀವ ಎಂಬುದನ್ನೆ ಮನುಷ್ಯ ಮರೆತಾಗಿದೆ. ನೀರು ಆಕೆ ದೇವತೆಯಾಗುಳಿದಿಲ್ಲ. ಆಕೆಯೀಗ ಹುಚ್ಚು ತಗುಲಿದ ಹಿರೀ ಜೀವ. ಇದೆಲ್ಲಕ್ಕೂ ಪಾರ್ಲಿಮೆಂಟು ಮಾತಾಡಬೇಕಲ್ಲವೆ ! ಹೌದು ಮಾತನಾಡುತ್ತಲೇ ಏಳು ದಶಕಗಳ ಆಯಸ್ಸಿನ ಅಜ್ಜನ ವಯಸ್ಸು ಆಗುತ್ತಿದೆ. ಹಾಗಾಗಿ ಕಾರ್ಲೈಲ್ ಎಂಬ ರಾಜಕೀಯ ಚಿಂತಕ 'ಜಗತ್ತಿನ ಮಾತಿನ ಅಂಗಡಿ' ಎಂದು ಪಾರ್ಲಿಮೆಂಟನ್ನು ಹಂಗಿಸುತ್ತಾನೆ.

ಹಾಗಾದರೆ ಬೇರೆ ದಾರಿ ಏನಿದೆ ? ಪ್ರಜಾಪ್ರಭುತ್ವ ಕೇವಲ ಅಭಿವೃದ್ಧಿ ಮಂತ್ರದಲ್ಲಿ ಚಲಿಸುವ ಬುಲೆಟ್ ಬಂಡಿಯಲ್ಲ. ಅದಕ್ಕೆ ಗುಂಭಗೂಡಿದ ಅರೆಕೋಲುಗಳಿವೆ. ಆ ತಿರುಗುವ ಚಕ್ರಕ್ಕೆ ಭೂತ ಭವಿಷ್ಯ ವರ್ತಮಾನದ ಹಂಗಿಲ್ಲ. ಅದೊಂದು ಚಲನೆ. ಅದು ಮನುಷ್ಯನ ಕನವರಿಕೆಯ ಚಲನೆ. ಗಾಂಧಿ, ಚರಕ, ಖಾದಿ, ಸ್ವದೇಶಿ – ಇವೆಲ್ಲವೂ ಈ ಕನವರಿಕೆಯ ಕನಸುಗಳು. ಅವು ಚಲಿಸುವ ಮನೋಚಕ್ರದೊಳಗಿನ ಚಲನೆಗಳು. ಜೀವಜಾಲದ ಕೊಂಡಿಗಳ ಬಿಳಲುಗಳು. ಪಂಚಭೂತಗಳಲ್ಲಿ ಮನುಷ್ಯ ಜಗತ್ತು ಕೇವಲ ಒಂದು ಚೆಂಡು. ಇದನ್ನರಿತು ನಿಸರ್ಗಕ್ಕೆ ಅಧೀನನಾಗಿ ಬಾಳುವೆ ಮಾಡುವುದೇ ಪ್ರಜಾಪ್ರಭುತ್ವದ ಮಿತಿ.

ಈಗಾಗಲೇ ಪ್ರಜಾಪತಿ ಅಮೆರಿಕೆಯಲ್ಲಿ ಚಂಡಮಾರುತ ಎಬ್ಬಿಸಿ ಚೆಂಡು ಒದ್ದಿದ್ದಾನೆ. ಚೀನಾ ಜಪಾನು ಭಾರತ ಸಹಾ ಈ ವದೆಗೆ ಹೊರತಾಗಿಲ್ಲ. ಭಾರತ ಬಡತನದಿಂದ ಪಾರಾಗಿಲ್ಲ. ತಾಳ್ಮೆಯ ಬಂಡಿ ಚಲಿಸುತ್ತಾ ಸಾಗಬೇಕು. ಗಾಳಿ ರಭಸಕ್ಕೆ ಮಿಂಚಿನ ವೇಗಕ್ಕೆ ಮಿಗಿಲಾದ ಬುಲೆಟ್ ವೇಗವನ್ನು ಈ ದೇಶ ತಡೆಯಲಾರದು. ಇದು ಅಹಂಕಾರದ ಹೆಚ್ಚುಗಾರಿಕೆ. ಆ ರೈಲಿನ ವೆಚ್ಚ ಒಂದು ಲಕ್ಷ ಕೋಟಿಯಂತೆ. ಗಾಂಧಿ ನಾಡು ಅಹಮದಾಬಾದಿನಿಂದ ವೇಗವಾಗಿ ಎರಡು ಗಂಟೆ ಮುಂಚೆ ಮುಂಬೈಗೆ ಆಗಮಿಸಿದಾಕ್ಷಣ ದೇಶದ ಬಡತನ ಬಗೆಹರಿಯುವುದಿಲ್ಲ. 'ಪ್ರಜಾಪ್ರಭುತ್ವ ನಿಧಾನಕ್ಕೆ ಬೆಳೆಯುವ ಸಸ್ಯ' ಎಂಬ ಗಾಂಧಿ ಮಾತು ಸತ್ಯಾನ್ವೇಷಣೆಯದು. ಅದು ಮಂತ್ರದ ಮರವಾಗಲಾರದು. ಖಾದಿ ಕಾವಿ ಇವಿಂದು ಭಾರತೀಯ ಅಧ್ಯಾತ್ಮವನ್ನು ಹಂಗಿಸುತ್ತಿವೆ. ಅದು ಆತಂಕದ ವಿಚಾರ. ಈ ದೇಶ ಸನಾತನ ಮಾದರಿಯದು. ಅದರಲ್ಲಿ ಆಡಂಬರವಿಲ್ಲ. ಬುಲೆಟ್ ವೇಗವಿಲ್ಲ. ಅವಿಶ್ವಾಸವಿಲ್ಲ. ಕಾಲಕಾಲಕ್ಕೆ ಬದಲಾದ ವಿಶ್ವಾಸಗಳಿವೆ. ಇದೆಲ್ಲದರ ಅರಿವಿನ ತಿಳಿವಿಗೆ ಗಾಂಧಿಯಿಸಂ ಅಡುಗೆ ಮಾಡಿ ನೀಡಿದೆ. ಅದರಲ್ಲಿ ಬುದ್ಧನ ವೈಚಾರಿಕ ವೈಶಾಲ್ಯತೆಯಿದೆ. ಅದೆಲ್ಲವೂ ಖಾದಿಯ ಕನವರಿಕೆಯ ಸಂಕೇತ ವಸ್ತ್ರದ ಮಾದರಿಯಾಗಿದೆ.

*ಬೆಂಗಳೂರು* **ಡಾ॥ ರಾಜೇಗೌಡ ಹೊಸಹಳ್ಳಿ**

# ಸಾವಿನ ಸಂಗದವರು




ನಮ್ಮೂರ ಸುಡುಗಾಡು ಸಿದ್ಧರ ಮನೆಯಲನ್ನ ಬೇಯಲು
ಅವರ ಕೂಸುಗಳುಂಡು ಸ್ವಸ್ಥ ಶಾಂತ ಮಲಗಲು
ದೀಪವಾರಿ ಗಂಡಹೆಂಡಿರ ಸರಸಸುಖ ನಗು ಹೊಮ್ಮಲು
ಊರಲಾರಾದರೂ ಸಿದ್ಧರಟ್ಟುವ ಚಿತೆಯಲುರಿದು ಕರಗಬೇಕು
ಇವರಗೆವ ಕುಣಿಯಲೈಕ್ಯವಾಗಬೇಕು

ಮರಣ ಬರಲಿ ಹಣವ ತರಲೆಂದು ಸಿದ್ಧರಾರೂ ಕಾಯುವುದಿಲ್ಲ
ಚಿತೆಯಟ್ಟಿ ಕುಣಿಯಗೆದು
ಪಟ್ಟಿ ಹಿಡಿದು ಊರ ಸುತ್ತಿ
ಬಣ್ಣ ಲಿಂಗ ಜಾತಿ ಭಾಷೆ ಧರ್ಮ ಗುಂಪು ಪಂಥ ಇಟ್ಟು
ಮಂದಿ ಬೆನ್ನ ಮೇಲೋ
ಮನೆ ಬಾಗಿಲು ವಠಾರ ಕಾಲೋನಿಗೇ 'ರಕ್ತಗೆಂಪು' ಗುರುತು ಹಾಕುವುದಿಲ್ಲ
ಸಿದ್ಧಪಟ್ಟಿಯಲಿ ಹೆಸರು ಹೊಡೆಯುವುದಿಲ್ಲ
ಮಸೀದಿ ಶಾಲೆ ಮಠ ಆಸ್ಪತ್ರೆ ಚರ್ಚಿಗೋ ನುಗ್ಗಿ ಮಂದಿ ಕೊಂದು
ಸುಡುಗಾಡಿಗೆ ತರಲು ಸುಪಾರಿ ಕೊಡುವುದಿಲ್ಲ.

ಕೆಲಸಕೆ ಕರೆಯ ಸುದ್ದಿ ಬಂದರೆ
ಹುಗಿಯಲೋ ಉರಿಸಲೋ ಸಿದ್ಧರಾಗುವರು.
ಸಿದಿಗೆ ಹೊತ್ತು ತಂದವರ ಕಳೆಯಿಳಿದ ಮುಖಗಳ ಕನ್ನಡಿಯಾಗುವರು
ಕಂಬನಿ ಮಿಡಿದವರೊಡನೆ ಆರ್ದ್ರರಾಗುವರು
ಹೆಗಲಿಗೆ ಹೆಗಲಿತ್ತು ಆಪ್ತರಾಗುವರು.

* * *

ಜಗದಗಲ ಅನುಗಾಲ ಸಿಟ್ಟು ಸಿಡಿದು ರಕ್ತ ಚಿಮ್ಮಲು
ಗಡಿಗಳದುರಿ ಜನ ಬೆದರಿ ಕಂಗೆಟ್ಟು ಚೀರಿ ಚದುರಲು
ಕೆಲರರಮನೆಯಲಿ ಮೋಜು ಮೇಜವಾನಿ
ತಟ್ಟೆಯಲಿ ಮಿದುಮೆದು ಬೆಂದ ರೊಟ್ಟಿ ಹೊರಳುವುದು
ಅವರ ಸಾವಿನಂಗಡಿಯ ಗೋದಾಮುಗಳ ಸರಕು ಕರಗುವುದು.

ಸೋದರ ಸಂಬಂಧಿಗಳು ನೆರೆಹೊರೆಯ ನಾಡುಗಳು
ಕೆಕ್ಕರಿಸಿ ನಿಂತು ತೊಡೆ ತಟ್ಟಿ ಆರ್ಭಟಿಸಲು,
ಯುದ್ಧರಕ್ಕಸರರಮನೆಗಳ ಬಾಗಿಲಿಗೆ ಹಬ್ಬದ ಸಿಂಗಾರ
ಯುದ್ಧದುಪಕರಣ ಕಾರ್ಖಾನೆ ನೌಕರಗೆ ಕೈತುಂಬ ಪಗಾರ
ಅಣ್ಣತಮ್ಮರೂರಿಗೆ ದಲ್ಲಾಳಿಗಳನಟ್ಟಿ
ಬಾಂಬು ಬಂದೂಕು ಫಿರಂಗಿ ವಿಮಾನ ರಾಕೆಟ್ಟುಗಳ ಜಾತ್ರೆ ಕಟ್ಟಿ
ಒಂದು ಕೊಂಡರೆ ಎರಡುಚಿತ ಮಂತ್ರವುಸಿರಿ ಕಾಸೆಣಿಸಿ
ಕಿಡಿಗಳಿಗೆ ತಿದಿಯೂದಿ ಬೆಂಕಿಜ್ವಾಲೆಯೆಬ್ಬಿಸಿ
ಯುದ್ಧದ ಮುಹೂರ್ತವಿಟ್ಟು ವ್ಯೂಹ ಪ್ರತಿವ್ಯೂಹ ಪಾಠವಿಟ್ಟು
ಇವರಿಗವರ ಮೇಲೆ ಅವರಿಗಿವರ ಮೇಲೆರಗೆ ಛೂಬಿಟ್ಟು
ಮನೆ ಆಸ್ಪತ್ರೆ ರಸ್ತೆ ಶಾಲೆ ಹಳ್ಳಿ ಗುಡಿ ಚರ್ಚು ಮಸೀದಿ ನಗರ ರಾಜ್ಯ ದೇಶಗಳಿಗೇ
'ರಕ್ತಗೆಂಪು' ಗುರುತಿಟ್ಟು ಸುಡುಗಾಡು ಸಿದ್ಧ ಮಾಡುವರು.
ಒಂದೊಂದು ಬಾಂಬು ಸಿಡಿದು, ಗುಂಡು ಹಾರಿ, ಮನೆಗಳದುರುವುದನೆ ಸಂಭ್ರಮಿಸಿ
ಸಾವಿನ 'ನಿಜ-ಸಮಯ ಸುದ್ದಿ'ಗಳ ರೋಚಕ ರೋಮಾಂಚನಗೊಳಿಸಿ
ತಮ್ಮ ಬೆಚ್ಚನೆ ಮನೆ ಮಂದಿಯ ನಿತ್ಯಾನ್ನಕೆ
ಹೋಳಿಗೆ ಹಾಲು ಕಾಣುವರು.

ಭಯಾತಂಕಗಳ ಯುದ್ಧ ಶಸ್ತ್ರಾಸ್ತ್ರ ಉತ್ಪಾದಿಸಿ
ಅಲ್ಲಿ ಇಲ್ಲಿ ಮಾರುಕಟ್ಟೆ ಸಂತೆ ಕಟ್ಟಿ
ಮುಂಗಡ ಮಾರಿ ಗಂಟು ಕಟ್ಟುವ ಸಾವ ಸರಕು ಸಗಟು ಸರಬರಾಜರೇ
ಯುದ್ಧವಿರೋಧೀ ಮಾತುಗಳಲಿ ತಟಸ್ಥ 'ಮುಖವಾಡ' ತೊಟ್ಟು
ವರುಷ ವರುಷವೂ ಹರುಷದಿಂದ ಸಡಗರಿಸಿ ಬಿಳಿ ಪಾರಿವಾಳ ಹಾರಿಬಿಟ್ಟು
ಬಿಳಿ ಪತಾಕೆ ಗಾಳಿಗಿಟ್ಟು
ಅವರಿಗೆ, ಇವರಿಗೆ ಬಿಟ್ಟು ಇನ್ನೊಬ್ಬರಿಗೆ
'ಶಾಂತಿ' ಪದಕವ ಕೊರಳಿಗೆ ತೂಗಿಟ್ಟು
ಎಲ್ಲರಿಗೂ 'ರಕ್ತಗೆಂಪು' ಬೊಟ್ಟಿಟ್ಟು
'ಜಗ ಶಾಂತಿ'ಗಾಗಿ ಯುದ್ಧ ನಿಷೇಧದ ಭಾಷಣ ಬೊಬ್ಬೆ ಹೊಡೆಯುವರು
ಯುದ್ಧ ಅಂತರ್ಯುದ್ಧದಲಿ ಬಿದ್ದು ಸತ್ತವರಿಗೆ ಸಂತಾಪಿಸಿ
ಬಾಂಬು ಬಂದೂಕು ರಾಕೆಟ್ಟು ಬಿಕರಿ ಲಾಭದ
ಕಾರ್ಪೊರೇಟ್ ಸಾಮಾಜಿಕ ಶೇಕಡ ಜವಾಬುದಾರಿ ದಾಖಲಿಸುವರು,
ಭೂಪಟದ ಮೇಲೆ ಯುದ್ಧವಿಲ್ಲದ ನಾಡ ತಡಕುವರು !

* * *

ಈಗೀಗ,
ಸುಡುಗಾಡು ಸಿದ್ಧರ ಕೈಬಿಡುವಿಲ್ಲ, ಶಾಂತ ಕುಂತು ಉಣ್ಣುವಂತಿಲ್ಲ ಕಣ್ಣು ಮುಚ್ಚುವಂತಿಲ್ಲ
ಅಲ್ಲಿ ಸಿಡಿತ, ಇಲ್ಲಿ ತುಳಿತ, ರಕ್ತದೋಕುಳಿಯ ನೋವುಸಾವುಗಳ ತಕಧಿಮಿತ...
ಸಿದ್ಧರಡುಗೆ ಒಲೆಯ ಬೆಂಕಿ ಹೊತ್ತುರಿದು ಹಸಿವ ಮರೆಸಿದರೂ,
ಸಿದಿಗೆ ಹೊತ್ತು ಬರುವವರ ಕಂಡು
ಸಾವಸಾಲಿಗೆ ಕೊನೆಯ ಕಾಣದೆ, ಸಿದ್ಧರ ಮನಸು ಹೊಟ್ಟೆಗೆ ಕಿಚ್ಚು ಬಿದ್ದಿದೆ
ಸಾವಸಂಗದ ಕಣ್ಣು ಕೋಡಿ ಬಿದ್ದಿದೆ.



**ವಾಸುದೇವ ಶರ್ಮಾ ಎನ್. ವಿ.**
೧೦, 'ಶಾರದ', ೮ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ, ಶ್ರೀನಿಧಿ ಬಡಾವಣೆ,
ಕೋಣನಕುಂಟೆ, ಬೆಂಗಳೂರು -೬೨



# ೧೪. ಗೀತೆಯ ಕೆಂಗಣ್ಣಿಗೆ ಬೆದರದ ಆಸುರೀಭಾವ

**ಪುರುಷೋತ್ತಮನು ಗೀತೆಯ ಪ್ರಕಾರ ಲೋಕದಲ್ಲಿ ಮತ್ತು ವೇದದಲ್ಲಿ ಮನ್ನಣೆ ಪಡೆದಿರುವವನು. ಆದ್ದರಿಂದ ವೇದಕ್ಕೆ ಮನ್ನಣೆ ಸಹಜವಾಗಿ ದೊರೆಯಬೇಕೆಂಬುದು ನಿರೀಕ್ಷೆ. ಕೇವಲ ವೇದ ಮತ್ತು ಅದರ ಅರ್ಥದ ವಿಷಯವಾಗಿದ್ದರೆ ಅದಕ್ಕೆ ಮನ್ನಣೆ ಯಥೇಚ್ಛವಾಗಿ ದೊರಕಿದ್ದೀತು, ಆದರೆ ಅದರ ಅರ್ಥವನ್ನು ದೂರಮಾಡಿ ಸಮುದಾಯದ ಒಂದು ವಿಭಾಗಕ್ಕೆ ಅಧಿಕಾರ ಸಾಧನವಾಗುವ ದುರದೃಷ್ಟ ಅದಕ್ಕೆ ಕೂಡಿಬಂತು. ಹಾಗೆಂದವರನ್ನು ಗೀತೆಯು 'ಆಸುರೀ ಭಾವದವರು' ಎಂದು ಉಗ್ರವಾಗಿ ಜರಿಯುತ್ತದೆ. ಸಾಮಾಜಿಕ ಪ್ರಶ್ನೆಗಳನ್ನೆತ್ತುವವರ ಪ್ರತಿನಿಧಿಯಾಗಿ ಕಲ್ಪನೆಗೊಂಡ ಅರ್ಜುನನಿಗೆ ತನ್ನ ಸಿದ್ಧಾಂತವನ್ನು ಅಯಸ್ಕಾಂತ ಶಕ್ತಿಯಿಂದ ಪ್ರತಿಪಾದಿಸಿದ ಗೀತೆಯ ಕರ್ತೃವು, ಆಕ್ಷೇಪವೆತ್ತುವ ಪೂರ್ವಪಕ್ಷದ ಮಂದಿಯ ಮೇಲೆ ೧೬ನೆಯ ಅಧ್ಯಾಯದಲ್ಲಿ ಮೂದಲಿಕೆಯ ಮಳೆ ಸುರಿಸುತ್ತಾನೆ. ಮೂಲತಃ ಇದು ಯಾರ ಮೂದಲಿಕೆ ?**

**ಜಿ. ರಾಮಕೃಷ್ಣ**

ಗೀತೆಯ ಒಂಭತ್ತನೆಯ ಅಧ್ಯಾಯವನ್ನು "ರಾಜವಿದ್ಯಾರಾಜಗುಹ್ಯಯೋಗ" ಎಂದು ಕರೆಯಲಾಗಿದೆ. ಅದನ್ನು ಈಗಾಗಲೆ ನಾವು ಪರಿಚಯಿಸಿಕೊಂಡಿದ್ದೇವೆ. ಅದರಲ್ಲಿ ಭಗವಾನನು ತನ್ನ ಬಗ್ಗೆ ಹೇಳಿಕೊಂಡಿರುವ ಒಂದು ಸಂಗತಿಯನ್ನು ನೆನೆಯೋಣ : "ಎಲ್ಲ ಜೀವ ಮತ್ತು ಅಜೀವ ವಸ್ತುಗಳ ಮಹಾನ್ ಈಶ್ವರ ನಾನು; ಅದನ್ನು ತಿಳಿಯದವರು, ಮಾನವ ದೇಹದಲ್ಲಿ ಅವತರಿಸುವ ನನ್ನನ್ನು ಅವಗಣನೆ ಮಾಡುತ್ತಾರೆ. ಅವರೆಂಥವರೆಂದರೆ ಎಲ್ಲದರಲ್ಲೂ ಸೋತಿರುವವರು; ಅವರ ಆಸೆ, ಕ್ರಿಯೆ, ಜ್ಞಾನ, ಬುದ್ಧಿ, ಎಲ್ಲವೂ ವ್ಯರ್ಥವಾಗಿಹೋಗಿವೆ. ಅವರದು ಆಸುರೀ ಮತ್ತು ಮೋಹಿನೀ ಪ್ರಕೃತಿ." ಅಂದರೆ, ಅವರು ರಾಕ್ಷಸಪ್ರವೃತ್ತಿಯವರು ಇಲ್ಲವೇ ದೆವ್ವಗಳ ಪ್ರಕೃತಿಯವರು (೯.೧೧–೧೨ : ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಂ। ಪರಂಭಾವಮಜಾನಂತೋ ಮಮ ಭೂತಮಹೇಶ್ವರಂ॥ ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ। ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ॥). ಗೀತೆಯ ಕರ್ತೃವಿಗೆ ರಾಕ್ಷಸರ ಮತ್ತು ದೆವ್ವಗಳ ಪರಿಚಯವಿದೆಯೆಂದು ಇದರರ್ಥವಲ್ಲ. ಸಮಾಜದ ಒಂದು ವರ್ಗದ ಜನರು ಭಗವಾನನ ತಥಾಕಥಿತ ಶ್ರೇಯೋಗುಣಗಳನ್ನು ಗುರುತಿಸಿ, ವಿನೀತಭಾವದಿಂದ ಅವನನ್ನು ಶ್ಲಾಘಿಸಿ ಪೂಜಿಸುವುದಿಲ್ಲ ಎಂಬುದು ಗೀತೆಯ ಕರ್ತೃವಿಗೆ ಬೇಸರ ಉಂಟುಮಾಡಿದೆ.

ಹದಿನಾರನೆಯ ಅಧ್ಯಾಯಕ್ಕೆ ಬರುವ ವೇಳೆಗೆ ಬೇಸರವು ಕೋಪವಾಗಿ ಬದಲಾಗಿದೆ. ದೈವೀ ಪ್ರಕೃತಿಯು ಮಾನವನಿಗೆ ಮೋಕ್ಷದ ಹಾದಿ ತೋರುತ್ತದೆ ಮತ್ತು ಆಸುರೀ ಪ್ರಕೃತಿಯು ಬಂಧನಕ್ಕೆ ಕಾರಣವಾಗುತ್ತದೆ ಎಂದು ಶಂಕರ ಭಾಷ್ಯವು ಹದಿನಾರನೆಯ ಅಧ್ಯಾಯದ ಪೀಠಿಕೆಯಲ್ಲಿ ಹೇಳಿದೆ (...ಸಂಸಾರಮೋಕ್ಷಾಯ ದೈವೀ ಪ್ರಕೃತಿಃ ನಿಬಂಧನಾಯ ಆಸುರೀ ರಾಕ್ಷಸೀ ಚ). ಮೊದಲನೆಯದು ಸಾತ್ವಿಕ ಸಂಪತ್ತಿನ ಫಲ, ಎರಡನೆಯದು "ಕೆಟ್ಟ" ರಾಜಸಿಕ ಮತ್ತು ತಾಮಸಿಕ ವಾಸನಾಫಲ. "ಪ್ರಜಾಪತಿಯ ಮಕ್ಕಳಲ್ಲಿ ದೇವತೆಗಳು ಮತ್ತು ರಾಕ್ಷಸರು ಎಂಬ ಎರಡು ವರ್ಗಗಳವರಿದ್ದರು" ಎಂದು ಗೀತೆಯು ಜನ್ಮತಾಳುವ ಕೆಲವು ಶತಮಾನಗಳ ಹಿಂದೆಯೇ ಬೃಹದಾರಣ್ಯಕ ಉಪನಿಷತ್ತು ಹೇಳಿದ್ದಿತು.

೧೬ನೆಯ ಅಧ್ಯಾಯವು ಆರಂಭವಾಗುವುದು ದೈವೀ ಸಂಪತ್ತನ್ನು ಜನ್ಮತಃ ಹೊಂದಿರುವವರು ಎಂತಹ ಮಹದ್ಗುಣಗಳನ್ನು ತಮ್ಮದನ್ನಾಗಿಸಿಕೊಂಡಿರುತ್ತಾರೆ ಎಂಬುದನ್ನು ಪಟ್ಟಿಮಾಡುವ ಮೂಲಕ. ಹುಟ್ಟಿನಿಂದಲೇ ಅವರು ಸಾತ್ವಿಕ ಗುಣಗಳ ತೇಜೋರಾಶಿ; ಇನ್ನು ಕೆಲವರು ಕೂಡ ಹುಟ್ಟಿನಿಂದಲೇ ಆಸುರೀ ಸ್ವಭಾವ ದವರು. ಹೀಗೆ ಎಲ್ಲಾ ಹುಟ್ಟಿನಿಂದಲೇ ನಿರ್ಧಾರವಾಗಿ ಬಿಟ್ಟಿದ್ದರೆ ಮನುಷ್ಯ ಪ್ರಯತ್ನಕ್ಕೆ ಸ್ಥಾನವೆಲ್ಲಿಯದು ? ತನ್ನನ್ನು ತಾನು ಬದಲಾಯಿಸಿಕೊಳ್ಳಲು ಎಳಸುವುದು ವ್ಯರ್ಥವೆಂದು ಹೇಳುವುದಾದರೆ ಯಾರನ್ನು ತಾನೆ ಏಕೆ ದೂಷಿಸಬೇಕು ? ಯಥಾಸ್ಥಿತಿಯನ್ನು ಒಪ್ಪಿಕೊಂಡು ತೆಪ್ಪಗಿರಬೇಕು, ಅಷ್ಟೆ. ಸ್ಥಿತಪ್ರಜ್ಞತ್ವವನ್ನು ಸಾಧಿಸಿಕೊಳ್ಳಬೇಕೆಂದು ಪ್ರೇರೇಪಿಸುವ ಗೀತೆಯು ಯಥಾಸ್ಥಿತಿಯು ಅನಿವಾರ್ಯ, ಅದು ಹುಟ್ಟಿನಿಂದಲೇ ತೀರ್ಮಾನವಾಗಿ ಹೋಗಿದೆ ಎಂದು ಹೇಳಿದರೆ ಎರಡನ್ನೂ ಸಮಂಜಸಗೊಳಿಸಿಕೊಳ್ಳುವುದಾದರೂ ಹೇಗೆ ? ಅಸ್ತಿತ್ವದಲ್ಲಿರುವ ವರ್ಣವಿಭಜನಾ ವ್ಯವಸ್ಥೆಯು ಲುಪ್ತವಾಗಿಹೋಗುತ್ತದೆ ಎಂಬ ಆತಂಕವನ್ನು ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿತ್ತು. ಶ್ರೇಣೀಕೃತ ವ್ಯವಸ್ಥೆಯನ್ನು ಪ್ರಶ್ನಿಸುವವರು ತಾನೆ ಆ ವಿಭಜನೆಗೆ ಕುತ್ತು ತರಬಹುದಾದಂಥವರು ? ಅವರನ್ನು ಆಸುರೀ ಪ್ರವೃತ್ತಿಯವರೆಂದು ಹದಿನಾರನೆಯ ಅಧ್ಯಾಯದಲ್ಲಿ ಗೀತೆಯು ಸಲೀಸಾಗಿ ಹೆಸರಿಸಿಬಿಡುತ್ತದೆ.

ದೈವೀ ಸಂಪತ್ತನ್ನು ಹುಟ್ಟಿನಿಂದಲೇ ಪಡೆದಿರುವವರು (೧೬.೩ : ...ಸಂಪದಂ ದೈವೀಂ ಅಭಿಜಾತಸ್ಯ ...; ಶಂಕರನ ಭಾಷ್ಯ : ...ದೈವೀಂ ದೈವಾನಾಂ ಸಂಪದಂ ಅಭಿಲಕ್ಷ್ಯ ಜಾತಸ್ಯ ದೈವವಿಭೂತ್ಯರ್ಹಸ್ಯ ಭಾವಿ ಕಲ್ಯಾಣಸ್ಯ ಇತ್ಯರ್ಥಃ) ಅಮೋಘವಾದ ಲಕ್ಷಣಗಳನ್ನು ಪಡೆದಿರುತ್ತಾರೆ. ಅಂತಹ ಲಕ್ಷಣಗಳು ಯಾವುವು ? ನಿರ್ಭಯತೆ, ಶುದ್ಧಮನಸ್ಸು, ಜ್ಞಾನ ಮತ್ತು ಯೋಗದಲ್ಲಿ ನಿಷ್ಠೆ, ದಾನಿಯಾಗಿರುವುದು, ಇಂದ್ರಿಯ ನಿಗ್ರಹ, ಯಜ್ಞದಲ್ಲಿ ಆಸ್ಥೆ, ವೇದಾದಿ ಅಧ್ಯಯನದಲ್ಲಿ ಆಸಕ್ತಿ, ಮಾರ್ದವತೆ, ಅಹಿಂಸಾ ಪ್ರವೃತ್ತಿ, ಸತ್ಯದ ನುಡಿ, ಕೋಪರಾಹಿತ್ಯ, ತ್ಯಾಗಪರನಾಗಿರುವುದು, ಶಾಂತಸ್ವಭಾವ, ನಿಂದನೆಯಲ್ಲಿ ತೊಡಗದಿರುವುದು, ಇತ್ಯಾದಿ (೧೬.೧–೩). ಈ ಗುಣಗಳೆಲ್ಲಾ ರಮ್ಯವಾದವೇ; ವೇದಾದಿ ಅಧ್ಯಯನ ಮಾಡದಿರುವವರೂ ಈ ಗುಣಗಳಿಗಾಗಿ ತಹತಹಿಸುವುದು ಅಸ್ವಾಭಾವಿಕವೇನಲ್ಲ. ಆದರೆ ಹುಟ್ಟಿನಿಂದಲೇ ಅವರು ಆಸುರೀ ಭಾವದವರು; ಆದ್ದರಿಂದ ಅವರ ಸಂಪತ್ತೆಲ್ಲಾ ಕ್ಷುದ್ರವಾದವು. ತೋರಿಕೆಗೆ ಅವರು ಧರ್ಮಭೀರುಗಳು, ಅಷ್ಟೆ. ಅಂದರೆ, ದಂಭವು ಅವರ ಲಕ್ಷಣ. ಧರ್ಮದ ಧ್ವಜ ಹಿಡಿದಿರುತ್ತಾರೆ, ಆದರೆ ಅದನ್ನು ಪಾಲಿಸುವುದಿಲ್ಲ. (ಶಂಕರ : ದಂಭಃ ಧರ್ಮಧ್ವಜಿತ್ವಂ). ಜೊತೆಗೆ, ದರ್ಪ ಬೇರೆ. ತಮ್ಮ ಬಗ್ಗೆ ಅವರಿಗೆ ಎಲ್ಲಿಲ್ಲದ ಅಭಿಮಾನ; ಅಂದರೆ, ಅವರು ಅತಿಮಾನಿಗಳು. ಕೋಪ, ಒರಟುತನ (ಪಾರುಷ್ಯ), ಅಜ್ಞಾನ, ಇವೆಲ್ಲಾ ಅವರ ಹುಟ್ಟುಗುಣಗಳು (೧೬.೪).

ಅರ್ಜುನನಂಥವರು ವ್ಯಥಿಸಬೇಕಾಗಿಲ್ಲ. ಏಕೆಂದರೆ

ಹುಟ್ಟಿನಿಂದಲೇ ಅವರದು ದೈವೀ ಸಂಪತ್ತು (೧೬.೫ : ... ಮಾ ಶುಚಃ ಸಂಪದಂ ದೈವೀಂ ಅಭಿಜಾತಃ ಅಸಿ ಪಾಂಡವ). ಆದರೆ ಆಸುರೀ ಭಾವದವರು ಪುರುಷಾರ್ಥಗಳಲ್ಲಿ ಆಸಕ್ತರಲ್ಲ ಮತ್ತು ಅವುಗಳಿಗೆ ವ್ಯತಿರಿಕ್ತವಾದವುಗಳಲ್ಲಿ ನಿರಾಸಕ್ತರಲ್ಲ (೧೬.೭ : ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ । ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ॥). ಸ್ವಚ್ಛತೆ, ಶುದ್ಧ ಆಚಾರಗಳು, ಸತ್ಯ ನುಡಿ, ಯಾವುದೂ ಅವರಲ್ಲಿರುವುದಿಲ್ಲ. ಅವೂ ಹುಟ್ಟಿನಿಂದಲೇ ಅಂಟಿಕೊಂಡು ಬಂದಿರುವ ಅವಲಕ್ಷಣಗಳು !!

"ಇರುವುದು" ಮತ್ತು "ಆಗುವುದು", ಇವೆರಡೂ ಬೇರೆಬೇರೆ. "ಇರುವುದಕ್ಕೆ" ಕಾರಣ ಮತ್ತು ಹಾಗೆ "ಇರುವುದು" ಸಂಪೂರ್ಣವಾಗಿ ವ್ಯಕ್ತಿಯ ಕೈಯ್ಯಲ್ಲಿ ಇಲ್ಲ, ಆದರೆ "ಆಗುವುದು" (ಅಂದರೆ, ಪರಿವರ್ತನೆ ಹೊಂದುವುದು, ಬದಲಾಗುವುದು) ಭಾಗಶಃ ಆದರೂ ವ್ಯಕ್ತಿಯ ಕೈಯ್ಯಲ್ಲಿದೆ. ಮತ್ತೆ ಒತ್ತಿ ಹೇಳಿಕೊಳ್ಳೋಣ : "ಇರುವಿಕೆಯು" ಬದಲಾವಣೆಗೆ ಸಿಲುಕುವಂಥದಲ್ಲವೆಂದಾದರೆ ಮಾನವ ಪ್ರಯತ್ನವು ಅಪ್ರಸ್ತುತ. ತತ್ತ್ವಶಾಸ್ತ್ರದ ಯಾವ ಪ್ರಣಾಲಿಕೆಯೂ ಇಂತಹ ಘೋರ ಶಾಪವನ್ನು ಮಾನವನಿಗೆ ಕೊಟ್ಟಿಲ್ಲ; ಬದಲಾವಣೆಯು ಸರ್ವಥಾ ಶಕ್ಯವೆಂದೇ ದರ್ಶನಗಳು ಚಿಂತನೆಯನ್ನು ಆರಂಭಿಸುವುದು. ಉದಾಹರಣೆಗೆ, ಶಂಕರನ ನಿರೂಪಣೆಯನ್ನು ನೋಡಬಹುದು. "ಅವಿದ್ಯೆ" ಎಂಬುದು ಮಾನವನಲ್ಲಿದೆ, ಆದರೆ ಅದನ್ನು ಮೀರಿ, ನೈಜವಿದ್ಯೆಯನ್ನು ಪಡೆದು ಮಾನವ ಭಿನ್ನನಾಗಬಲ್ಲನು; ಕಡೆಗೆ ಬ್ರಹ್ಮಸಾಕ್ಷಾತ್ಕಾರವನ್ನು ಸಹ ಪಡೆಯಬಲ್ಲ. ಅದಕ್ಕೊಂದು ಹಾದಿಯಿದೆ, ಅದನ್ನು ಅನುಸರಿಸಿದರೆ ಮಾನವ ಬದಲಾಗಬಲ್ಲ. ಗೀತೆಯು ದೈವೀ ಮತ್ತು ಆಸುರೀ ಸಂಪತ್ತು ಹುಟ್ಟಿನಿಂದಲೇ ಬಂದಿವೆಯೆಂದು ಭಾವಿಸುತ್ತದೆ, ಆದರೆ ಅವು ಬದಲಾವಣೆಗೆ ಪಾತ್ರವಾಗಬಲ್ಲವೆಂಬ ನಿಲುವನ್ನು ತಾಳಿಲ್ಲ. ವರ್ಣವಿಭಜನೆಯು ಸಾಮಾಜಿಕ ಸತ್ಯ ಮತ್ತು ಅದು ಬದಲಾಗಕೂಡದು ಎಂಬ ನೆಲೆಯಲ್ಲಿ ಚಿಂತನೆಯನ್ನು ಬೆಳೆಸಿದಾಗ ಅಥವಾ ಅದು ಪರಮಾತ್ಮನೇ ಸೃಷ್ಟಿಸಿರುವ ವ್ಯವಸ್ಥೆಯೆಂದು ಸಾರಿದಾಗ, ಬದಲಾವಣೆ ಸಾಧ್ಯವಿಲ್ಲ ಎಂಬುದಕ್ಕಿಂತಲೂ ಬದಲಾವಣೆ ಕೂಡದು ಎಂಬ ಇಂಗಿತವಿರುತ್ತದೆ.

ಆಸುರೀ ಪ್ರವೃತ್ತಿಯ ಲಕ್ಷಣಗಳನ್ನು ಗೀತೆಯು ದೀರ್ಘವಾಗಿ ಮತ್ತು ವ್ಯಗ್ರತೆಯಿಂದ ನಿರೂಪಣೆ ಮಾಡಿದೆ. ಅದನ್ನು ಸೂಕ್ಷ್ಮವಾಗಿ ಅವಲೋಕಿಸುವುದು ಅವಶ್ಯಕ. ಹಾಗೆ ಮಾಡಿದಾಗ ಗೀತೆಯ ಕರ್ತೃವು ಯಾರನ್ನುದ್ದೇಶಿಸಿ ಕಟುಟೀಕೆ ಮಾಡುತ್ತಿದ್ದಾನೆಂಬುದು ಅರಿವಿಗೆ ಬರುತ್ತದೆ. ಅಧ್ಯಾಯದ ಕೊನೆಯ ಶ್ಲೋಕವನ್ನೇ ಮೊದಲು ಅವಲೋಕಿಸೋಣ : ತಸ್ಮಾತ್ ಶಾಸ್ತ್ರಂ ಪ್ರಮಾಣಂ ತೇ ಕಾರ್ಯ-ಅಕಾರ್ಯ ವ್ಯವಸ್ಥಿತೌ। ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಂ ಇಹ ಅರ್ಹಸಿ ॥ (೧೬.೨೪). ಯಾವುದು ಮಾಡಬೇಕು, ಯಾವುದು ಮಾಡಬಾರದು, ಎಂಬುದಕ್ಕಿರುವ ಒಂದೇ ಆಧಾರ, ಸಂಹಿತೆ, ಅಥವಾ ಪ್ರಮಾಣವೆಂದರೆ "ಶಾಸ್ತ್ರ". ಸ್ವಲ್ಪ ಲಘುವಾಗಿ ಹೇಳುವುದಾದರೆ, ಶಾಸ್ತ್ರಿಯು ಮಾಡಿದ್ದು ಶಾಸ್ತ್ರ. ಬುದ್ಧನನ್ನು ಅವನ ಶಿಷ್ಯ ಆನಂದನು ಕೇಳಿದ್ದ ಪ್ರಶ್ನೆ ಮತ್ತು ಅದಕ್ಕೆ ಬುದ್ಧ ನೀಡಿದ್ದ ಉತ್ತರವನ್ನು ಹಿಂದೆಯೇ ಒಮ್ಮೆ ಪ್ರಸ್ತಾಪಿಸಲಾಗಿತ್ತು. "ಧರ್ಮಶಾಸ್ತ್ರಗಳಲ್ಲಿ ಹೀಗೆ ಹೇಳಲಾಗಿದೆ, ನೀವು ಅದಕ್ಕೆ ವಿರುದ್ಧವಾಗಿ ಹೇಳುತ್ತಿದ್ದೀರಿ; ನಾವು ಇದನ್ನು ಹೇಗೆ ತಿಳಿಯಬೇಕು ?" ಇದು ನಮ್ಮ ದೇಶದ ಸಂಸ್ಕೃತಿಯಲ್ಲಿ ಅನೂಚಾನವಾಗಿ ಬಂದಿರುವ ಒಂದು ದ್ವಂದ್ವ. ಗೀತೆಯ ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿರುವ ದ್ವಂದ್ವವೂ ಇದೇ. ಬುದ್ಧ ಹೇಳಿದ, "ಆನಂದ, ಶಾಸ್ತ್ರದಲ್ಲಿ ಹಾಗೆ ಹೇಳಲಾಗಿದೆಯೇನು ? ಹಾಗಿದ್ದರೆ ಅದನ್ನು ಬದಲಾಯಿಸಿ ಹೇಳಬೇಕು, ಅಷ್ಟೆ."

ಇದು ಯಥಾವತ್ತಾಗಿ ಇವೇ ಮಾತುಗಳಲ್ಲಿ ಆನಂದ ಮತ್ತು ಬುದ್ಧನ ನಡುವಿನ ಮಾತುಗಳಲ್ಲ, ಆದರೆ ಆ ಸಂವಾದದ ಸಾರ ಇದೇ ಆಗಿದೆ. ಬುದ್ಧನಿಗೂ ಮುಂಚಿನಿಂದ ಇಂತಹ ನಿಲುವನ್ನು ತಾಳಿದ್ದವರು ಲೋಕಾಯತರು. ಆದ್ದರಿಂದ ಲೋಕಾಯತರು ಮತ್ತು ಬುದ್ಧ ಗೀತೆಗೆ ಕಠಿಣವಾದ ಪೂರ್ವಪಕ್ಷ. ಗೀತೆಯ ಸಿದ್ಧಾಂತವು ಯಾವುದನ್ನು ದೈವೀಕೃತ ಮತ್ತು ಜನ್ಮದಿಂದಲೇ ಬಂದಿದ್ದು ಎಂದು ಬಗೆಯುತ್ತದೆಯೋ ಅದನ್ನು ಲೋಕಾಯತರು ಮತ್ತು ಬುದ್ಧ ಸಂಪೂರ್ಣವಾಗಿ ನಿರಾಕರಿಸುತ್ತಾರೆ. ಆದ್ದರಿಂದಲೇ ಗೀತೆಯು ಅವರ ನಿಲುವನ್ನು "ಆಸುರೀಭಾವ" ಎಂದು ತೆಗಳುತ್ತದೆ ಮತ್ತು ಖಂಡಿಸುತ್ತದೆ. ಆಸುರೀ ಭಾವದ ಹೆಸರಲ್ಲಿ ಆರೋಪಿಸಲಾಗಿರುವ ಎಲ್ಲ ಲಕ್ಷಣಗಳು ಲೋಕಯತರಲ್ಲಾಗಲಿ, ಬುದ್ಧನಲ್ಲಾಗಲಿ ಇಲ್ಲ. ಆದರೆ ಅಲ್ಲಿ ಉಕ್ತವಾಗಿರುವ ಕೆಲವು ಲಕ್ಷಣಗಳು ಖಂಡಿತವಾಗಿಯೂ ಅವರಲ್ಲಿವೆ. ಕಡೆಯ ಶ್ಲೋಕದಲ್ಲಿ ಭಗವಾನನು ಅರ್ಜುನನಿಗೆ ಉಪದೇಶಿಸಿರುವುದಿದು : "ಕಾರ್ಯ ಮತ್ತು ಅಕಾರ್ಯ ಯಾವುದೆಂದು ತೂಗಿ ನಿರ್ಧರಿಸಲು ಶಾಸ್ತ್ರವನ್ನು ಪ್ರಮಾಣವಾಗಿ ಸ್ವೀಕರಿಸು; ಶಾಸ್ತ್ರವನ್ನು ತಿಳಿದು ಅದರಂತೆ ನೀನು ಕರ್ಮನಿರತನಾಗು." ಇದಕ್ಕೆ ಕಟ್ಟಾ ವಿರೋಧಿಗಳು ಲೋಕಾಯತರು ಮತ್ತು ಬುದ್ಧ. ಪ್ರಾಚೀನ ಭಾರತದಲ್ಲಿ ಅಂಥವರು ಬೇರೆಯವರೂ ಇದ್ದರು. ಶಾಸ್ತ್ರವಿಧಿಗಳಿಂದಾಗಿಯೇ ಸಂಕಷ್ಟಗಳಿಗೆ ಈಡಾಗಿದ್ದವರು ಪ್ರಜ್ಞಾಪೂರ್ವಕವಾಗಿ ಅಂತಹ ವಿಧಿಗಳ ಸಮರ್ಥಕರಾಗಿದ್ದಿರಲಾರರು. ಅಂತಹ "ಶಾಸ್ತ್ರೀಯ" ಪ್ರಜ್ಞೆಗೆ ಅವಕಾಶವೇ ಇಲ್ಲದಂತಹ ಕತ್ತಲೆಯ ಲೋಕಕ್ಕೆ ಅವರನ್ನು ದೂಡಿ "ಅವರು ಶಾಸ್ತ್ರೋಕ್ತ ವಿಧಿಗಳ ವಿರೋಧಿಗಳಲ್ಲ" ಎಂದು ಹೇಳಿ ಬೀಗುವುದು ಶುದ್ಧ ನಾಗರಿಕತೆ ಮತ್ತು ಸಂಸ್ಕೃತಿಗೆ ಶೋಭಿಸುವುದಿಲ್ಲ. ಶಾಸ್ತ್ರವು ಹೇಳಿದ್ದರಿಂದ ಸನ್ನಿವೇಶವು ಅಂಧಕಾರಮಯವಾಗಿತ್ತೆಂದು ಇದರ ತಾತ್ಪರ್ಯವಲ್ಲ. ಉತ್ಪಾದನಾ ಸಾಧನಗಳು, ವಿಧಾನ, ಸಂಬಂಧಗಳು, ಇವೆಲ್ಲಾ ಅಂದಂದಿನ ಸನ್ನಿವೇಶಗಳಿಗೆ ಮೂಲಕಾರಣ. ಅದರಿಂದ ಲಬ್ಧವಾಗಿರುವ ಸನ್ನಿವೇಶವನ್ನು ಸಾರ್ವಕಾಲಿಕವಾಗಿರಬೇಕೆಂದು ಶಾಸ್ತ್ರಗಳು ಸೂತ್ರೀಕರಿಸಿರುತ್ತವೆ. ಆದರೆ ಉತ್ಪಾದನಾ ಸಂಬಂಧಗಳು ಶಾಶ್ವತವಲ್ಲ, ಅದಕ್ಕೇನು ಮಾಡುವುದು ! ಎಷ್ಟು ಸಾಧ್ಯವೋ ಅಷ್ಟು ಶಾಶ್ವತವಾಗಿಸಲು ಗೀತೆಯಂತಹ ಗ್ರಂಥಗಳ ಬೋಧನೆಗಳು ಸಮರ್ಥವಾದಾವು. ಈ ಅರ್ಥದಲ್ಲಿ ಗೀತೆಯು ಯಥಾಸ್ಥಿತಿವಾದದ ಪ್ರಬಲವಾದ ಗುರಾಣಿ. ಇಂದಿಗೂ ಅದಕ್ಕೆ ನೀಡಲಾಗುವ ಮಾನ್ಯತೆಗೆ ಸಹ ಇದು ಒಂದು ಪ್ರಬಲ ಕಾರಣ. ಸ್ಥಿತಪ್ರಜ್ಞತ್ವ, ಧ್ಯಾನ, ಭಕ್ತಿ, ಮುಂತಾದುವು ವರ್ಗ ವಿಭಜನೆಯ ಜೊತೆಯಲ್ಲಿ ಬರುವಂಥವು. ಅವು ಪೂರಕವೇ ವಿನಾ ಪರ್ಯಾಯವಲ್ಲ. ಅನುಕರಣೀಯ ಸ್ಥಿತಪ್ರಜ್ಞನು ಶ್ರೇಷ್ಠ-ಕನಿಷ್ಠ ಎಂದು ವ್ಯಕ್ತಿಗಳನ್ನು ವಿಂಗಡಿಸುವ ಪದ್ಧತಿಯನ್ನು ಒಮ್ಮೆಯಾದರೂ ಮೀರಿ ನಿಲ್ಲಬೇಕಲ್ಲವೆ ? ಗೀತೆಯ ಹದಿನೆಂಟು ಅಧ್ಯಾಯಗಳಲ್ಲಿ ಅಂತಹ ಛಾಯೆ ಎಲ್ಲೆಲ್ಲೂ ಗೋಚರಿಸುವುದಿಲ್ಲ. ಶ್ಲಾಘಿಸಿ ಎತ್ತಿಹಿಡಿಯಲು ಸ್ಥಿತಪ್ರಜ್ಞತ್ವ, ಆಚರಣೆಯಲ್ಲಿ ಅಚಲ ನಿಷ್ಠೆ ಮತ್ತು ವ್ಯವಹಾರ "ಪರಮಾತ್ಮನೇ ಸೃಷ್ಟಿಸಿರುವ" ವರ್ಣ ವಿಭಜನೆಗೆ. ಪರಮಾತ್ಮನಾದರೂ ಅಷ್ಟು ಹೃದಯಹೀನನೇಕಾದ ? ಅಂತಹ ನಿಟ್ಟಿನಲ್ಲಿ ಪ್ರತಿರೋಧ ಒಡ್ಡಿದವರು ಲೋಕಾಯತರು, ಬುದ್ಧ, ಇತ್ಯಾದಿಗಳು. ಅದ್ವೈತ ವೇದಾಂತವನ್ನು ನಿಖರವಾಗಿ ಮತ್ತು ದಾರ್ಶನಿಕ ಪಾಂಡಿತ್ಯದಿಂದ ಪ್ರತಿಪಾದಿಸಿದ ಶಂಕರನು ಒಂದು ಅತಿಮುಖ್ಯ ಅಡಿಟಿಪ್ಪಣಿ ಬರೆದುಬಿಟ್ಟ: "ಮನು ಹೇಳಿದ್ದು ಪರಮಸತ್ಯ", ಎಂದು. ಅಂದರೆ, ಧರ್ಮಶಾಸ್ತ್ರವು ದಾರ್ಶನಿಕ ಪ್ರತಿಪಾದನೆಯನ್ನು ಮೀರಿನಿಂತಿತು, ಮೆಟ್ಟಿನಿಂತಿತು. ಇಂದಿಗೂ ತತ್ತ್ವಶಾಸ್ತ್ರದ ಅಧ್ಯಯನವು ಧರ್ಮಶಾಸ್ತ್ರದ ಅವಿಚಾರಿತ ರಮಣೀಯವನ್ನು ಪಕ್ಕಕ್ಕೆ ತಳ್ಳಿ ನೆಟ್ಟಗೆ ಸಮಾನತೆಯ ಹಾದಿಯಲ್ಲಿ ಮುಂದೆಸಾಗಲು ಸಾಧ್ಯವಾಗಿಲ್ಲದಿರುವುದು ಶೋಚನೀಯ.

ಗೀತೆಯು ಆಸುರೀ ದೃಷ್ಟಿಯನ್ನು ಚಿತ್ರಿಸಿರುವ ಪರಿಯನ್ನು ಇನ್ನೂ ಸ್ವಲ್ಪ ವಿಶದವಾಗಿ ತಿಳಿಯೋಣ; ಲೋಕಾಯತರ ನಿಲುವು ಧುತ್ತನೆ ನಮ್ಮ ಮುಂದೆ ಬಂದು ನಿಂತಂತೆ ಆಗುತ್ತದೆಯೇನೋ ನೋಡೋಣ. ಗೀತೆಯು ಹೇಳುತ್ತದೆ :

*ಅಸತ್ಯಂ ಅಪ್ರತಿಷ್ಠಂ ತೇ ಜಗದಾಹುರನೀಶ್ವರಂ ।*
*ಅಪರಸ್ಪರಸಂಭೂತಂ ಕಿಮನ್ಯತ್ ಕಾಮಹೈತುಕಂ ॥* (೧೬.೮)

(ಜಗತ್ತು ಈಶ್ವರನಿಂದ ಸೃಷ್ಟಿಯಾಗಲಿಲ್ಲವೆಂದು ಅವರು ಹೇಳುತಾರೆ, ಜಗತ್ತಿಗೆ ಆಲಂಬನವಿಲ್ಲವೆನ್ನುತ್ತಾರೆ. ಅಂದರೆ, ಧರ್ಮದ ಊರುಗೋಲಿಲ್ಲವೆಂದು ಭಾವಿಸುತ್ತಾರೆ. ಸ್ತ್ರೀ-ಪುರುಷರ ಅನ್ಯೋನ್ಯ ಸಂಯೋಗದಿಂದ ಜಗತ್ತು ಉತ್ಪತ್ತಿಯಾಗಿದೆ ಎನ್ನುತ್ತಾರೆ. – ಶಂಕರ ಭಾಷ್ಯ : ...ಕಾಮಪ್ರಯುಕ್ತಯೋಃ ಸ್ತ್ರೀ ಪುರುಷಯೋಃ ಅನ್ಯೋನ್ಯ ಸಂಯೋಗಾತ್ ಜಗತ್ ಸರ್ವಂ ಸಂಭೂತಂ... ಕಾಮಹೈತುಕಂ ಕಿಮನ್ಯತ್ ಜಗತಃ ಕಾರಣಂ ನ ಕಿಂಚಿತ್ ಅದೃಷ್ಟಂ ಧರ್ಮಾಧರ್ಮಾದಿ ಕಾರಣಾಂತರಂ ವಿದ್ಯತೇ ಜಗತಃ ಕಾಮ ಏವ ಪ್ರಾಣಿನಾಂ ಕಾರಣಂ ಇತಿ ಲೋಕಾಯತಿಕದೃಷ್ಟಿಃ ಇಯಂ). ನೇರವಾಗಿ ಲೋಕಾಯತರನ್ನು ಹೆಸರಿಸಿ ಶಂಕರರು ಉಪಕಾರ ಮಾಡಿದ್ದಾರೆನ್ನಬಹುದು.

ಲೋಕಾಯತರ ನಿಲುವನ್ನು ಗೀತೆಯು ಇಲ್ಲಿ ಆಸುರೀ ಪ್ರವೃತ್ತಿಯೆಂದು ಹೇಳಿದೆಯೆಂಬುದರಲ್ಲಿ ಶಂಕರನಿಗೆ ಎಳ್ಳಷ್ಟೂ ಅನುಮಾನವಿಲ್ಲ. ಗೀತೆಯ ದೂಷಣೆ ಇನ್ನೂ ಉಗ್ರವಾಗಿ ಮುಂದುವರಿಯುತ್ತದೆ :

*ಏತಾಂ ದೃಷ್ಟಿಂ ಅವಷ್ಟಭ್ಯ ನಷ್ಟಾತ್ಮನಃ ಅಲ್ಪಬುದ್ಧಯಃ ।*
*ಪ್ರಭವಂತಿ ಉಗ್ರಕರ್ಮಾಣಃ ಕ್ಷಯಾಯ ಜಗತಃ ಅಹಿತಾಃ ॥* (೧೬.೯)

(ಇಂತಹ ನಿಲುವನ್ನು ಸ್ವೀಕರಿಸಿ, ಈ ಅಲ್ಪಬುದ್ಧಿಯವರು ಜಗತ್ತಿಗೆ ಅಹಿತವಾದ ಉಗ್ರಕ್ರಿಯೆಗಳಲ್ಲಿ ತೊಡಗುತ್ತಾರೆ; ಅವರು ಭಾರಿ ಅಪಾಯಕಾರಿ ಜನ.)

ಲೋಕಾಯತರ ನಿಲುವೆಂದು ಮಾಧವನು ತನ್ನ "ಸರ್ವದರ್ಶನ ಸಂಗ್ರಹ"ದಲ್ಲಿ ಉಲ್ಲೇಖಿಸಿರುವ ಕೆಲವು ಮಾತುಗಳನ್ನು ನೋಡಿ :

ನಮ್ಮ ಮಾತಿದು : ಇರುವುದೇ ನಾಲ್ಕು ಭೂತಗಳು;
ಪೃಥ್ವೀ, ನೀರು, ತೇಜಸ್ಸು , ಗಾಳಿ.
ಇವುಗಳಿಂದಲೇ ಪರಿಣಾಮ ಪ್ರಜ್ಞೆಯದು;
ಕಿಣ್ವಾದಿಗಳ ಮಿಶ್ರಣದಿಂದ ಮದಶಕ್ತಿ ಹುಟ್ಟುವುದಿಲ್ಲವೇ, ಹಾಗೆ.
"ನಾನು ಡುಮ್ಮ", "ನಾನು ಬಡಕಲು", ಇದು ವ್ಯಕ್ತಿ ಧರ್ಮ.
ಅವಿರುವುದು ಶರೀರದ ಗುಣವಾಗಿ;
ಎಂದೇ ದೇಹವಲ್ಲದೆ ಬೇರೊಂದಿಲ್ಲ ಆತ್ಮನೆಂಬ ಹೆಸರಿನಲಿ.
"ನನ್ನ ದೇಹ" ವೆಂದಾಗ ರೂಪಕವಲ್ಲದೆ ಮತ್ತೇನದು !

✶ ✶ ✶

ಸ್ವರ್ಗವಿಲ್ಲ, ಮೋಕ್ಷವೂ ಇಲ್ಲ; ಬೇರೊಂದು ಲೋಕದಲಿ
ಆತ್ಮವೆಂಬುದಂತೂ ಇಲ್ಲವೇ ಇಲ್ಲ.
ನಾಲ್ಕು ಜಾತಿಗಳ ಕರ್ತವ್ಯಗಳು, ಅವರ ಕ್ರಮದ ವ್ಯವಸ್ಥೆ,
ಇದರಿಂದೇನಾದರೂ ಉಂಟೆ ನೈಜವಾದ ಪರಿಣಾಮ !

✶ ✶ ✶

ದಕ್ಷಿಣೆ, ದಾನ, ಎಲ್ಲವನು ಸೃಷ್ಟಿಸಿದವರು ಅವರಲ್ಲವೆ ?
ರಾತ್ರಿಯ ಕತ್ತಲೆಯಲ್ಲಿ ಹೊಂಚು ಹಾಕುವ ಕಳ್ಳರು,
ಅವರೇ ವಿಧಿಸಿದ್ದಾರೆ, ತಿನ್ನು ಮಾಂಸವನು, ಎಂದು

✶ ✶ ✶

"ರಾತ್ರಿಯ ಕತ್ತಲೆಯಲ್ಲಿ ಹೊಂಚು ಹಾಕುವ ಕಳ್ಳರು" ಎಂದಾಗ ಆಲಂಕಾರಿಕವಾದ ಭಾಷೆ ಇದೆ, ಡಾಂಭಿಕತೆಯ ಟೀಕೆ ಇದೆ. ತಾವು ಸೌಖ್ಯದಲ್ಲಿ ಮುಳುಗಿ ಇತರರನ್ನು ಮೌಢ್ಯದಲ್ಲಿ ಅದ್ದುವ ಜನರ ಬಗೆಗಿನ ತೀವ್ರವಾದ ವಿಮರ್ಶೆ ಇದು. ಲೋಕಾಯತರ ಸಾಮಾಜಿಕ ನಿಷ್ಠೆಗೆ ಇದೊಂದು ದ್ಯೋತಕ. ಜನರನ್ನು ಮೂಢನಂಬಿಕೆಗೆ ಗುರಿಮಾಡಿ ತಮ್ಮ ಬೇಳೆ ಬೇಯಿಸಿಕೊಳ್ಳುವ ಕೃತ್ರಿಮ ಮೌಲ್ಯಗಳ ಆರಾಧಕರಿಗೆ ಲೋಕಾಯತರು ಎಂದೂ ತಲೆ ಬಾಗಲಿಲ್ಲವೆಂಬುದು ಅವರ ಹಿರಿಮೆ.

ಮುಂದುವರಿದು, ಗೀತೆಯು ಆಸುರೀ ಪ್ರವೃತ್ತಿಯವರನ್ನು "ಅಶುಚಿ ವ್ರತ" ಗಳನ್ನು ಉಳ್ಳವರು ಎನ್ನುತ್ತದೆ (೧೬.೧೦). ಅವರದು ಪ್ರಾಚೀನ ಆದಿಮ ಬುಡಕಟ್ಟುಗಳ ನಿರಾಡಂಬರವಾದ ಆಚರಣೆಗಳು. ದೇವತೆಗಳನ್ನು ಪೂಜಿಸಿ, ಅಗ್ನಿಮುಖೇನ ಹವಿಸ್ಸನ್ನು ಅರ್ಪಿಸಿ, ಅವರು ಯಜ್ಞಾದಿಗಳನ್ನು ಮಾಡುವುದಿಲ್ಲ. "ಅವೇನೋ ಆಚರಣೆಗಳನ್ನು ಯಾವ ನಿರ್ದಿಷ್ಟ ವಿಧಿಗಳೂ ಇಲ್ಲದೆ, ಹುಚ್ಚುಹುಚ್ಚಾಗಿ ಮಾಡಿಬಿಡುತ್ತಾರೆ" (೧೬.೧೭ : ... ಯಜಂತೇ ನಾಮಯಜ್ಞೈಃ ತೇ ದಂಭೇನ ಅವಿಧಿಪೂರ್ವಕಂ). ಇದು ನೇರವಾಗಿ ಲೋಕಾಯತರ ಆಚರಣೆಗಳನ್ನು ನೆನಪಿಸುತ್ತದೆ. ಅವರು ಪ್ರಾಚೀನ ಬುಡಕಟ್ಟುಗಳ ಮಾಂತ್ರಿಕ ಆಚರಣೆಗಳಿಗೆ ನಿಷ್ಠರು. ಪ್ರಕೃತಿಯ ಅನುಕರಣೆಯಿಂದ ಪ್ರಕೃತಿಯ ಮೇಲೆ ಹಿಡಿತ ಸಾಧಿಸಬಹುದೆಂಬ ರಮ್ಯಭ್ರಮೆಯು ಆ ಆಚರಣೆಗಳಿಗೆ ಆಧಾರ. ಗೀತೆಯು ಅದನ್ನು "ನಾಮಯಜ್ಞ"ವೆಂದು ಕರೆದಿದೆ. ಇದರಲ್ಲಿ ದೇವತೆಗಳಿಗೆ ಹವಿಸ್ಸು ಅರ್ಪಿಸಿ ಇಂಥದನ್ನು ಕೊಡು ಎಂದು ಬೇಡಿಕೊಳ್ಳುವುದೇನೂ ಇಲ್ಲ. ನಿರೀಕ್ಷಿಸಿದ ಫಲವು (ಮಳೆ, ಬೆಳೆ, ಇತ್ಯಾದಿ) ಖಂಡಿತ ದೊರಕಿಯೇ ತೀರುತ್ತದೆಂಬ ಖಾತ್ರಿ ಅವರಿಗಿದೆ. ಹಾಗೆ ನೋಡಿದರೆ, ಪೂರ್ವಮೀಮಾಂಸಾ ದರ್ಶನವು ಸಹ ಯಜ್ಞವನ್ನು 'ನಾಮಯಜ್ಞ'ವೆಂಬಂತೆಯೇ ವ್ಯವಹರಿಸುತ್ತದೆ. ಇಷ್ಟಾರ್ಥವು ಮಂತ್ರದಿಂದ ಕೈಗೂಡುತ್ತದೆಯೇ ಹೊರತು ದೇವತೆಗಳ ಕೃಪೆಯಿಂದಲ್ಲ ಎಂಬುದು ಅದರ ನಿಲುವು. ಅಲ್ಲದೆ, ದೇವತೆಗಳು ಇಲ್ಲವೂ ಇಲ್ಲ, ಇರುವುದು ಕೇವಲ ಹೆಸರುಗಳಷ್ಟೇ ಎನ್ನುತ್ತದೆ ಪೂರ್ವಮೀಮಾಂಸೆ. "ಹೆಸರಿಗೆ ಮಾತ್ರ ಯಜ್ಞ" ಅದೆಂದು ಗೀತೆಯು ಅಂತಹ ಆಚರಣೆಗಳನ್ನು ಛೇಡಿಸುವುದಿಲ್ಲ. ಗೀತೆಯು ಪುರಸ್ಕರಿಸುವ ಯಜ್ಞಗಳ ಬಗೆಗೆ ಲೋಕಾಯತರು ಅಷ್ಟೇನೂ ನಯವಲ್ಲದ ಭಾಷೆಯಲ್ಲಿ, ತೀವ್ರ ವ್ಯಂಗ್ಯದಿಂದ, ಪ್ರತಿಕ್ರಿಯಿಸುತ್ತಾರೆ :

ಅಗ್ನಿಹೋತ್ರ, ಮೂರು ವೇದಗಳು, ಸಾಧುವಿನ ದಂಡಗಳು;
ಬೂದಿಯಿಂದ ಮುಚ್ಚಿದ ಮೈ ;
ಜ್ಞಾನ – ಪೌರುಷರಹಿತರಿಗೆ ಪ್ರಕೃತಿ ನೀಡಿದ
ಜೀವನ ವರವಣ್ಣಾ ಅವೆಲ್ಲಾ.

ಜ್ಯೋತಿಷ್ಟೋಮ ಯಾಗದಲಿ ಹತವಾದ ಪ್ರಾಣಿ
ಹೋಗುವುದಂತೆ ನೇರವಾಗಿ ಸ್ವರ್ಗಕ್ಕೆ !
ಹೌದೆ ? ಹಾಗಿದ್ದರೆ, ಯಾಗ ಮಾಡುವ ಮಹಾತ್ಮನೇ,
ನಿಮ್ಮಪ್ಪನನ್ನೇ ಬಲಿ ಕೊಡಬಾರದೇಕೆ ಈಗಲೇ ?

ಈಗ ಮತ್ತೆ ೧೬ನೆಯ ಅಧ್ಯಾಯದ ಆರಂಭದ ಶ್ಲೋಕಗಳಿಗೆ ಹಿಂದಿರುಗೋಣ: ಆಸುರೀ ಪ್ರವೃತ್ತಿಯವರ ತಥಾಕಥಿತ ಅವಗುಣಗಳನ್ನು ಭಗವಾನನು ಉದ್ವೇಗದಿಂದ ಪ್ರತಿಪಾದಿಸುವುದನ್ನು ಸವಿಯಲಡ್ಡಿಯಿಲ್ಲ ! ಅವರಿಗೆ ಎಂದೂ ತೃಪ್ತಿಯಾಗದಷ್ಟು ವಿಪುಲ ಆಸೆಗಳಿರುತ್ತವಂತೆ. ಅಹಂಕಾರ, ಜಂಭಗಳು ಮಾತ್ರವಲ್ಲದೆ ಕೆಟ್ಟ ಉದ್ದೇಶಗಳನ್ನು ಹೊಂದುವುದು ಅವರ ಜಾಯಮಾನ; ಅವರ ಆಚರಣೆಗಳು ಸಹ ಅಶುದ್ಧವಾದವು (೧೬.೧೦ : ... ಮೋಹಾತ್ ಗೃಹೀತ್ವಾ ಅಸತ್ ಗ್ರಾಹಾನ್ ಪ್ರವರ್ತಂತೇ ಅಶುಚಿವ್ರತಾಃ). ನೂರಾರು ಆಶಾಪಾಶಗಳಿಂದ ನಿಯಂತ್ರಿತರು ಅವರು; ಕಾಮ–ಕ್ರೋಧಗಳೆಂದರೆ ಅವರಿಗೆ ಸಹಜ. ಅಪಾಮಾರ್ಗದಿಂದ ಸಂಪತ್ತನ್ನು ಸಂಗ್ರಹಿಸುವುದು ಮತ್ತು ಅದನ್ನು ಭೋಗಿಸುವುದು ಅವರ ಲಾಲಸೆ (೧೬.೧೧ : ಆಶಾಪಾಶಶತೈಃ ಬದ್ಧಾಃ ಕಾಮಕ್ರೋಧಪರಾಯಣಾಃ । ಈಹಂತೇ ಕಾಮಭೋಗಾರ್ಥಂ ಅನ್ಯಾಯೇನ ಅರ್ಥಸಂಚಯಾನ್ ॥). ಏನು ಸಿಕ್ಕಿದರೂ ಬಾಚಿಕೊಳ್ಳುವುದು ಅವರ ದುರ್ಗುಣವಂತೆ. ಅದೂ ಬೇಕು, ಇದೂ ಬೇಕು ಎಂದು ಯಾವಾಗಲೂ ಸಂಪತ್ತಿನ ಆರಾಧಕರಾಗಿ ಬಿಡುತ್ತಾರೆ ಅವರು (೧೬.೧೩). ದೊಡ್ಡ ವಿಪರ್ಯಾಸವೆಂದರೆ, ಭಗವಾನನು ಅರ್ಜುನನಿಗೆ ಹೇಳಿದ್ದನಲ್ಲ, 'ಶತ್ರುಗಳನ್ನು ಕೊಂದು ದೊರೆಯಾಗಿ ಸಂಪತ್ತನ್ನು ಭೋಗಿಸು, ಇಲ್ಲವೇ ಸತ್ತು ಸ್ವರ್ಗಕ್ಕೆ ಹೋಗು' ಎಂದು; ಅದನ್ನೀಗ ಭಗವಾನನು ಆಸುರೀ ಭಾವದವರ ಲಕ್ಷಣವೆಂದು ಹೇಳುತ್ತಾನೆ ! "ಒಬ್ಬ ಶತ್ರುವನ್ನು ಕೊಂದಿದ್ದೇನೆ, ಬೇರೆಯವರನ್ನೂ ಕೊಲ್ಲುತ್ತೇನೆ; ನಾನು ಪ್ರಬಲನೂ ಸುಖಿಯೂ ಆಗಿದ್ದೇನೆ. ನಾನು ಶ್ರೀಮಂತ, ಉಚ್ಚಕುಲಕ್ಕೆ ಸೇರಿದ್ದೇನೆ; ನನ್ನ ಸಮ ಯಾರುಂಟು ?" ಎಂದೆಲ್ಲಾ ಅವನು ಬಡಬಡಿಸುತ್ತಾನಂತೆ (೧೬.೧೪ : ಅಸೌ ಮಯಾ ಹತಃ ಶತ್ರುಃ ಹನಿಷ್ಯೇ ಚ ಅಪರಾನಪಿ । ಈಶ್ವರೋऽಹಂ ಅಹಂ ಭೋಗೀ ಸಿದ್ಧೋऽಹಂ ಬಲವಾನ್ ಸುಖೀ ॥ ೧೬.೧೫ : ...ಅಭಿಜನವಾನಸ್ಮಿ ಕೋऽನ್ಯೋऽಸ್ತಿ ಸದೃಶೋ ಮಮ ।) ಇಂಥವರಿಗೆ ನರಕವೇ ಗಟ್ಟಿ (೧೬.೧೬ : ... ಪತಂತಿ ನರಕೇऽಶುಚೌ).

ಭಗವಾನನು ಆಸುರೀ ಪ್ರವೃತ್ತಿಯವರ ಬಗ್ಗೆ ಹೇಳುತ್ತಿದ್ದಾನೋ ಅಥವಾ ತನ್ನ ಪರಮಭಕ್ತರನೇಕರ ಜನ್ಮ ಜಾಲಾಡುತ್ತಿದ್ದಾನೋ ಎಂಬ ಅನುಮಾನವು ದಟ್ಟವಾಗುತ್ತದೆ; ಏಕೆಂದರೆ, ಇತಿಹಾಸದುದ್ದಕ್ಕೂ ಇಂತಹ ದುಷ್ಕೃತ್ಯಗಳಲ್ಲಿ ಮೀಯುತ್ತಿದ್ದವರು ಮತ್ತು ಇಂದು ಮೀಯುತ್ತಿರುವವರು ಅವನ ಪೂಜೆಯನ್ನು ಭಕ್ತಿಯಿಂದ ಮಾಡಿಯೇ ಕಣಜಗಳನ್ನು ಚಿನ್ನದಿಂದ ತುಂಬಿಕೊಳ್ಳುವ ಮಹಾನುಭಾವರು. ಪಾಪ, ಲೋಕಾಯತರು ಮತ್ತು ಬುದ್ಧ ದೈನಂದಿನ ಅವಶ್ಯಕತೆಗಳನ್ನು ಪೂರೈಸಿಕೊಂಡರೆ ಸಾಕೆಂದು ಕಾರ್ಪಣ್ಯದ ಜೀವನ ಸವೆಸಿದವರು. ಗೀತಾ ಪ್ರವಚನಗಳನ್ನು ಪುಂಖಾನುಪುಂಖವಾಗಿ ನೀಡುವ ಆಧುನಿಕ ಆಚಾರ್ಯರನೇಕರ ಜೀವನಶೈಲಿಯು ಭಗವಾನನು ಆಸುರೀ ವೃತ್ತಿಯವರ ಬಗೆಗೆ ಹೇಳಿರುವುದಕ್ಕೆ ಸರಿಸಮಾನವಾಗಿದೆ ಎಂಬುದಕ್ಕೆ ಪುರಾವೆಗಳು ಬೇಕೆ ?

ಕಡೆಗೆ ಭಗವಾನನು ಹೇಳುತ್ತಾನೆ : "ಅಂತಹ ಕ್ರೂರಿಗಳನ್ನು, ದ್ವೇಷಕ್ಕೆ ಅರ್ಹರಾದವರನ್ನು, ನರಾಧಮರನ್ನು, ಸತತವಾಗಿ ಆಸುರೀ ಯೋನಿಗಳಿಗೆ ದೂಡುತ್ತಲೇ ಇರುತ್ತೇನೆ. ಜನ್ಮಜನ್ಮಾಂತರಗಳಲ್ಲೂ ಆ ಮೂಢರು ಅಲ್ಲೇ ಕೊಳೆಯುತ್ತಿದ್ದು ಅಧಮರಾಗುತ್ತಾರೆ" (೧೬.೧೯–೨೦ : ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ । ಕ್ಷಿಪಾಮಿ ಅಜಸ್ರಂ ಅಶುಭಾನ್ ಆಸುರೀ ಷ್ವೇವ ಯೋನಿಷು ॥ ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿಜನ್ಮನಿ । ಮಾಂ ಅಪ್ರಾಪ್ಯೈವ ಕೌಂತೇಯ ತತೋ ಯಾಂತಿ ಅಧಮಾಂ ಗತಿಂ ॥). ಅವರೆಂದೂ ಭಗವಾನನ ಬಳಿಗೆ ಸಾರಲು ಸಮರ್ಥರಾಗುವುದಿಲ್ಲವಂತೆ ! ಏನೂ ಅಡ್ಡಿಯಿಲ್ಲ, ಏಕೆಂದರೆ ಹಾಗೆ ಸಾರಬೇಕೆಂದು ಲೋಕಯತರಾಗಲಿ, ಬೌದ್ಧರಾಗಲಿ ತವಕದಿಂದ ತುದಿಗಾಲ ಮೇಲೆ ನಿಂತಿಲ್ಲ. ಧರ್ಮವು ಗ್ಲಾನಿಯಲ್ಲಿ ಸಿಲುಕಿದಾಗೆಲ್ಲಾ ಅವತರಿಸಿ ಬಂದು ಅಧರ್ಮವನ್ನು ತೊಡೆದುಹಾಕುವ ಭಗವಾನನಿಗೆ ಆಸುರೀ ಪ್ರವೃತ್ತಿಯವರನ್ನು ಬದಲಾಯಿಸಲಾಗಲಿಲ್ಲವೆ ? ಹುಟ್ಟಿನಿಂದ ಅವರು ಆ ಪ್ರವೃತ್ತಿಯವರಾಗಿದ್ದು, ಜನ್ಮಾಂತರಗಳಲ್ಲೂ ಹಾಗೆಯೇ ಉಳಿಯುವಂತೆ ಭಗವಾನನು ಮಾಡುವುದಾದರೆ ಅವನ ಕ್ರಿಯಾಶಕ್ತಿ ನಗಣ್ಯವಾಗಿಬಿಡುವುದಿಲ್ಲವೆ ? ಹೋಗಲಿ, ಸ್ಥಿತಪ್ರಜ್ಞತ್ವವನ್ನು ಅಷ್ಟು ಸೊಗಸಾಗಿ ವರ್ಣಿಸಿದ ಭಗವಾನನು ಇಷ್ಟು ಅಸಹನೆಯ ಒರಟು ಭಾಷೆ ಬಳಸುವಷ್ಟು

ವ್ಯಗ್ರನಾಗಿಬಿಟ್ಟರೆ ಗೀತೆಯ ಕರ್ತೃವಿನ ಮನಃಸ್ಥಿತಿ ಯಾದರೂ ಎಂಥದು ? ಚಾರಿತ್ರಿಕವಾಗಿ ಸಮಾಜವು ಬದಲಾಗಲಿದೆಯೆಂಬ ಸೂಚನೆಯೇ ಅವನಿಗೆ ಇಷ್ಟು ಕೋಪವನ್ನು ತರಿಸಿದೆಯಲ್ಲ ! ಮೊದಲನೆಯ ಅಧ್ಯಾಯದ ಅರ್ಜುನನ ಪ್ರಶ್ನೆಯು ವರ್ಣ ವಿಭಜನಾ ವ್ಯವಸ್ಥೆಗೆ ಸಂಬಂಧಿಸಿತ್ತು. ಆ ಅರ್ಥದಲ್ಲಿ ಅವನು ಸಮಾಜದ ಅಂಕುಡೊಂಕುಗಳ ಪ್ರಶ್ನೆಯನ್ನು ಎತ್ತುವ ಲೋಕಾಯತರ ಪ್ರತಿನಿಧಿಯಾಗಿದ್ದ. ಅವನಿಗೆ ಮಂಕಿನ ಟೋಪಿ ತೊಡಿಸಿ ತನ್ನ ಭವ್ಯತೆಯನ್ನು ಅನಾವರಣ ಮಾಡಿದ ಭಗವಾನನು ಈಗ ತನ್ನ ಮನಸ್ಸಿನ ಮೇಲಿನ ಹತೋಟಿ ಕಳೆದುಕೊಂಡು ಅಸಭ್ಯವಾದ ಮಾತುಗಳನ್ನು ಬಳಸ ಹೊರಟಿದ್ದಾನೆ. ಗೀತೆಯ ಕರ್ತೃವಿನ ಹತಾಶೆಯ ಸೂಚನೆ ಇದಿರಬಹುದೆ ?

ಪ್ರಸ್ತುತ ನಮ್ಮ ದೇಶದಲ್ಲಿ ಕೆಲವು ಹಳೆಯ ಸಂಪ್ರದಾಯಗಳನ್ನಾಗಲಿ ಅದರ ಪ್ರತಿನಿಧಿಗಳನ್ನಾಗಲಿ ಸ್ವಲ್ಪ ಟೀಕಿಸಿದರೆ ಸಾಕು, "ನಮ್ಮ ಮನಸ್ಸಿಗೆ ನೋವುಂಟು ಮಾಡಿದ್ದಾರೆ, ಅವರನ್ನು ಜೈಲಿಗೆ ಕಳಿಸಿ" ಎಂದು ಬೊಬ್ಬಿಡುವವರಿದ್ದಾರೆ. ಗೀತೆಯು ಲೋಕಾಯತರನ್ನು ವಾದದಲ್ಲಿ ಎದುರಾಗುವುದನ್ನು ಬಿಟ್ಟು ಹೀಗೆ ಅಸಹನೆಯಿಂದ ಒರಟು ಭಾಷೆಯನ್ನು ಬಳಸಿದೆಯಲ್ಲಾ, ಯಾರ ಮನಸ್ಸಿಗೂ ನೋವಾಗುವುದಿಲ್ಲವೆ ? ಇಷ್ಟಕ್ಕೂ ಲೋಕಾಯತರು ಲಂಪಟರೆ ? ಶ್ರೇಷ್ಠ – ಕನಿಷ್ಠ ಎಂದು ಸಾಮಾಜಿಕರನ್ನು ವರ್ಣದ ಆಧಾರದಲ್ಲಿ ವಿಂಗಡಿಸಿದ್ದನ್ನು ಪ್ರಶ್ನಿಸಿದ್ದಕ್ಕೆ ಇಂತಹ ಕಪಾಳಮೋಕ್ಷ ! ಸಹನೆಯನ್ನು ಬೋಧಿಸುವ ಗೀತೆಯು ಸೈರಣೆಯನ್ನು ಕಳೆದುಕೊಂಡುಬಿಟ್ಟಿದೆ. ಗೀತೆಯನ್ನು ಆಪ್ಯಾಯಮಾನವೆಂದು ಸಂಭ್ರಮಿಸುವಾಗ ಈ ಕಡೆಗೂ ಸ್ವಲ್ಪ ಗಮನಕೊಟ್ಟರೆ ಒಳಿತು. ಯಾರನ್ನು "ಆಸುರೀ ಭಾವದವರು" ಎಂದು ಗೀತೆಯು ತೆಗಳಿದೆಯೋ ಅವರು ಅಂದಾಗಲಿ, ಇಂದಾಗಲಿ, ಸಹನೆ ಕಳೆದುಕೊಂಡು ವಿಚಲಿತರಾಗರು.

ಜಿ. ರಾಮಕೃಷ್ಣ
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ
ಬೆಂಗಳೂರು – ೫೬೦ ೦೮೫

# ಕಂಡುಹಿಡಿಯುವುದ್ಹೇಗೆ ಇದಕ್ಕೆ ಪರಿಹಾರ ?



ನ್ಯಾಯ ಮಂದಿರದಲ್ಲಿ ಅನ್ಯಾಯದ ತೊಟ್ಟಿಲು
ಮಲಗಿಸಿದ್ದಾಳೆ ಕರ್ರೆವ್ವ ಶಿಶುಮಾಡಿ ನ್ಯಾಯವ
ಅಳುವ ಶಿಶುವಿಗೂಡುತ್ತಿದ್ದಾಳೆ ಅನ್ಯಾಯದ ಹಾಲು
ಹಾಡೇ ಹಾಡುತ್ತಿದ್ದಾಳವಳು
ಲೋ ಲೋ... ಆಯೀ ಹಡೀ ಹಸಿ ಹುಸಿಯ ಲಾಲಿ

ರಾಜಮಂದಿರದಲ್ಲಿ ಲಂಚ ವಂಚನೆಯ ಮಂಚ
ಮಂಚದ ಮೇಲೆ ಬೆಳ್ಳಂ ಬೆಳ್ಳನೆಯ ಶೀಟು ಬೆಡ್‌ಶೀಟು
ಪವಡಿಸಿದ್ದಾನೆ ಬಿಳಿಮುಖದ ರಾಜ ಕರಿರಾಜ
ಬೊಗಳೆ ಪ್ರಮಾಣ ಮಾಡುತ್ತಿದ್ದಾನವನು
ಅವ್ವಣ್ಣಪ್ಪ ಆ ಚೌಡಮ್ಮನಾಣೆಗೂ ನಮ್ಮವ್ವ ಬೆಳ್ಳವ್ವ

ತ್ಯಾಗಮಂದಿರದಲ್ಲಿ ಭೋಗ ವೈಭೋಗದ ಆಸನ ಸಿಂಹಾಸನ
ಸಿಂಹಾಸನದ ಮೇಲೆ ಕಾವಿ ಭಗವಾನ್‌ಗಳ ವಸನ–ಲಾಂಛನ
ಹೆಣ್ಣು ಮಣ್ಣು ವಜ್ರ ವೈಢೂರ್ಯಗಳ ಹೋಮ–ಹವನ
ತುಟಿಯಂಚಿನಲ್ಲಿ ಊದುತ್ತಿದ್ದಾನವನು
ಧರ್ಮ–ಅಧ್ಯಾತ್ಮ–ತ್ಯಾಗ–ಯೋಗದ ಆಶೀರ್ವಚನ

ಅಕ್ಕರಾಲಯದಲ್ಲಿ ದಕ್ಷಿಣೆ – ಭಕ್ಷಣೆಯ ತಕ್ಕಡಿ
ಅಲ್ಲೊಬ್ಬ ಕುಂತಾನ ಅಕ್ಕರ ಬರದ ಭೂರಿ ಭಾರಿಯ ವ್ಯಾಪಾರಿ
ನಡಸ್ಯಾನ ಲಕ್ಷ್ಮಿ– ಸರಸ್ವತಿಯ ವ್ಯಾಪಾರ ಭರ್ಜರಿ
ಬಡಾಯಿ ಕೊಚ್ಚುತ್ತಿದ್ದಾನವನು
ಉತ್ತಮ–ಅತ್ಯುತ್ತಮ ಉಚ್ಚ ಸರ್ವೋಚ್ಚ ಶಿಕ್ಷಣದ ಮಂತ್ರವ

ಖಾಕಿ ಮಂದಿರದಲ್ಲಿ ಕಳ್ಳ ಸುಳ್ಳ ಪುಂಡ ಪೋಕರಿಗಳ ಮೇಳ
ನರಿ–ತೋಳ ಹುಲಿ–ಸಿಂಹಗಳಂತೆ ಇವುಗಳ ಘರ್ಜನೆ ಬಲುಜೋರ
ದಲಿತರ–ಬಡವರ, ಶೋಷಿತರ ಕೇಳುವವರಾರಿಲ್ಲ ಗೋಳ
ನ್ಯಾಯ ಕೇಳಲು ಬಂದ ಇಂಥ ಅಮಾಯಕರಿಗೇನೆ
ಇವು ಹಾಕ್ತಾವ ಗಾಳ.

ಸಮಾಜಸೇವಾಲಯಗಳಲ್ಲಿ ನಾಲಾಯಕರ ದರಬಾರು
ಚೋರಕಾಯಚೋರರ ಕೈಯಲ್ಲಿ ಅಮಾಯಕರ ದಸ್ತಾವೇಜು
ಕುರ್ಚಿ ಮೇಜುಗಳ ಮೇಲೆ ಸೇವಾಭಾವದ ಸಾಚಾ ಪೋಜು
ಅವ್ವಗ ಸಾಕ್ಷಿಗಿಟ್ಟು ಹೇಳ್ತಾರವರು
ಝಣಝಣ ಕಾಂಚಾಣಂ ಮಣ ಮಣ ಕಾರ್ಯಸಿದ್ಧಿಯಂ

ಒಲೆ ಹತ್ತಿ ಉರಿದರೆ ನಿಲ್ಲಬಹುದು, ನಿಲ್ಲಿಸಬಹುದು
ಆದರೆ ಧರೆಗೇಧರೆಯೇ ಹೊತ್ತಿ ಉರಿಯುತ್ತಿದೆ
ನಿಲ್ಲಿಸುವವರಾರು ? ನಿಲ್ಲಿಸುವ ಬಗೆಯಾದರೂ ಯಾವುದು ?
ಆ ಅಣ್ಣ ಬಸವಣ್ಣನಿಗೇನೇ ಸಿಕ್ಕಿಲ್ಲ ಇದಕುತ್ತರ
ಕಂಡುಹಿಡಿಯುವುದ್ಹೇಗೆ ಇದಕ್ಕೆ ಪರಿಹಾರ ?

ಡಾ॥ ಗುರುಲಿಂಗಪ್ಪ ಧಬಾಲೆ
ಮುಖ್ಯಸ್ಥರು, ಕನ್ನಡ ವಿಭಾಗ, ಸಿ. ಬಿ. ಖೇಡಗಿ ಬಸವೇಶ್ವರ ಮಹಾವಿದ್ಯಾಲಯ
ಅಕ್ಕಲಕೋಟ – ೪೧೩ ೨೧೬, ಸೋಲಾಪುರ ಜಿಲ್ಲೆ, ಮಹಾರಾಷ್ಟ್ರ



# ನವೆಂಬರ್ ಕ್ರಾಂತಿ ಮತ್ತು ಭವಿಷ್ಯದ ಹಾದಿ

**ಡಾ|| ಬಿ. ಆರ್. ಮಂಜುನಾಥ**

ಚಿಂದಿ ಬಟ್ಟೆಯುಟ್ಟ ಜನ, ಹಸಿವಿನಿಂದ ಓಡಾಡುವ ಪ್ರೇತಗಳಂತೆ ಕಾಣುತ್ತಿದ್ದ ರೈತರು, ರಕ್ತಸಿಕ್ತ ಬಟ್ಟೆಗಳಲ್ಲಿ, ಕೆದರಿದ ಕೂದಲು, ನಿದ್ರೆಯಿಲ್ಲದೆ ಕಣ್ಣು ಉರಿವ ಉಂಡೆಗಳಂತಿದ್ದ ಕಾರ್ಮಿಕರು ಅಂದು ಇದ್ದಕ್ಕಿದ್ದಂತೆ ರಷ್ಯಾದ ಒಡೆಯರಾಗಿದ್ದರು. ಜಗತ್ತು ಬೆಚ್ಚಿಬಿದ್ದಿತ್ತು. ಉಳ್ಳವರ ಸೊಲ್ಲಡಗಿತ್ತು. ಬಲ್ಲವರು ಬೆರಗಾಗಿ ನಿಂತಿದ್ದರು. ಮೊದಲ ಮಹಾಯುದ್ಧದ ಕಾರ್ಗತ್ತಲಿನ ನಡುವೆ ಅರುಣೋದಯವಾಗಿತ್ತು. ಅಂದಿನ ರಷ್ಯಾದ ಅನೇಕ ಜನಪ್ರಿಯ ಗೀತೆಗಳು ವ್ಯಕ್ತಪಡಿಸಿದ ಭಾವನೆಗಳು ಹೀಗಿದ್ದವು :

*ದುಡಿಮೆಯನು ರೊಟ್ಟಿಯನು ಬೇಡಿ ನಡೆದೆವು ನಾವು*
*ದೊರೆತದ್ದು ಹೊಗೆರಹಿತ ಚಿಮಣಿ, ಮೊಳಕೆಯಿಲ್ಲದ ಭೂಮಿ*
*ಮುಷ್ಟಿಗಟ್ಟಲು ನಮಗೆ ತೋಳಲ್ಲಿ ತ್ರಾಣವಿರಲಿಲ್ಲ*
*ತೋಪಿನಾ ದನಿ ಮೀರಿ ನಿಟ್ಟುಸಿರೇ ಕೇಳುತ್ತಿತ್ತಲ್ಲ !*
*ಓಹ್, ಲೆನಿನ್ ದಣಿದ ಗಂಟಲಿನ ಮಣಿಸಲಾಗದ ದನಿಯೆ*
*ಕಡೆಯ ಕದನದ ಕಬ್ಬಕ್ಕೆ ನೀ ಭಾಷೆಯೇ !*
*ಓ, ನವೆಂಬರ್, ಬಿಸಿಲದೂತನೇ, ಸವಿಗಾನವೇ, ಸಂತಸವೇ*
*ಮನ್ವಂತರದ ಬಂಡಾಯವೇ ಬೆರಗು ಬಿರುಗಾಳಿಯೇ*
*ಹೊಸ ತರುಣರ ಅರುಣ ರಂಗಿನ ಧ್ವಜವೇ ನವೆಂಬರ್ !*
*ನವೆಂಬರ್ ನವೆಂಬರ್ ವೀರವಿಪ್ಲವದ ನವೆಂಬರ್.*

ಇಡಿಯ ಜಗತ್ತನ್ನು ಬೆಚ್ಚಿಬೀಳಿಸಿದ ಆ ಮಹಾಕ್ರಾಂತಿಗೆ ಒಂದು ಇತಿಹಾಸವಿದೆ.

**ಹಿಂದಿನ ಕತೆ**

ಹದಿನೇಳನೆಯ ಶತಮಾನದಿಂದಲೂ ಯುರೋಪಿನಲ್ಲಿ ಜನತಾಂತ್ರಿಕ ಕ್ರಾಂತಿಗಳು ಘಟಿಸಿದ್ದವು. ಅದಕ್ಕೂ ಎರಡು ಶತಮಾನಗಳ ಮುಂಚಿನಿಂದಲೂ ಊಳಿಗಮಾನ್ಯ ಯುಗದ ಚಿಂತನೆಗಳ ವಿರುದ್ಧ ನವೋದಯದ (ರಿನೇಸಾನ್ಸ್) ಗಾಳಿ ಬೀಸಿತ್ತು. ಆದರೆ ಬಡಪಾಯಿ ರಷ್ಯಾ ಮಾತ್ರ ಅಲ್ಲಿನ ಚಳಿಗಾಲದ ಕರಡಿಗಳಂತೆ ದೀರ್ಘನಿದ್ರೆಯಲ್ಲಿತ್ತು – ಋತುಮಾನದ ನಿದ್ರೆಯಲ್ಲ, ಶತಮಾನಗಳ ನಿದ್ರೆ !

ರೊಮಾನೊವ್ ವಂಶದ ಝಾರ್ ದೊರೆಗಳು ರಷ್ಯಾವನ್ನು ತಮ್ಮ ಕಪಿಮುಷ್ಟಿಯಲ್ಲಿ ನಲುಗಿಸಿದ್ದರು. ರಷ್ಯಾದ ಆಧುನಿಕ ವಿದ್ಯಾವಂತ ಮನಸ್ಸುಗಳು ಎಷ್ಟೇ ಹಂಬಲಿಸಿದರೂ ದೇಶದಲ್ಲಿ ಬದಲಾವಣೆಯ ಗಾಳಿ ಬೀಸಲೇ ಇಲ್ಲ. ಗಾಢವಾದ ಆಧುನಿಕ ಆಕಾಂಕ್ಷೆಯ ರೆಕ್ಕೆಗಳು ಮತ್ತು ಕಾಲಿಗೆ ಕಟ್ಟಿದಂಥ ರಾಜಪದ್ಧತಿಯ ಸೀಸದ ಗುಂಡಿನ ವಿರುದ್ಧ ದಿಕ್ಕಿನ ಎಳೆತಗಳಲ್ಲಿ ರಷ್ಯಾ ಹೈರಾಣಾಯಿತು. ಈ ದ್ವಂದ್ವವೇ ಆ ಕಾಲದ ವಿಶ್ವದ ಶ್ರೇಷ್ಠ ಸಾಹಿತ್ಯವನ್ನು, ಚಿಂತಕರನ್ನು ಸೃಷ್ಟಿಸಿತು. ಮನುಕುಲಕ್ಕೆ ಈ ಅಮೂಲ್ಯ ಉಡುಗೊರೆ ನೀಡಲು ರಷ್ಯಾ ಅನುಭವಿಸಿದ ನೋವು ನಮಗೆ ಗೊತ್ತಿರಲಿಕ್ಕಿಲ್ಲ ! ಕಡೆಯ ಝಾರ್ ನಿಕೊಲಾಸ್, ಅವನ ದುರಹಂಕಾರಿ ರಾಣಿ, ಅವಳ ಸಲಹೆಗಾರನಾದ 'ಮಾಟಗಾರ' ರಾಸ್‌ಪುಟಿನ್‌ರ ದುಷ್ಟಕೂಟ ರಷ್ಯಾವನ್ನು ಸರ್ವನಾಶಕ್ಕೆ ಕೊಂಡೊಯ್ದಿತ್ತು. ಆ ಸಮಯದಲ್ಲಿ ಯುರೋಪಿನ ಮುಂದುವರಿದ ರಾಷ್ಟ್ರಗಳು ವಸಾಹತುಗಳನ್ನು ಮರುಹಂಚಿಕೆ ಮಾಡಿಕೊಳ್ಳಲಿಕ್ಕಾಗಿ ಯುದ್ಧಕ್ಕಿಳಿದವು. ಒಂದು ಕಡೆ ಜರ್ಮನಿ, ಆಸ್ಟ್ರಿಯಾ, ಟರ್ಕಿ ಮುಂತಾದ ವಸಾಹತು ಬೇಕೆಂದು ಹಸಿದಿದ್ದ ರಾಷ್ಟ್ರಗಳು. ಇನ್ನೊಂದು ಕಡೆ ಕೈಲಿರುವುದನ್ನು ಬಿಡಲೊಪ್ಪದ ಇಂಗ್ಲೆಂಡ್ ಮತ್ತು ಫ್ರಾನ್ಸ್. ಇಲ್ಲಿ ಬಡ, ಹಿಂದುಳಿದ ರಷ್ಯಾದ ಶ್ರೀಮಂತರಿಗೆ ತಾವೂ ಯುದ್ಧದಲ್ಲಿ ಸೇರಿ ಲಾಭ ಮಾಡಿಕೊಳ್ಳಬಹುದೆಂಬ ಆತುರ. ಅವರು ರಷ್ಯಾವನ್ನು ಇಂಗ್ಲೆಂಡ್, ಫ್ರಾನ್ಸ್‌ಗಳ ಜೊತೆಗೆ ಯುದ್ಧಕ್ಕೆ ದೂಡಿದರು. ಬಡಬಗ್ಗರಿಗೆ, ರೈತ–ಕಾರ್ಮಿಕರಿಗೆ ಯಾವ ಆಸಕ್ತಿಯೂ ಇಲ್ಲದ ಈ ಕ್ರೂರ ಯುದ್ಧದಲ್ಲಿ ಸಿಲುಕಿ ರಷ್ಯಾ ನೊಂದಿತು. ರಾಜಪದ್ಧತಿಯೊಳಗಡೆಯೇ ಸೊಕ್ಕಿದ್ದ ಬಂಡವಾಳಗಾರರಿಗೆ, ವರ್ತಕರಿಗೆ ಮತ್ತು ದಲ್ಲಾಳಿಗಳಿಗೆ ಮಾತ್ರ ಇದು ಭೂರಿ ಭೋಜನವೇ.

ಆಳುವ ವರ್ಗವು 'ತಾಯ್ನಾಡು', 'ದೇಶಪ್ರೇಮ', 'ರಾಷ್ಟ್ರದೇವತೆ ಅಪಾಯದಲ್ಲಿದ್ದಾಳೆ' ಎಂದು ಕೂಗುತ್ತಾ ಯುದ್ಧೋನ್ಮಾದ ಸೃಷ್ಟಿಸಿದಾಗ ದೇಶದಲ್ಲಿ ಉದ್ಭವಿಸುವ ಕುರುಡುತನ ಬಹಳ ಘೋರವಾಗಿರುತ್ತದೆ ತಾನೆ. ಪಶ್ಚಿಮದ ರಾಷ್ಟ್ರಗಳ ಸಮಾಜವಾದಿಗಳೂ, ಕಮ್ಯುನಿಸ್ಟರೂ ಇದಕ್ಕೆ ಬಲಿಬಿದ್ದರು. 'ಮೊದಲು ರಾಷ್ಟ್ರ ಉಳಿಯಲಿ, ಆಮೇಲೆ ಕ್ರಾಂತಿಯ ಪ್ರಶ್ನೆ. ಈಗ ಸರ್ಕಾರದ ಸಮರ ಪ್ರಯತ್ನಗಳನ್ನು ಬೆಂಬಲಿಸೋಣ' ಎಂದು ಪ್ರವಾಹದೊಂದಿಗೆ ಈಜಲಾರಂಭಿಸಿದರು. ಲೆನಿನ್ ಮಾತ್ರ ಭಿನ್ನ. ಅವರು ಗುಡುಗುತ್ತಲೇ ಇದ್ದರು : 'ಇದು ಉಳ್ಳವರ ಯುದ್ಧ, ಯಾವ ದೇಶದ ಆಳುವ ವರ್ಗವು ಯಾವ ಯಾವ ದುರ್ಬಲ ರಾಷ್ಟ್ರಗಳನ್ನು ಸುಲಿಗೆ ಮಾಡಬೇಕೆಂದು ನಿರ್ಧರಿಸಲು ಹೂಡಿರುವ ಯುದ್ಧ ಇದು. ಇದರಲ್ಲಿ ಬಡವರಿಗೆ, ಶೋಷಿತರಿಗೆ, ಹಿಂದುಳಿದ ರಾಷ್ಟ್ರಗಳಿಗೆ ಯಾವ ಹಿತಾಸಕ್ತಿಯೂ ಇಲ್ಲ. ಬದಲಿಗೆ, ನಮ್ಮ ವೈರಿ ವರ್ಗ ಹೀಗೆ ಗುದ್ದಾಡುತ್ತಿರುವಾಗ, ಕಾರ್ಮಿಕರು ತಮ್ಮ ತಮ್ಮ ದೇಶಗಳಲ್ಲಿ ಕ್ರಾಂತಿಯನ್ನು ನೆರವೇರಿಸಲು ಗಮನಕೊಡಬೇಕು.'

ಅವರ ಉಪದೇಶ, ಮುಂದುವರಿದ ರಾಷ್ಟ್ರಗಳ ಕಮ್ಯುನಿಸ್ಟ್ ಪಕ್ಷಗಳ ನಾಯಕರ ಮಟ್ಟಿಗಂತೂ ಗೋರ್ಕಲ್ಲ ಮೇಲೆ ಸುರಿದ ಮಳೆಯೇ ಆಯಿತು. ರಷ್ಯಾದಲ್ಲಿ ಪರಿಸ್ಥಿತಿ ವೇಗವಾಗಿ ಬದಲಾಗುತ್ತಾ ಹೋಯಿತು. ಹಸಿವಿನಿಂದಲೂ, ಶಸ್ತ್ರಾಸ್ತ್ರಗಳಿಲ್ಲದೆಯೂ

**ಮುಂದುವರಿದ ರಾಷ್ಟ್ರಗಳ ಕಮ್ಯುನಿಸ್ಟ್ ಪಕ್ಷಗಳ ನಾಯಕರ ಮಟ್ಟಿಗಂತೂ ಕ್ರಾಂತಿಯು ಗೋರ್ಕಲ್ಲ ಮೇಲೆ ಸುರಿದ ಮಳೆಯೇ ಆಯಿತು. ರಷ್ಯಾದಲ್ಲಿ ಪರಿಸ್ಥಿತಿ ವೇಗವಾಗಿ ಬದಲಾಗುತ್ತಾ ಹೋಯಿತು. ಹಸಿವಿನಿಂದಲೂ, ಶಸ್ತ್ರಾಸ್ತ್ರಗಳಿಲ್ಲದೆಯೂ ಯಾರದೋ ಯುದ್ಧದಲ್ಲಿ ತಾವು ಹರಕೆಯ ಕುರಿಗಳಾದೆವೆಂಬ ಭಾವನೆಯಿಂದಲೂ ಸೈನಿಕರಲ್ಲಿ ಯುದ್ಧವಿರೋಧಿ ಭಾವನೆ ದಟ್ಟೈಸಿತು. ಹುಳ ಬಿದ್ದ ಮಾಂಸವನ್ನು ಊಟದಲ್ಲಿ ಬಡಿಸಿದಾಗ, 'ಅರೋರಾ' ಹಡಗಿನಲ್ಲಿ ನಡೆದ ಬಂಡಾಯ ೧೯೦೫ರ ವಿಫಲ ಕ್ರಾಂತಿಯ ಮುಖ್ಯ ಘಟನೆ ತಾನೆ ! ಅವರಲ್ಲಿ ಬಹುತೇಕ ಜನ ರೈತ ಕುಟುಂಬಗಳಿಂದ ಬಂದವರು.**



ಯಾರದೋ ಯುದ್ಧದಲ್ಲಿ ತಾವು ಹರಕೆಯ ಕುರಿಗಳಾದೆವೆಂಬ ಭಾವನೆಯಿಂದಲೂ ಸೈನಿಕರಲ್ಲಿ ಯುದ್ಧವಿರೋಧಿ ಭಾವನೆ ದಟ್ಟೈಸಿತು. ಹುಳ ಬಿದ್ದ ಮಾಂಸವನ್ನು ಊಟದಲ್ಲಿ ಬಡಿಸಿದಾಗ, 'ಅರೋರಾ' ಹಡಗಿನಲ್ಲಿ ನಡೆದ ಬಂಡಾಯ ೧೯೦೫ರ ವಿಫಲ ಕ್ರಾಂತಿಯ ಮುಖ್ಯ ಘಟನೆ ತಾನೆ! ಅವರಲ್ಲಿ ಬಹುತೇಕ ಜನ ರೈತ ಕುಟುಂಬಗಳಿಂದ ಬಂದವರು. ಬಿಡುವು ಸಿಕ್ಕರೆ ಮತ್ತೆ ಊರಿಗೆ ಹೋಗಿ ನೇಗಿಲು ಹಿಡಿಯುವಂತಹವರು. ಅಧಿಕಾರಿಗಳು ಮಾತ್ರ ವಿವಿಧ ರಾಜ ಮನೆತನಗಳವರು, ಕುಲೀನರು. ಸೈನ್ಯದಲ್ಲಿ ವರ್ಗಶ್ರೇಣೀಕರಣ ಸ್ಪಷ್ಟವಾಗಿತ್ತು.

ಇತ್ತ ಹಳ್ಳಿಗಳಲ್ಲಿ ಜೀತದಾಳು ಪದ್ಧತಿ ಹೋಗಬೇಕೆಂಬ ಕೂಗಿಗೆ ಶತಮಾನದ ಇತಿಹಾಸವಿದ್ದರೂ ನಿಜವಾದ ಭೂ ಸುಧಾರಣೆ ಆಗಿಯೇ ಇಲ್ಲ. ಬಹುತೇಕ ಜನ ಭೂವಿಹೀನರು. ಕ್ಷಾಮ ಡಾಮರಗಳಿಂದ, ಯುದ್ಧದ ಒತ್ತಡದಿಂದ ಕಂಗೆಟ್ಟಿದ್ದಾರೆ. ಪಟ್ಟಣದ ಬಡಕಾರ್ಮಿಕರಲ್ಲಿಯೂ ಇದ್ದದ್ದು ಶೋಚನೀಯ ಪರಿಸ್ಥಿತಿಯೇ. ಜೀವನ ನಡೆಸಲು ಅಗತ್ಯವಾದ ಸಂಬಳವಿಲ್ಲ, ದುಡಿತಕ್ಕೆ ಇತರ ದೇಶಗಳಲ್ಲಿ ಆಗಲೇ ಮಾನ್ಯವಾಗಿದ್ದ ದಿನಕ್ಕೆ ಎಂಟು ಗಂಟೆ ಮಾತ್ರ ದುಡಿತ ಎಂಬ ಕಾನೂನು ಜಾರಿಗೆ ಬಂದಿಲ್ಲ. ಇನ್ನು ಜನತಾಂತ್ರಿಕ ಹಕ್ಕುಗಳೋ, ಅವು ಆಚರಣೆಯಲ್ಲಿರಲಿ, ಪುಸ್ತಕದಲ್ಲೂ ಬಂದಿರಲಿಲ್ಲ. ಕನಿಷ್ಠ ಬೇಡಿಕೆಗಳಿಗಾಗಿ ಮನವಿ ಸಲ್ಲಿಸಲು ಬಂದಿದ್ದ ಸಾವಿರಾರು ಜನರ ಮೇಲೆ ಗುಂಡುಹಾರಿಸಿದ ೧೯೦೫ರ 'ಬರ್ಬರ ಭಾನುವಾರ' (ಬ್ಲಡಿ ಸಂಡೆ)ದ ನೆನಪು ಹಸಿರಾಗಿಯೇ ಇತ್ತು. ಆ ತ್ಯಾಗ ಬಲಿದಾನಗಳಿಂದಾಗಿ ಜ಼ಾರ್ 'ಡ್ಯೂಮಾ' ಎಂಬ ಶ್ರೀಮಂತರ, ಪಾಳೆಯಗಾರರ ಪ್ರಾತಿನಿಧಿಕ ಸಭೆಯೊಂದನ್ನು ರಚಿಸಿ ಕೈತೊಳೆದುಕೊಂಡ. ಯಾವ ನೈಜ ಪರಿಹಾರವನ್ನೂ ನೀಡಲು ಆ ರಾಜವಂಶ ಅಶಕ್ತವಾಗಿತ್ತು. ಫ್ರೆಂಚ್ ಮಹಾಕ್ರಾಂತಿಯ ಸಂದರ್ಭದಲ್ಲಿ ಅಲ್ಲಿದ್ದ ಬೊರ್‌ಬನ್ ರಾಜವಂಶದವರ ಬಗ್ಗೆ ಹೇಳುತ್ತಾರಲ್ಲ ಹಾಗೆ, "ಅವರು ಏನನ್ನೂ (ಒಳ್ಳೆಯದನ್ನು) ಕಲಿಯುವವರಲ್ಲ, ಕಲಿತ ಯಾವುದನ್ನೂ (ಕೆಟ್ಟದ್ದನ್ನು) ಮರೆಯುವವರೂ ಅಲ್ಲ!"

**ಬಂಡವಾಳಶಾಹಿ ಜನತಾಂತ್ರಿಕ ಕ್ರಾಂತಿ – ಮಾರ್ಚ್ ೧೯೧೭**

ಒಂದು ವ್ಯವಸ್ಥೆ ಕೊಳೆಯಲಾರಂಭಿಸಿದಾಗ ಅತ್ಯುತ್ತಮ ಆಡಳಿತಗಾರನೂ ಪರಮ ಕೇಡಿಗನಂತೆಯೋ, ವಿದೂಷಕನಂತೆಯೋ ಕಾಣುತ್ತಾನೆ. ಇನ್ನು ದುರ್ಬಲನೂ ಪತ್ನಿವಾಕ್ಯಪರಿಪಾಲಕನೂ ಆದ ಜ಼ಾರ್ ನಿಕೊಲಾಸ್‌ನ ಪಾಡೇನು! ಆಡಳಿತ ವ್ಯವಸ್ಥೆ ಇಸ್ಪೀಟು ಎಲೆಗಳ ಸೌಧದಂತೆ ಕಣ್ಣೆದುರಿಗೇ ಕುಸಿಯಲಾರಂಭಿಸಿತು. ಸೈನಿಕರು ಸಮರಭೂಮಿಯಿಂದ ಮರಳಿ ಮನೆಯತ್ತ ಬರಲಾರಂಭಿಸಿದರು. ರೈತಾಪಿಗಳಲ್ಲಿ ಬಂಡಾಯ ಹೊಗೆಯಾಡುತ್ತಿತ್ತು. ಕಾರ್ಮಿಕರು ಸರಣಿ ಮುಷ್ಕರಗಳನ್ನು ಸಂಘಟಿಸಲಾರಂಭಿಸಿದರು. ಅಧಿಕಾರಿಗಳು ಹೊರಡಿಸಿದ ಆಜ್ಞೆಗಳು ಜಾರಿಯಾಗುವಂತಿರಲಿಲ್ಲ. ರಾಜಧಾನಿಯಲ್ಲಿ ಆಹಾರವಿಲ್ಲದೆ ದಂಗೆಗಳು ಆರಂಭವಾದವು. ಮಾರ್ಚ್ ೮ರಂದು (ಹೌದು, ಮಾರ್ಚ್ ೮ನೆಯ ತಾರೀಕೇ!) ಸಿದ್ಧ ಉಡುಪು ಕೈಗಾರಿಕೆಗಳ ಮಹಿಳಾ ಕಾರ್ಮಿಕರು ರಸ್ತೆಗಿಳಿದಿದ್ದರು. ಸಂಘಟಿತ ಕಾರ್ಮಿಕ ವರ್ಗ ಹೋರಾಟದ ಮುಂಚೂಣಿಯಲ್ಲಿತ್ತು, ಮುಂದಿನ ಐದು ದಿನಗಳು – ೮ರಿಂದ ೧೨ – ಕ್ರಾಂತಿಯ ದಿನಗಳು.

ಲೆನಿನ್ ಮತ್ತು ಅವರ ಬೋಲ್ಶೆವಿಕ್ ಪಕ್ಷ ಕ್ರಾಂತಿಯಲ್ಲಿ ಮುಖ್ಯ ಪಾತ್ರ ವಹಿಸಿದ್ದರು. ಆದರೆ ನೇತೃತ್ವ ನೀಡುವ ಸಾಮರ್ಥ್ಯ ಅವರಿಗೆ ಇನ್ನೂ ಇರಲಿಲ್ಲ. ಮೆನ್ಶೆವಿಕ್ ಪಕ್ಷ, ಎಡ ಮತ್ತು ಬಲಪಂಥೀಯ ಸೋಷಲಿಸ್ಟ್ ರೆವಲ್ಯೂಶನರಿ ಪಕ್ಷಗಳು, ಕಾನ್‌ಸ್ಟಿಟ್ಯೂಶನಲ್ ಡೆಮೊಕ್ರಾಟಿಕ್ ಪಕ್ಷ (ಕ್ಯಾಡೆಟ್‌ಗಳು) ಹೀಗೆ ಹದಿನೈದಕ್ಕೂ ಹೆಚ್ಚು ಸಂಘಟನೆಗಳು ಕ್ರಾಂತಿಯಲ್ಲಿ ಭಾಗಿಯಾಗಿದ್ದವು. ಆದರೆ ಇದು ಯಾವುದೇ ಒಂದು ಪಕ್ಷದ ಅಥವಾ ಹಲವು ಪಕ್ಷಗಳ ಸುಸಂಘಟಿತ, ಯೋಜನಾಬದ್ಧ ಕ್ರಾಂತಿಯಲ್ಲ. ಕ್ರಾಂತಿಯ ಹುರುಪಿನಲ್ಲಿ, ಹುಮ್ಮಸ್ಸಿನಲ್ಲಿ, ಅದುಮಿಟ್ಟ ಭಾವನೆಗಳು ಕಟ್ಟೆಯೊಡೆದು, ದುರ್ಬಲರೂ ನಿಷ್ಪ್ರಯೋಜಕರೂ ಆಗಿದ್ದ ಆಳುವ ಜನರನ್ನು ಗುಡಿಸಿ ಹಾಕಿದ ಘಟನೆ. ಒಂದು ಸ್ವಯಂಪ್ರೇರಣೆಯಿಂದಾದ ಚಾರಿತ್ರಿಕ ಘಟನೆ. ಚರಿತ್ರೆಯಲ್ಲಿ ಕ್ರಾಂತಿಯ ಘಳಿಗೆ ಯಾವುದು? ಲೆನಿನ್‌ರವರ ಮಾತಿನಲ್ಲಿ ಹೇಳಬೇಕೆಂದರೆ, 'ಆಳುವವರು ಈ ಮೊದಲಿನಂತೆ ಆಳಲಾಗದ ಸಮಯ, ಆಳಿಸಿಕೊಳ್ಳುವವರು ಮುಂಚಿನಂತೆ ಆಳಿಸಿಕೊಳ್ಳಲು ಒಪ್ಪದ ಸಮಯ.'



ಜ಼ಾರ್, ದೈವಸ್ವರೂಪಿ, ಶತಮಾನಗಳ ಕಾಲ ರಷ್ಯಾವನ್ನು ಉಕ್ಕಿನ ಪಂಜದಿಂದ ನಿಯಂತ್ರಿಸಿದ ಜ಼ಾರ್ ಏನು ಮಾಡುತ್ತಿದ್ದ? ಕಾಲ ಕೆಳಗೆ ಏಳುತ್ತಿದ್ದ ಭೂಕಂಪದ ಪರಿವೆಯೇ ಇಲ್ಲದೆ ರಾಜಧಾನಿಯಿಂದ ದೂರದಲ್ಲಿದ್ದ. ವಾಪಸ್ ಬರಲು ಯತ್ನಿಸಿದರೆ ರೈಲ್ವೆ ಕಾರ್ಮಿಕರು ಸಹಕರಿಸದೆ ಅವನ ರೈಲನ್ನು ರಾಜಧಾನಿಯಿಂದ ದೂರದಲ್ಲೇ ನಿಲ್ಲಿಸಿಬಿಟ್ಟರು. ರಾಣಿ ಜ಼ಾರಿನಾ, ಚಕ್ರವರ್ತಿಗೆ ಕಳಿಸಿದ ಟೆಲಿಗ್ರಾಂ, 'ಈ ವ್ಯಕ್ತಿಯ ವಿಳಾಸ ದೊರೆಯುತ್ತಿಲ್ಲ' ಎಂದು ವಾಪಸ್ ಬಂದಿತ್ತು!

**ಸೋವಿಯತ್‌ಗಳ ಪಾತ್ರ**

೧೯೦೫ರ ಕ್ರಾಂತಿ ವಿಫಲವಾಗಿದ್ದರೂ ಅದು ಜನತೆಗೆ ವಿಪುಲವಾದ ರಾಜಕೀಯ ತರಬೇತಿಯನ್ನು ನೀಡಿತ್ತು. ಜನಸಮುದಾಯ ರಸ್ತೆಗಳಲ್ಲಿ, ಹೋರಾಟಗಳಲ್ಲಿ, ತನ್ನ ಕಲಿಕೆಯನ್ನು ಪ್ರಬುದ್ಧಗೊಳಿಸಿಕೊಳ್ಳುತ್ತದೆ. ೧೯೦೫ರ ಮುಷ್ಕರಗಳಲ್ಲಿ, ಕಾರ್ಮಿಕರು ತಮ್ಮ ಹೋರಾಟ ಸಮಿತಿಗಳನ್ನು ರಚಿಸಿಕೊಂಡಿದ್ದರು. ಸೋವಿಯತ್ ಪದದ ಅರ್ಥ ಸಮಿತಿ ಅಥವಾ ಮಂಡಳಿ. ಹೋರಾಟಕ್ಕಾಗಿ ತಾತ್ಕಾಲಿಕವಾಗಿ ರೂಪುಗೊಂಡಿದ್ದ ಈ ಸಮಿತಿಗಳು ಕ್ರಮೇಣ ಶಾಶ್ವತವಾದ ಹೋರಾಟದ ಉಪಕರಣಗಳಾಗಿಬಿಟ್ಟವು. ಕಾರ್ಖಾನೆ ಮಟ್ಟದ ಸೋವಿಯತ್‌ಗಳು ಅಸ್ತಿತ್ವಕ್ಕೆ ಬಂದವು. ನಂತರ ನಗರವೊಂದರಲ್ಲಿ ಇರುವ ಹಲವು ಕಾರ್ಖಾನೆಗಳ ಹೋರಾಟಗಳನ್ನು ಒಟ್ಟಿಗೇ ರೂಪಿಸಲು, ಸಂಯೋಜಿಸಲು ನಗರಮಟ್ಟದ ಸೋವಿಯತ್‌ಗಳು ಅಧಿಕಾರಕ್ಕೆ ಬಂದವು. ದುರ್ಬಲವಾಗಿದ್ದ ರಾಜ್ಯಾಡಳಿತದ ಕಾರ್ಯಗಳನ್ನು ತಾವೇ ಕೈಗೆತ್ತಿಕೊಳ್ಳುವಂಥ ಸ್ಥಳೀಯ ಸೋವಿಯತ್‌ಗಳೂ ಅಸ್ತಿತ್ವಕ್ಕೆ ಬಂದವು. ಅನೇಕ ಸಮಸ್ಯೆಗಳಿಂದ ನೊಂದು, ಹಲವು ಬೇಡಿಕೆಗಳನ್ನು ಅಧಿಕಾರಸ್ಥರ ಮುಂದಿರಿಸಲು ಹೆಣಗಾಡುತ್ತಿದ್ದ ಸಾಮಾನ್ಯ ಸೈನಿಕರ ಸೋವಿಯತ್‌ಗಳೂ ಅಸ್ತಿತ್ವಕ್ಕೆ ಬಂದದ್ದು ವಿಶೇಷ ವಿದ್ಯಮಾನ. ಸೈನ್ಯದಿಂದ ಮರಳುತ್ತಿದ್ದ ರೈತಾಪಿ ಕುಟುಂಬದ ಯೋಧರು ಹಳ್ಳಿಗಳಲ್ಲಿ ಸೋವಿಯತ್‌ಗಳನ್ನು ಸ್ಥಾಪಿಸುವಲ್ಲಿ, ನಿರ್ವಹಿಸುವಲ್ಲಿ, ರಾಜಕೀಯ ಅರಿವನ್ನು ಹರಡುವಲ್ಲಿ ಮುಖ್ಯ ಪಾತ್ರ ವಹಿಸಿದ್ದರು. ಮಾರ್ಚ್ ಕ್ರಾಂತಿಯಲ್ಲಿ ಜನತೆಯ ಆಶೋತ್ತರಗಳಿಗೆ ರೂಪುಕೊಡುತ್ತ, ಅದು ಉದ್ದೇಶ ರಹಿತ ದಂಗೆಯಾಗದಂತೆ ಮುನ್ನಡೆಸುವಲ್ಲಿ ಸೋವಿಯತ್‌ಗಳ ಪಾತ್ರ ಅನನ್ಯವಾಗಿತ್ತು. ಮಾರ್ಚ್ ಕ್ರಾಂತಿ ನೆರವೇರಿದಾಗ ಲೆನಿನ್ ಸೇರಿದಂತೆ ಅನೇಕ ಪ್ರಮುಖ ಬೋಲ್ಶೆವಿಕ್ ನಾಯಕರು ಗಡೀಪಾರಾಗಿ ದೇಶದಿಂದ ಹೊರಗಿದ್ದರು. ಮಾರ್ಚ್ ಕ್ರಾಂತಿಯ ಮಹತ್ವವನ್ನು ಒತ್ತಿಹೇಳುತ್ತಾ ಲೆನಿನ್ ದೂರದಿಂದಲೇ ಪಕ್ಷಕ್ಕೆ ಅವಶ್ಯವಾದ ನಿರ್ದೇಶನಗಳನ್ನು ನೀಡುತ್ತಿದ್ದರು. ಅವರು ಏಪ್ರಿಲ್‌ನಲ್ಲಿ ವಾಪಸಾದ ಕೂಡಲೇ ದೇಶದಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ಅದನ್ನು ಅರ್ಥಮಾಡಿಕೊಳ್ಳುವುದಕ್ಕೆ ಆ ಪಕ್ಷದ ಚರಿತ್ರೆಯನ್ನು ಸ್ವಲ್ಪಮಟ್ಟಿಗೆ ಅರಿಯುವುದು ಅಗತ್ಯ.

**ಹೊಸ ಮಾದರಿಯ ಪಕ್ಷ**

*ಮಿಲಿಯಾಂತರ ಬೆರಳುಗಳು ಕಟ್ಟಿ ಮುಷ್ಟಿ ಸೃಷ್ಟಿಯಾಯಿತು ನೋಡಿ ಬೋಲ್ಶೆವಿಕ್ ಪಾರ್ಟಿ.*

**– ಮಯಕೊವ್‌ಸ್ಕಿ**

*('ಲೆನಿನ್' ಎಂಬ ಕವನ)*

ಹತ್ತೊಂಬತ್ತನೆಯ ಶತಮಾನದ ಆದಿ ಭಾಗದಿಂದಲೂ ಸಮಾಜವಾದ ಎಂಬ ಕಲ್ಪನೆ ಯುರೋಪಿನ ಚಿಂತನಾಶೀಲರನ್ನು ಕಾಡುತ್ತಲೇ ಇತ್ತು. ಬಹುತೇಕವಾಗಿ ಬಂಡವಾಳಗಾರರ ಮನಃಪರಿವರ್ತನೆಯ ಮೂಲಕ ಕಾರ್ಮಿಕರ ಶೋಷಣೆಗೆ ತಡೆಹಾಕಬಹುದೆಂಬ ಆಲೋಚನಾ ಲಹರಿಯ ಅನೇಕ ಪ್ರಾಮಾಣಿಕ ಜನ ಬಂದು ಹೋಗಿದ್ದರು. ಆದರೆ ಕಾರ್ಲ್ ಮಾರ್ಕ್ಸ್ ತಮ್ಮ ಸಹವರ್ತಿಗಳಾದ ಫ್ರೆಡರಿಕ್ ಏಂಗೆಲ್ಸ್‌ರ ಜೊತೆಗೂಡಿ ವರ್ಗಹೋರಾಟದ ಫಲವಾಗಿಯೇ ಸಮಾಜವಾದ ಬರುವುದು ಅನಿವಾರ್ಯವೆಂದೂ, ಕಡೆಗೆ ಖಾಸಗಿ ಆಸ್ತಿಯೇ ಇಲ್ಲದ ಸಮಾಜ ಎಂದರೆ ಸಮತಾವಾದ ಬರುವುದು ಶತಃಸಿದ್ಧ ಎಂದೂ ಪ್ರತಿಪಾದಿಸಿದರು. ನಮ್ಮ ಕಾಲದ

ಅತ್ಯಂತ ಕ್ರಾಂತಿಕಾರಿ ವರ್ಗವೆಂದರೆ ಕಾರ್ಮಿಕ ವರ್ಗ. ಅದರ ಸಂಘಟಿತ ಯತ್ನವಿಲ್ಲದಿದ್ದಲ್ಲಿ ಇದು ಸಾಧ್ಯವಿಲ್ಲ ಎಂಬ ಮಾರ್ಕ್ಸ್‌ರ ಚಿಂತನೆ ಇಡಿಯ ಯುರೋಪಿನಲ್ಲಿ ಸಂಚಲನ ಉಂಟುಮಾಡಿತು.

ಪ್ಲೆಖನೊವ್ ಎಂಬುವರನ್ನು ರಷ್ಯಾದಲ್ಲಿ ಮಾರ್ಕ್ಸ್‌ವಾದದ ಪಿತಾಮಹ ಎಂದೇ ಗುರುತಿಸಲಾಗುತ್ತದೆ. ಈತ ದೊಡ್ಡ ವಿದ್ವಾಂಸನೆಂಬುದು ನಿಜ. ಇವರೆಲ್ಲರ ಪ್ರಯತ್ನದಿಂದ ರಷ್ಯಾದಲ್ಲಿ ರಷ್ಯನ್ ಸೋಷಿಯಲ್ ಡೆಮಾಕ್ರೆಟಿಕ್ ಲೇಬರ್ ಪಾರ್ಟಿ (ಆರ್‌ಎಸ್‌ಡಿಎಲ್‌ಪಿ) ಆರಂಭವಾಗಿತ್ತು. ಲೆನಿನ್ ಎಂಬ ಗುಪ್ತನಾಮದಿಂದಲೇ ನಂತರ ಹೆಸರುವಾಸಿಯಾದ ವ್ಲಾದಿಮಿರ್ ಇಲ್ಯಿಚ್ ಉಲ್ಯಾನೊವ್, ಏಂಗೆಲ್ಸ್ ಸಾಯುವ ವೇಳೆಗಾಗಲೇ (೧೮೯೫) ಸಕ್ರಿಯವಾಗಿದ್ದ ತರುಣ ಹೋರಾಟಗಾರ! ಝಾರ್ ವಿರುದ್ಧದ ಉಗ್ರಗಾಮಿ ಹೋರಾಟವೊಂದರಲ್ಲಿ ಭಾಗವಹಿಸಿದ ಅಣ್ಣನನ್ನು ಕಳೆದುಕೊಂಡ ಲೆನಿನ್, ವಿಚಲಿತರಾಗದೆ 'ಅವನ ದಾರಿಯಂತೂ ತಪ್ಪು. ಆದರೆ ಸರಿಯಾದ ಹೋರಾಟದ ಮಾರ್ಗ ಯಾವುದು' ಎಂದು ಹುಡುಕುತ್ತಾ ಮಾರ್ಕ್ಸ್‌ವಾದವನ್ನು ತಲುಪಿದ್ದವರು.


ಪ್ಲೆಖನೊವ್

ತನ್ನನ್ನೊಂದು ಕಮುನಿಸ್ಟ್ ಪಕ್ಷ ಎಂದು ಕರೆದುಕೊಂಡಿದ್ದ ಆರ್‌ಎಸ್‌ಡಿಎಲ್‌ಪಿ ಅತ್ಯಂತ ಸಡಿಲವಾದ, ಕನಿಷ್ಠ ಶಿಸ್ತೂ ಇಲ್ಲದ, ಬುದ್ಧಿಜೀವಿಗಳ ಹರಟೆಯ ಕೂಟದಂತಿತ್ತು. ಈ ಪಕ್ಷವನ್ನು ಬದಲಾಯಿಸಲು ಲೆನಿನ್ ಶ್ರಮಿಸಿದರು. ಪಕ್ಷದ ನಿಲುವಿನಲ್ಲಿ, ಚಿಂತನೆಯಲ್ಲಿ, ಕಂಡುಬರುತ್ತಿದ್ದ ಅನೇಕ ಅಪಸ್ವರಗಳನ್ನೂ, ಕೆಲವೊಮ್ಮೆ ವಿರುದ್ಧ ದಿಕ್ಕಿನಲ್ಲಿ ಸಾಗುತ್ತಿದ್ದ ಆಲೋಚನೆಗಳನ್ನೂ ನಿವಾರಿಸಿ ಅದರಲ್ಲೊಂದು ಸಾಮ್ಯತೆಯನ್ನೂ, ಏಕತೆಯನ್ನೂ ರೂಪಿಸಲು ಯತ್ನಿಸಿದರು. ಯಾವುದೇ ಶಿಸ್ತಿಲ್ಲದೆ, ಉದ್ದೇಶರಹಿತ ಚರ್ಚೆಗಳನ್ನು ನಡೆಸಿಕೊಂಡಿದ್ದವರ ನಡುವೆ ಬಿಗಿಯಾದ ಶಿಸ್ತು–ಸಂಯಮ–ಸಮರ್ಪಣೆಗಳನ್ನು ಸಾಧಿಸದಿದ್ದರೆ ಪಕ್ಷ ನಿಜವಾದ ಕ್ರಾಂತಿಕಾರಿ ಹೋರಾಟದ ಅಸ್ತ್ರವಾಗದೆ, ಮರಳಿನಿಂದ ಮಾಡಿದ ಖಡ್ಗದಂತಿರುತ್ತಿತ್ತು. ಈ ಅವಶ್ಯಕತೆಗಳನ್ನು ಪೂರೈಸಬಲ್ಲ ಪಕ್ಷವನ್ನಾಗಿ ಆರ್‌ಎಸ್‌ಡಿಎಲ್‌ಪಿಯನ್ನು ರೂಪಿಸಲು ಹೊರಟಾಗ ಪಟ್ಟಭದ್ರ ನಾಯಕರು, ಬುದ್ಧಿಜೀವಿ ಪಂಡಿತರು ಅದನ್ನು ಒಪ್ಪಲಿಲ್ಲ. ಪಕ್ಷ ಹೋಳಾಯಿತು. ಹೆಚ್ಚಿನ ಜನ ಲೆನಿನ್‌ರನ್ನು ಬೆಂಬಲಿಸಿದ್ದರಿಂದ ಈ ಹೊಸ ಪಕ್ಷ ಬೋಲ್ಶೆವಿಕ್ (ಬಹುಮತೀಯ) ಆಯಿತು. ಅಲ್ಪಮತದಲ್ಲಿದ್ದವರು ಮೆನ್ಶೆವಿಕ್‌ರಾದರು. ಕಮ್ಯುನಿಸ್ಟ್ ಪಕ್ಷ ಎಂದರೆ ಲೆನಿನ್ ಮಾದರಿಯ ಪಕ್ಷ ಎಂಬುದು ಕ್ರಾಂತಿಯ ಯಶಸ್ಸಿನೊಂದಿಗೆ ಜಗತ್ತಿನಾದ್ಯಂತ ಸ್ಥಾಪಿತವಾಯಿತು.

**ಲೆನಿನ್‌ವಾದ**

ಮಾರ್ಕ್ಸ್ ಮತ್ತು ಏಂಗೆಲ್ಸ್ ತಮ್ಮ ಜೀವಿತಾವಧಿಯಲ್ಲಿ ಪಶ್ಚಿಮ ಯುರೋಪಿನ ಬಂಡವಾಳಶಾಹಿ ರಾಷ್ಟ್ರಗಳಲ್ಲಿ, ವರ್ಗಹೋರಾಟವು ತೀವ್ರವಾಗಿ ಅಲ್ಲಿ ಸಮಾಜವಾದಿ ಕ್ರಾಂತಿ ಸಂಭವಿಸುತ್ತದೆ ಎಂದು ಪ್ರತಿಪಾದಿಸಿದ್ದರು. ಅವರು ಅದನ್ನೇನೂ ಸಾರ್ವಕಾಲಿಕ ಸತ್ಯವಾದ ಸೈದ್ಧಾಂತಿಕ ತೀರ್ಮಾನ ಎಂದು ಮಂಡಿಸಿರಲಿಲ್ಲ. ಅದೊಂದು ಮೂರ್ತ ಸಂದರ್ಭದ ಮೂರ್ತ ಅಧ್ಯಯನ. ಪರಿಸ್ಥಿತಿ ಬದಲಾದಂತೆ ಅಧ್ಯಯನ ಬದಲಾಗಬೇಕು.

ಏಂಗೆಲ್ಸ್ ಸಾಯುವ ಹೊತ್ತಿಗಾಗಲೇ ಬಂಡವಾಳವಾದದ ಬೆಳವಣಿಗೆಯಲ್ಲಿ ಕೆಲವು ಮುಖ್ಯ ಬದಲಾವಣೆಗಳು ಕಾಣಬರುತ್ತಿದ್ದವು. ವಿಪರೀತ ಬೆಳೆದ ಏಕಸ್ವಾಮ್ಯ ಬಂಡವಾಳವು, ತನ್ನಲ್ಲಿ ಶೇಖರಣೆಯಾದ ಬಂಡವಾಳವನ್ನು ಹಿಂದುಳಿದ ದೇಶಗಳಿಗೆ ರಫ್ತುಮಾಡುತ್ತಿತ್ತು. ವಸಾಹತುಶಾಹಿ ಯುಗದಲ್ಲಿ ನಡೆಯುತ್ತಿದ್ದ ಸರಕುಗಳ ರಫ್ತಿಗಿಂತ ಇದು ಭಿನ್ನವಾದದ್ದು. ಬಂಡವಾಳವನ್ನೇ ರಫ್ತುಮಾಡುವ ಮೂಲಕ ಮೊದಲಿಗಿಂತ ವ್ಯಾಪಕವಾಗಿ ಹಿಂದುಳಿದ ದೇಶಗಳ ಕಚ್ಚಾವಸ್ತುವನ್ನು ಮತ್ತು ಅಲ್ಲಿನ ಆಂತರಿಕ ಮಾರುಕಟ್ಟೆಯನ್ನು ಶೋಷಿಸುವುದರೊಂದಿಗೆ, ಅಲ್ಲಲ್ಲಿನ ಜನತೆಯನ್ನು ದುಡಿಸುತ್ತಾ ಅವರ ಶ್ರಮಶಕ್ತಿಯನ್ನು ಶೋಷಿಸಲಾರಂಭಿಸಿದ ಈ ಬೆಳವಣಿಗೆ ತೀರಾ ಹೊಸದು. ಇದರಿಂದ ವಿಪರೀತ ಲಾಭ ಪಡೆದ ಮುಂದುವರಿದ ರಾಷ್ಟ್ರಗಳು ತಮ್ಮಲ್ಲಿನ ಕಾರ್ಮಿಕರ ಜೀವನಮಟ್ಟವನ್ನು ಕೊಂಚ ಸುಧಾರಿಸುತ್ತ, ಕಾರ್ಮಿಕರ ನಾಯಕರನ್ನು ಕೊಂಡುಕೊಳ್ಳುತ್ತಾ ಕ್ರಾಂತಿಕಾರಿ ಸ್ಫೋಟಕ ಪರಿಸ್ಥಿತಿಯನ್ನು ಮುಂದೂಡಿದರು.

ಜಾಗತಿಕ ಹಣಕಾಸು ಬಂಡವಾಳ ಎಲ್ಲೆಂದರಲ್ಲಿ ಸಂಚರಿಸುತ್ತಾ ಮುಂದುವರಿದ ರಾಷ್ಟ್ರ, ಹಿಂದುಳಿದ ರಾಷ್ಟ್ರ, ವಸಾಹತುಗಳು ಎಲ್ಲವನ್ನೂ ಬಿಗಿಯಾಗಿ ಬಂಧಿಸಿದೆ. ಇದೊಂದು ಸಾಮ್ರಾಜ್ಯಶಾಹಿ ಸರಪಳಿ. ಈ ಸಂದರ್ಭದಲ್ಲಿ ಕ್ರಾಂತಿ ಎಲ್ಲಿ ಬೇಕಿದ್ದರೂ ಸಂಭವಿಸ ಬಹುದು. ಸರಪಳಿಯನ್ನು ಜೋರಾಗಿ ಎಳೆದಾಗ ಅದರ ದುರ್ಬಲಕೊಂಡಿಯಲ್ಲಿ ಮುರಿದುಬೀಳುವಂತೆ, ಕ್ರಾಂತಿಗೆ ಪಕ್ವವಾದ ಯಾವುದೇ ದೇಶದಲ್ಲಿ – ಮುಂದುವರಿದ ಅಥವಾ ಹಿಂದುಳಿದ ಕೊಂಡಿ ಮುರಿಯಬಹುದು. ಆ ಕೊಂಡಿ ರಷ್ಯಾನೇ ಆಗಬಹುದು ಎಂಬುದಕ್ಕೆ ಪುರಾವೆಗಳು ಕಾಣಿಸುತ್ತಿವೆ.

ಲೆನಿನ್ ಮಾಡಿದ ಈ ಸೈದ್ಧಾಂತಿಕ ಮಂಡನೆ ತೀರಾ ಹೊಸದಾಗಿತ್ತು. ಆದರೆ ಬದಲಾದ ಜಾಗತಿಕ ಪರಿಸ್ಥಿತಿಯ ವಸ್ತುನಿಷ್ಠ ವ್ಯಾಖ್ಯಾನವಾಗಿತ್ತು. ಇಂದಿಗೂ ಅದು ಮೂಲಭೂತವಾಗಿ ಅನ್ವಯವಾಗುವಂಥದ್ದೇ. ಅದೊಂದು ಯುಗಪ್ರವರ್ತಕ, ಸಮಗ್ರ ಚಿಂತನೆ. ಹಾಗಾಗಿ ಮಾರ್ಕ್ಸ್‌ವಾದ ಎಂಬ ಚಿಂತನೆಯನ್ನು ಮಾರ್ಕ್ಸ್‌ವಾದ – ಲೆನಿನ್‌ವಾದ ಎಂದು ಗುರುತಿಸುವಂತಾಯಿತು.

ಪ್ರಖರ ಬುದ್ಧಿಶಕ್ತಿ, ಸಿದ್ಧಾಂತಗಳನ್ನು ಹೆಣೆಯಬಲ್ಲ ಶಕ್ತಿಯಿದ್ದ ಲೆನಿನ್ ಅತ್ಯಂತ ಕಾರ್ಯಕೌಶಲ್ಯವಿದ್ದ, ನೆಲಕ್ಕೆ ಕಿವಿಯಿಟ್ಟು ಸದ್ದು ಕೇಳಿಸಿಕೊಳ್ಳಬಲ್ಲ ನಾಯಕ. ಜನತೆಯ ನಾಡಿಮಿಡಿತವನ್ನು ಬಲ್ಲ, ಅವರ ಆಶೋತ್ತರಗಳಿಗೆ ಸೂಕ್ತ ಆಕಾರ ನೀಡಬಲ್ಲ ದಕ್ಷ ನೇತಾರ. ಸ್ಟಾಲಿನ್, ಇವರನ್ನು 'ಗಿರಿಶಿಖರದ ಮೇಲಿನ ಗರುಡ' ಎಂದು ಕರೆದರು. ಎಂದರೆ ವಿಶಾಲ ಪ್ರದೇಶವನ್ನು ದರ್ಶಿಸುತ್ತಲೇ, ಅತಿಸೂಕ್ಷ್ಮ ವಸ್ತುಗಳನ್ನು ಗುರುತಿಸಬಲ್ಲ ತೀಕ್ಷ್ಣದೃಷ್ಟಿಯವರು ಎಂದು. ಭಾರತೀಯ ತಿಳಿವಳಿಕೆಯಲ್ಲಿ ಗರುಡನು ಉದಾತ್ತತೆಗೂ, ಪರಾಕ್ರಮಕ್ಕೂ, ತ್ಯಾಗಕ್ಕೂ, ಮಾರ್ದವತೆಗೂ ಸಂಕೇತವೂ ಹೌದು! ಅವರು ಲೆನಿನ್‌ರ ಇನ್ನೊಂದು ಗುಣವನ್ನೂ ಪ್ರಶಂಸಿಸಿದರು. "ತತ್ವದಲ್ಲಿ ನಿಷ್ಠೆ, ಕಾರ್ಯನಿರ್ವಹಣೆಯಲ್ಲಿ ಚಾತುರ್ಯ." ಆದರ್ಶದ ಧ್ರುವತಾರೆಯತ್ತ ಸದಾ ಗಮನವಿಟ್ಟು, ಎಲ್ಲಾ ಸುಳಿಗಳನ್ನೂ ದಾಟಿಸುತ್ತಾ ಕ್ರಾಂತಿಯೆಂಬ ನಾವೆಯನ್ನು ನಿರಂತರವಾಗಿ ದಡದತ್ತ ಒಯ್ಯಬಲ್ಲ ನಾವಿಕ!

**ಏಪ್ರಿಲ್ ಸಿದ್ಧಾಂತ ಮತ್ತು ಮಿಂಚಿನಂಥ ಬೆಳವಣಿಗೆಗಳು**

*ರಾಜನ ಮುಕುಟದ ಪುಡಿ ಪುಡಿ ಮಾಡಿ*
*ವಣಿಕರು ಧನಿಕರನಾಚೆಗೆ ದೂಡಿ*
*ದುಡಿಯುವ ಬಡವರ*
*ಗದ್ದಿಗೆಗೇರಿಸಿ*
*ಸ್ತ್ರೀಯರ ಮಕ್ಕಳ*
*ನಗೆಯನು ಅರಳಿಸಿ*
*ಬಂತೈ ಬೀಸುತ ಬೀಸುತ ಬಂತೈ*
*ರಷ್ಯದ ಗಾಳಿಯು*
*ವಿಶ್ವದ ಉದ್ದಕೂ*
*ಬಂತೈ! ಬಂತೈ!*
*ಬಂತೈ! ಬಂತೈ*
*(ಪಂಜೆಯವರ 'ತೆಂಕಣ ಗಾಳಿ'ಯನ್ನು ನೆನೆಯುತ್ತಾ)*

ಲೆನಿನ್ ಬರುವ ವೇಳೆಗೆ ರಷ್ಯಾ ಒಂದು ಅಯೋಮಯವಾದ ಪರಿಸ್ಥಿತಿಯಲ್ಲಿತ್ತು. ಝಾರ್ ತೊಲಗಿ ರಷ್ಯಾದ ಬೂರ್ಶ್ವಾವರ್ಗ ಅಧಿಕಾರಕ್ಕೆ ಬಂದಿದೆ. ಆದರೆ ಬಂಡವಾಳಶಾಹಿಯ ವ್ಯವಸ್ಥೆಯನ್ನು ನಿಯಂತ್ರಿಸಲಾಗದೆ ಒದ್ದಾಡುತ್ತಿದೆ. ಸರ್ಕಾರಗಳು ಬದಲಾಗುತ್ತಿವೆ. ಕಡೆಗೆ ಕುಟಿಲ, ಮಾತಿನಮಲ್ಲ ವಕೀಲ ಕೆರೆನ್‌ಸ್ಕಿ ಎಂಬುವನು, ಸರ್ಕಾರ ನಡೆಸುತ್ತಿದ್ದಾನೆ. ಆದರೆ ಮಾರ್ಚ್ ಕ್ರಾಂತಿ ನೀಡಿದ ಆಶ್ವಾಸನೆಗಳು ಯಾವುವೂ ಪೂರ್ತಿಯಾಗುವ ಸಾಧ್ಯತೆ ಕಾಣುತ್ತಿಲ್ಲ. ರಷ್ಯನ್ ಬಂಡವಾಳಗಾರರಿಗೆ ಯುದ್ಧದಲ್ಲಿ ಇನ್ನೂ ಲಾಭ ಕಾಣುತ್ತಿದೆ. ಇಂಗ್ಲೆಂಡ್, ಫ್ರಾನ್ಸ್‌ಗಳನ್ನು ಎದುರುಹಾಕಿಕೊಳ್ಳುವ ಧೈರ್ಯವೂ ಕೆರೆನ್‌ಸ್ಕಿಗಿಲ್ಲ. ಶಾಂತಿ ಮರೀಚಿಕೆಯಾಗಿದೆ. ಸೈನಿಕರು ತಾಳ್ಮೆಗೆಟ್ಟಿದ್ದಾರೆ. ರೈತರಿಗೆ ಭೂಮಿ ಹಂಚುವ



ಆಶ್ವಾಸನೆಯೂ ಈಡೇರುತ್ತಿಲ್ಲ. ಅದಕ್ಕೆ ಶ್ರೀಮಂತ ರೈತರೂ, ಅವರಿಗೆ ಸಾಲ ಕೊಟ್ಟ ವಿದೇಶಿ ಬಂಡವಾಳಗಾರರೂ ಅಡ್ಡಿಯಾಗಿದ್ದಾರೆ. ಸೋವಿಯತ್ ಜನಸಮಿತಿಗಳಿಗೆ ಅಧಿಕಾರ ನೀಡುವುದಂತೂ ಆಸ್ತಿವಂತ ವರ್ಗಗಳಿಗೆ ಸುತರಾಂ ಇಷ್ಟವಿಲ್ಲ. ಆದರೆ ವಾಸ್ತವದಲ್ಲಿ ಆಗ ರಷ್ಯಾದಲ್ಲಿ ವಿಚಿತ್ರವಾಗಿ ಎರಡು ಪ್ರಭುತ್ವಗಳು ಅಸ್ತಿತ್ವದಲ್ಲಿದ್ದವು ! ಒಂದು ಕಾರ್ಮಿಕ, ಸೈನಿಕ, ರೈತನ ಸೋವಿಯತ್‌ಗಳು. ಇನ್ನೊಂದು ಇದರ ತಲೆಯ ಮೇಲಿರುವ ಶ್ರೀಮಂತರ ಪ್ರಾಬಲ್ಯವಿರುವ ಡ್ಯೂಮಾ. ಈ ಪರಿಸ್ಥಿತಿ ದೀರ್ಘಕಾಲ ಮುಂದುವರಿಯುವುದು ಸಾಧ್ಯವೇ ಇಲ್ಲ.

ಆದರೆ ಮೆನ್ಶೆವಿಕರು ಮತ್ತು ಬೋಲ್ಶೆವಿಕರಲ್ಲಿ ಕೂಡ ಕೆಲವರು ಸಮಾಜವಾದಿ ಕ್ರಾಂತಿ ಸಾಧ್ಯವೇ ಇಲ್ಲ ಎನ್ನುತ್ತಿದ್ದಾರೆ. ಮಾರ್ಕ್ಸ್ ಹೇಳಿದ್ದು ಸಮಾಜವಾದ ಮುಂದುವರಿದ ಬಂಡವಾಳಶಾಹಿ ರಾಷ್ಟ್ರದಲ್ಲಿ ಬರುತ್ತದೆ ಎಂದು. ನಮ್ಮದು ಹಿಂದುಳಿದ ರಾಷ್ಟ್ರ. ನಮ್ಮಲ್ಲಿ ಕಾರ್ಮಿಕರ ಸಂಖ್ಯೆಯೂ ಕಡಿಮೆ. ನೆಲದ ಮಾಲೀಕರಾಗಬಯಸುತ್ತಿರುವ ಈ ರೈತಾಪಿಗಳು ಆಳದಲ್ಲಿ ಪ್ರತಿಗಾಮಿಗಳು. ಹೀಗಾಗಿ ಈಗ ಸದ್ಯಕ್ಕೆ ಬಂಡವಾಳಶಾಹಿಗಳೇ ಅಧಿಕಾರದಲ್ಲಿ ಮುಂದುವರಿಯಲಿ. ಅವರ ವ್ಯವಸ್ಥೆ ಮಾಗಿ ಕೊಳೆಯಲಿ. ಆಗ ಸಮಾಜವಾದಿ ಕ್ರಾಂತಿಗೆ ಮುಹೂರ್ತ ಕೂಡಿಬರುತ್ತದೆ.

ಇದನ್ನು ವಿರೋಧಿಸಿ ಲೆನಿನ್ ನುಡಿದರು : ಇದು ಸಾಮ್ರಾಜ್ಯಶಾಹಿ ಯುಗ. ಇಲ್ಲಿ ಜಾಗತಿಕವಾಗಿ ನೋಡಿದರೆ ಬಂಡವಾಳಶಾಹಿ ಕ್ರಾಂತಿಕಾರಿಯಾಗಿದ್ದ ಕಾಲ ಮುಗಿದಿದೆ. ಇವರು ಅಧಿಕಾರಕ್ಕೆ ಬಂದರೂ ಜನತಂತ್ರವನ್ನು, ಅದರ ಆಶೋತ್ತರಗಳನ್ನೂ ಮುಂಚಿನಂತೆ ಈಡೇರಿಸಲಾರರು. ರಷ್ಯಾದಲ್ಲಿ ಅವರು ಅಧಿಕಾರದಲ್ಲಿದ್ದಾರೆ. ಎಂದರೆ ಈಗ ಕ್ರಾಂತಿಯು ಬಂಡವಾಳಶಾಹಿ ವಿರೋಧಿ ಸಮಾಜವಾದಿ ಕ್ರಾಂತಿಯ ಘಟ್ಟವನ್ನು ಮುಟ್ಟಿದೆ. ನಾವು ಬಡರೈತಾಪಿಗಳು ಹಾಗೂ ಕಾರ್ಮಿಕರ ಮೈತ್ರಿಯನ್ನು ಸಾಧಿಸಿ ಕ್ರಾಂತಿಯನ್ನು ನೆರವೇರಿಸೋಣ. ಇಲ್ಲದಿದ್ದರೆ ಶಾಂತಿ, ಭೂಮಿ, ಸೋವಿಯತ್‌ಗಳಿಗೆ ಅಧಿಕಾರ ಇವು ಯಾವುದೂ ಸಾಧ್ಯವಾಗುವುದಿಲ್ಲ.

ನವೆಂಬರ್ ಹತ್ತಿರವಾಗುತ್ತಿದ್ದಂತೆ ಪರಿಸ್ಥಿತಿ ಸ್ಫೋಟಕವಾಯಿತು. ಅಪಾರ ದಂಗೆಗಳು ಶುರುವಾದವು. ಸೈನಿಕರು ರಣಾಂಗಣದಿಂದ ಓಡಲಾರಂಭಿಸಿದರು. ಇನ್ನು ಕೆರೆನ್‌ಸ್ಕಿಯನ್ನು ಪಕ್ಕಕ್ಕೆ ಸರಿಸಿ ಸೋವಿಯತ್ ಅಧಿಕಾರವನ್ನು ಸ್ಥಾಪಿಸಬೇಕು. ಅದಕ್ಕಾಗಿ ಸೋವಿಯತ್ ಮಹಾಧಿವೇಶನವನ್ನು ಕರೆಯುವುದು ಅಗತ್ಯ. ಅದಕ್ಕೆ ಸ್ವಲ್ಪ ಮುಂಚೆಯಷ್ಟೇ ರಾಜ್ಯಾಧಿಕಾರವನ್ನು ಸಶಸ್ತ್ರ ಬಂಡಾಯದಿಂದ ಕೈವಶಮಾಡಿಕೊಳ್ಳಬೇಕು. ತಡ ಮಾಡಿದರೆ ಪ್ರತಿಗಾಮಿಗಳು ಬಲಿಷ್ಠರಾಗುತ್ತಾರೆ. ತುಂಬ ಮೊದಲೇ ಮಾಡಿ ಮುಗಿಸಲು ಶಕ್ತಿಯಿಲ್ಲ. ಆಗಲೇ ಲೆನಿನ್ ತಮ್ಮ ಪ್ರಖ್ಯಾತ ಘೋಷಣೆಯನ್ನು ಹೇಳಿದಂತೆ : "ನವೆಂಬರ್ ೬ ತೀರಾ ಬೇಗ. ನವೆಂಬರ್ ೮ ತೀರಾ ತಡ. ಬಂಡಾಯದ ದಿನ – ನವೆಂಬರ್ ೭ರ ದಿನ !"

ಬೋಲ್ಶೆವಿಕರು ಅತ್ಯಂತ ಯೋಜನಾಬದ್ಧವಾಗಿ ಕೆಲಸಮಾಡಿ ರಾಜಧಾನಿ ಪೆತ್ರೋಗ್ರಾಡ್‌ಅನ್ನು ಕೈವಶಮಾಡಿಕೊಂಡರು. ಕೆರೆನ್‌ಸ್ಕಿ ಓಡಿಹೋದ. ಆದರೆ ಗೆದ್ದ ಅಧಿಕಾರವನ್ನು ಉಳಿಸಿಕೊಳ್ಳುವುದು, ವ್ಯವಸ್ಥಿತವಾಗಿ ಆಡಳಿತ ನಡೆಸುವುದು, ಜನತೆಯ ಆಶೋತ್ತರಗಳನ್ನು ಈಡೇರಿಸುವುದು ಸುಲಭದ ಮಾತಾಗಿರಲಿಲ್ಲ. ಪರಿಶ್ರಮದಾಯಕ ಯತ್ನದ ಮೂಲಕ ಬ್ಯಾಂಕ್, ರೈಲ್ವೆ, ಸರ್ಕಾರಿ ಕಛೇರಿಗಳ ನೌಕರರನ್ನು ಒಲಿಸಿಕೊಂಡು ಆಡಳಿತಯಂತ್ರವನ್ನು ಚಾಲೂ ಮಾಡಬೇಕಾಯಿತು. ಶಾಂತಿ ಸ್ಥಾಪನೆ ಇನ್ನೂ ಕಷ್ಟವಿತ್ತು. ಮಿತ್ರರಾಷ್ಟ್ರಗಳು ಮುನಿಸಿಕೊಂಡವು. ರಷ್ಯಾ ದುರ್ಬಲವಾಗಿದೆ ಎಂದು ಜರ್ಮನಿ ಅಪಮಾನಕರ ಷರತ್ತುಗಳನ್ನು ಹೇರಿತು. ಅಂತೂ ಶಾಂತಿ ಸ್ಥಾಪನೆಯಾಯಿತು. ರೈತರಿಗೆ ಭೂಮಿ, ಸೋವಿಯತ್‌ಗಳಿಗೆ ಅಧಿಕಾರವನ್ನೂ ನೆರವೇರಿಸಲಾಯಿತು. ಆದರೆ ಸಾಮ್ರಾಜ್ಯಶಾಹಿಗಳು, ಆಸ್ತಿವಂತ ವರ್ಗಗಳ ಕುಮ್ಮಕ್ಕಿನಿಂದ ಅನೇಕ ವರ್ಷ ಅಂತರ್ಯುದ್ಧ ಮುಂದುವರಿಯಿತು. ಲೆನಿನ್ ಕಾಲವಾಗುವ ಹೊತ್ತಿಗೆ, ಎಂದರೆ ೧೯೨೪ರ ವೇಳೆಗೆ, ಸಮಾಜವಾದ ಭದ್ರವಾಗಿತ್ತು. ಶೋಷಿತರು ಇತಿಹಾಸದಲ್ಲಿ ಮೊಟ್ಟಮೊದಲಬಾರಿಗೆ ಅಧಿಕಾರಕ್ಕೆ ಬಂದ ಪ್ರಯೋಗ ಒಂದು ಮಟ್ಟಿಗೆ ಯಶಸ್ವಿಯಾಗಿತ್ತು.

**ಗೊಂದಲ–ಘರ್ಷಣೆ–ಸಮಾಜವಾದಿ ನಿರ್ಮಾಣ**

ಲೆನಿನ್‌ರಂಥ ದೈತ್ಯ ನಾಯಕರ ಅಭಾವದಲ್ಲಿ ಪಕ್ಷದಲ್ಲಿ ಬಿಕ್ಕಟ್ಟು ಶುರುವಾಯಿತು. ಪಂಚವಾರ್ಷಿಕ ಯೋಜನೆಗಳ ಮೂಲಕ ಭಾರೀ ಪ್ರಮಾಣದ ನೂತನ ಸಮಾಜದ ನಿರ್ಮಾಣಕ್ಕೆ ಕೈಹಾಕುತ್ತಿದ್ದಾಗ ಇದು ವೇಗದ ಓಟಕ್ಕೆ ತೊಡರುಗಾಲಾಯಿತು. ಟ್ರಾಟ್‌ಸ್ಕಿ ಸಮಾಜವಾದ ಒಂದೇ ಒಂದು ರಾಷ್ಟ್ರದಲ್ಲಿ ಯಶಸ್ವಿಯಾಗುವುದಿಲ್ಲ. ಕಡೆಯಪಕ್ಷ ಮುಂದುವರಿದ ಯೂರೋಪಿಯನ್ ರಾಷ್ಟ್ರಗಳಲ್ಲಾದರೂ ಸಮಾಜವಾದ ಬರದಿದ್ದರೆ ನಮಗೆ ಉಳಿಗಾಲವಿಲ್ಲ. ಆದ್ದರಿಂದ ಅಲ್ಲಿ ಕ್ರಾಂತಿಯನ್ನು ನಾವು ಪ್ರಚೋದಿಸೋಣ ಎಂದು ಹಠ ಹಿಡಿದರು, ಎಂದರೆ ಕ್ರಾಂತಿಯ ರಫ್ತು ! ಇನ್ನೊಂದು ಕಡೆ ಬುಖಾರಿನ್ ಜಮೀನುಗಳನ್ನು ಸಾಮಾಜೀಕರಣಕ್ಕೆ ಯತ್ನಿಸುವುದನ್ನು ನಿಲ್ಲಿಸಿ, ಶ್ರೀಮಂತ ರೈತರಿಗೆ ಉತ್ತೇಜಕಗಳನ್ನು ನೀಡಿ ತನ್ಮೂಲಕ ಉತ್ಪಾದನೆಯನ್ನು ಹೆಚ್ಚಿಸದಿದ್ದರೆ ಸಮಾಜವಾದಕ್ಕೆ ಉಳಿಗಾಲವಿಲ್ಲ ಎಂದರು. ಇಬ್ಬರ ನಿಲುವೂ ಲೆನಿನ್‌ವಾದಕ್ಕೆ ವಿರುದ್ಧವಾಗಿತ್ತು. ಆದರೆ ಸ್ಟಾಲಿನ್‌ರ ಮಾರ್ಗದರ್ಶನದಲ್ಲಿ ಪಕ್ಷವು ಈ ಎರಡೂ ಹಾದಿಗಳನ್ನೂ ತಿರಸ್ಕರಿಸಿ ಸಮಾಜವಾದಿ ನಿರ್ಮಾಣವನ್ನು ಯಶಸ್ವಿಯಾಗಿ ನಿರ್ವಹಿಸಿತು.

**ಸಾಧನೆಗಳು**

ಸೋವಿಯತ್ ಒಕ್ಕೂಟದ ಸಾಧನೆಗಳನ್ನು ಕಂಡು ಶತ್ರುಗಳು ಬೆಚ್ಚಿಬಿದ್ದರು. ತಟಸ್ಥವಾಗಿದ್ದವರು ಮೆಚ್ಚಿಕೊಂಡರು. ಜಗತ್ತಿನ ಎಲ್ಲಾ ಶೋಷಿತರೂ ಸಂಭ್ರಮಿಸಿದರು. ಬೃಹತ್ ಕೈಗಾರಿಕೆ, ಕೃಷಿ, ವಿಜ್ಞಾನ, ಕ್ರೀಡೆ, ಸಂಸ್ಕೃತಿ ಎಲ್ಲಾ ಕ್ಷೇತ್ರಗಳಲ್ಲೂ ಸೋವಿಯತ್ ಒಕ್ಕೂಟದ ಸಾಧನೆ ಅನನ್ಯವಾದದ್ದು. ವಿಶ್ವಶಾಂತಿಗೆ ಕೊಡುಗೆ, ರಾಷ್ಟ್ರೀಯತೆಗಳ ಮಧ್ಯದ ದ್ವಂದ್ವಗಳನ್ನು ಬಗೆಹರಿಸಿದ ರೀತಿ ಇವು ಸ್ಫೂರ್ತಿದಾಯಕವಾಗಿದ್ದವು. ಬಹಳ ಸರಳವಾಗಿ ಎಲ್ಲರಿಗೂ ಅರ್ಥವಾದ, ಎಲ್ಲರ ಗಮನವನ್ನು ಸೆಳೆದ ಸಾಧನೆಗಳೆಂದರೆ ಅವರು ಭಿಕ್ಷೆ, ಬಾಲಶ್ರಮ, ವೇಶ್ಯಾವೃತ್ತಿ, ಜೂಜುಗಳನ್ನು ನಿರ್ನಾಮ ಮಾಡಿದ್ದು. ನಿರುದ್ಯೋಗ, ಬಡತನ ಮಾಯವಾಗಿದ್ದವು. ಹೀಗಾಗಿ ಸಮಾಜವಾದ ನಂಬಲು ಸಾಧ್ಯವೇ ಇಲ್ಲದಂಥ ಸ್ವರ್ಗವಾಗಿ ಕಾಣುತ್ತಿತ್ತು.

**ಫ್ಯಾಸಿಸಂ ವಿರುದ್ಧದ ವಿಜಯ**

ಎರಡನೆಯ ಮಹಾಯುದ್ಧ ಆರಂಭವಾಗಿ ಜರ್ಮನಿ ಇಡಿಯ ಜಗತ್ತನ್ನೇ ನಡುಗಿಸಿತು. ಫ್ರಾನ್ಸ್ ಮಣ್ಣು ಮುಕ್ಕಿತ್ತು, ಇಂಗ್ಲೆಂಡ್ ನಡುಗಿತ್ತು. ಪೂರ್ವ ಯುರೋಪು ಫ್ಯಾಸಿಸ್ಟರ ವಶವಾಗಿತ್ತು. ಯಹೂದಿಗಳ ಮಾರಣಹೋಮ ನಡೆದಿತ್ತು. ಒಟ್ಟಿನಲ್ಲಿ ಇಡಿಯ ಜಗತ್ತು ಜರ್ಮನಿ–ಇಟಲಿ–ಜಪಾನ್‌ಗಳ ಫ್ಯಾಸಿಸ್ಟ್ ಬೂಟುಗಳಡಿಯಲ್ಲಿ ನಲುಗುವುದು ಖಚಿತ ಎನ್ನುವಂತಿತ್ತು.

ಆಗ ಹಿಟ್ಲರ್ ತನ್ನ ಲೆಕ್ಕಾಚಾರದಲ್ಲಿ ಎಡವಿದ. ಭಾರೀ ಪ್ರಮಾದವನ್ನೇ ಮಾಡಿಕೊಂಡ. ಸೋವಿಯತ್ ಒಕ್ಕೂಟದ ಜೊತೆಗಿದ್ದ ಶಾಂತಿ ಒಪ್ಪಂದವನ್ನು ಮುರಿದು ಅವನು ದಾಳಿ ಮಾಡಿದ. ಆರಂಭದಲ್ಲಿ ಸೋವಿಯತ್ ಒಕ್ಕೂಟ ಸೋಲಿನ ಮೇಲೆ ಸೋಲು ಅನುಭವಿಸಿದರೂ ಅಂತಿಮವಾಗಿ ಅತಿಮಾನುಷ ಹೋರಾಟದ ಮೂಲಕ ಫ್ಯಾಸಿಸ್ಟರನ್ನು ಹಿಮ್ಮೆಟ್ಟಿಸಿತು. ಸ್ಟಾಲಿನ್‌ಗ್ರಾಡ್ ಯುದ್ಧವು ಹದಿಮೂರು ತಿಂಗಳ ಮುತ್ತಿಗೆಯನ್ನು ಗೆದ್ದು ಯುದ್ಧದ ಗತಿಯನ್ನು ಬದಲಾಯಿಸಿತು. ಕೆಂಪು ಸೈನ್ಯ ಬರ್ಲಿನ್ ನಗರವನ್ನು ಪ್ರವೇಶಿಸಿ ಮಹಾಯುದ್ಧವನ್ನು ಮುಗಿಸಿತು.

ಸ್ಟಾಲಿನ್‌ರ ಕಟುಟೀಕಾಕಾರರೂ ಸಹ, 'ಮೋಚಿಯ ಮಗ' ಎಂದು ಹಂಗಿಸಿದವರೂ ಸಹ, ಈ ಯುದ್ಧದಲ್ಲಿ ಅವರು ನೀಡಿದ ನೇತೃತ್ವವನ್ನು ಹೊಗಳುತ್ತಾರೆ. ಸೈದ್ಧಾಂತಿಕವಾಗಿಯೂ, ಸಂಘಟನಾತ್ಮಕವಾಗಿಯೂ ಅವರು ಪವಾಡಸದೃಶ ಪ್ರಘಟನೆಗಳಿಗೆ ಸೂಕ್ತ ನೇತೃತ್ವವನ್ನು ನೀಡಿದ್ದರು. ಇದು ಕಮ್ಯುನಿಸ್ಟ್ ಚಳುವಳಿಯ ಸಾಧನೆಯ ಉತ್ತುಂಗದ ಬಿಂದು. ಜಗತ್ತಿನಾದ್ಯಂತ ಮಹಾನ್

ಲೇಖಕರು, ವಿಜ್ಞಾನಿಗಳು, ಚಿಂತಕರು, ಕಾರ್ಮಿಕರು, ಮಾರ್ಕ್ಸ್‌ವಾದದತ್ತ ಆಕರ್ಷಿತರಾಗಿದ್ದರು. ರಷ್ಯಾದ ಪ್ರಭಾವದಿಂದಾಗಿ ವಸಾಹತುಗಳು ಒಂದೊಂದೇ ಸ್ವತಂತ್ರವಾಗುತ್ತಿದ್ದವು, ಅನೇಕ ರಾಷ್ಟ್ರಗಳಲ್ಲಿ ಸಮಾಜವಾದ ಸ್ಥಾಪಿತವಾಯಿತು.

**ಪತನ**

ಮಾರ್ಕ್ಸ್ ಹೇಳಿದ್ದರು, ನಮ್ಮ ಕಲ್ಪನೆಯ ಸಮಾಜವಾದವು ಶುದ್ಧಶುಭ್ರವಾಗಿ ಆಕಾಶದಿಂದ ಅವತರಿಸಿದ ಮಗುವಲ್ಲ. ಇದರ ಮೈ ತುಂಬ ಹಳೆಯ ಸಮಾಜದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಕೊಳೆ ಮೆತ್ತಿಕೊಂಡಿರುತ್ತದೆ ಎಂದರು. ಲೆನಿನ್ ಹೇಳಿದ್ದರು, ನಿರ್ಮೂಲನ ಮಾಡಲು ಎಲ್ಲಕ್ಕಿಂತ ಕಷ್ಟವಾದದ್ದೆಂದರೆ ಹಳೆಯ ಅಭ್ಯಾಸಗಳು ಎಂದು. ಆ ಅಭ್ಯಾಸಗಳೆಂದರೆ ಹಳೆಯ ಚಿಂತನೆ ಮತ್ತು ಆಚರಣೆ. ಮೌಢ್ಯ, ಕುರುಡುತನ, ಸೋಮಾರಿತನ, ಸ್ವಾರ್ಥ, ಜನತಂತ್ರದ ಅಭಾವ ಇವೆಲ್ಲಾ. ಇವುಗಳನ್ನು ನಿವಾರಿಸಲು ಸಮಾಜವಾದದಡಿ, ಎಂದರೆ ಕಾರ್ಮಿಕವರ್ಗದ ಸರ್ವಾಧಿಕಾರದ ಕಾಲದಲ್ಲಿ ವರ್ಗಹೋರಾಟ ತೀಕ್ಷ್ಣವಾಗಬೇಕು ಎಂದೂ ಅವರು ಎಚ್ಚರಿಸಿದ್ದರು.

ಆದರೆ ಸ್ಟಾಲಿನ್‌ರ ನೇತೃತ್ವದಲ್ಲಿ ಕಣ್ಣುಕೋರೈಸುವಂಥ ಸಾಧನೆಗಳಾಗುತ್ತಿದ್ದಾಗಲೇ ಪಕ್ಷದಲ್ಲಿ ಕೆಲವೊಂದು ಋಣಾತ್ಮಕ ಬೆಳವಣಿಗೆಗಳು ಶುರುವಾದವು. ಕುರುಡುತನ, ಯಾಂತ್ರಿಕ ಚಿಂತನಾಕ್ರಮ, ದುರ್ಬಲಗೊಂಡ ಜನತಂತ್ರ ಇತ್ಯಾದಿ ಮಾತ್ರವಲ್ಲದೆ ಮಾರ್ಕ್ಸ್‌ವಾದ ನಿಂತ ನೀರಲ್ಲ, ಬದಲಾದ ಪರಿಸ್ಥಿತಿಗನುಗುಣವಾಗಿ ಅದನ್ನು ಬೆಳೆಸದೆ ಹೋದಲ್ಲಿ ಅದು ತತ್ವಾಂಧತೆಗೆ ಬಲಿಯಾಗಬಹುದು ಅಥವಾ ಮಾರ್ಕ್ಸ್‌ವಾದದ ಮೂಲಭೂತ ತಿಳಿವಳಿಕೆಗಳನ್ನೇ ಬದಲಾಯಿಸಬಹುದು.

ಸ್ಟಾಲಿನ್‌ರ ಕಾಲದಲ್ಲಿ ಅತಿರೇಕಗಳು ನಡೆದವು ಎಂದು ವಿವರಿಸುತ್ತಾ ಪಕ್ಷದ ನಿಲುವುಗಳನ್ನು ಸಡಿಲಿಸುತ್ತಾ ಹೋದ ಕ್ರುಶ್ಚೇವ್ ಮುಂದಿನ ಅನಾಹುತಗಳಿಗೆ ನಾಂದಿ ಹಾಕಿದರು. ದುರ್ಬಲವಾಗುತ್ತಾ ಹೋದ ಸಮಾಜವಾದಿ ತತ್ವಗಳು ಗೊರ್ಬಚೆವ್‌ರವರ ಕಾಲದಲ್ಲಿ ಪೂರ್ತಿ ಮಂಕಾದವು. ಯೆಲ್‌ಸಿನ್‌ನಂಥ ಕೇಡಿಗರು ಪ್ರತಿಕ್ರಾಂತಿಯನ್ನು ನೆರವೇರಿಸಿಯೇಬಿಟ್ಟರು. ದೇಶದಲ್ಲಿ ತಲೆ ಎತ್ತುತ್ತಿದ್ದ ಬೂರ್ಶ್ವಾಗಳು, ಸಾಮ್ರಾಜ್ಯಶಾಹಿಗಳ ಕುಮ್ಮಕ್ಕು ಇವೆಲ್ಲಾ ಕೂಡ ಈ ವಿನಾಶಕಾರಿ ಪ್ರಕ್ರಿಯೆಗೆ ಕುಮ್ಮಕ್ಕು ನೀಡಿದವು.

**ಹತಾಶೆ–ಹಿನ್ನಡೆ**

ಸೋವಿಯತ್ ಒಕ್ಕೂಟದ ಪತನ ನಮ್ಮ ಕಾಲದ ಅತಿದೊಡ್ಡ ದುರಂತ. ಅದರ ನಂತರ ದುರ್ಬಲ ರಾಷ್ಟ್ರಗಳ ಶೋಷಣೆ, ವಿನಾಶಕಾರಿ ಯುದ್ಧಗಳು ಹೆಚ್ಚಾಗಿವೆ ಮಾತ್ರವಲ್ಲ, ಇಡಿಯ ಜಗತ್ತಿನಲ್ಲಿ ಆದರ್ಶದ ಬಗ್ಗೆ ಪ್ರೀತಿ, ಹೋರಾಟದ ಕುರಿತು ಭರವಸೆ ಇವು ಮಂಕಾಗಿವೆ. ಮೌಢ್ಯ, ಜನಾಂಗೀಯವಾದ, ಫ್ಯಾಸಿಸ್ಟ್ ಶಕ್ತಿಗಳ ಬೆಳವಣಿಗೆ, ತೀವ್ರವಾದ ಸೈದ್ಧಾಂತಿಕ ಗೊಂದಲ ಎಲ್ಲವೂ ಕಾಣಿಸಿಕೊಂಡಿವೆ.

ಆದರೇನು, ಬದುಕು ಚಲನಶೀಲ. ಮತ್ತೆ ಹೋರಾಟಗಳು ಬೆಳೆಯುತ್ತಿವೆ. ಯುವಜನಾಂಗದಲ್ಲಿ ಹೊಸ ಹುಡುಕಾಟವೂ ಇದೆ. ಅವರೆದುರು ನಾವು ಸಮಾಜವಾದದ ಸಾಧನೆಗಳನ್ನು ಎತ್ತಿಹಿಡಿಯುತ್ತಲೇ, ವೈಫಲ್ಯದ ಕಾರಣಗಳನ್ನು ಮುಚ್ಚುಮರೆ ಇಲ್ಲದೆ ಚರ್ಚಿಸಬೇಕು. ನೈಜ ವಿನಯದೊಂದಿಗೆ ಆತ್ಮವಿಮರ್ಶೆ ಮಾಡಿಕೊಳ್ಳಬೇಕು. ಸಾಮಾನ್ಯವಾಗಿ ಉತ್ಸಾಹಿಗಳಾದ ತರುಣರು ಪೂರ್ವಗ್ರಹದಿಂದ ಮುಕ್ತರಾದವರು. ಅವರು ವೈಜ್ಞಾನಿಕವಾದ ಚಿಂತನೆಯನ್ನು ಖಂಡಿತ ಸ್ವೀಕರಿಸುತ್ತಾರೆ. ಸಮಾಜವಾದದ ಹಿನ್ನಡೆ, ವಿಫಲ ಪ್ರಯೋಗಗಳಿಂದ, ನಾವೆಲ್ಲರೂ ಕಲಿಯೋಣ; ಆದರೆ ಬಡತನ, ನಿರುದ್ಯೋಗ, ಭಿಕ್ಷಾಟನೆಯೂ ನಿರ್ಮೂಲನವಾಗಲೇಬೇಕಲ್ಲವೇ ? ವೇಶ್ಯಾವಾಟಿಕೆ, ಜೂಜು, ವ್ಯಸನಗಳು ಸಂಪತ್ತಿನ ಹೇಸಿಗೆ ಹುಟ್ಟಿಸುವಂತಹ ಕ್ರೋಢೀಕರಣ ನಾಶವಾಗಲೇಬೇಕಲ್ಲವೇ ? ಒಂಭತ್ತು ವರ್ಷಗಳಿಂದ ಮುಂದುವರಿದಿರುವ ಜಾಗತಿಕ ತೀವ್ರ ಆರ್ಥಿಕ ಹಿಂಜರಿತದ ಹಿನ್ನಲೆಯಲ್ಲಿ ತರುಣರು ಖಂಡಿತ ಇಂಥ ಚರ್ಚೆಯಲ್ಲಿ ಆಸಕ್ತಿಯನ್ನು ತೋರಿಸುತ್ತಾರೆ.

**ಮುನ್ನೋಟ**

ನವೆಂಬರ್ ಕ್ರಾಂತಿಯ ಶತಮಾನೋತ್ಸವದ ಆಚರಣೆ ಅರ್ಥಪೂರ್ಣವಾಗಬೇಕು. ಸಮಾಜವಾದದ ವಿರುದ್ಧ ನಡೆದಿರುವ ಎಲ್ಲ ಅಪಪ್ರಚಾರಗಳನ್ನೂ ನಾವು ಸಮರ್ಥವಾಗಿ ಉತ್ತರಿಸಲು ಸಾಧ್ಯವಾಗಬೇಕು. ಜನಮಾನಸದಿಂದ ಮರೆತುಹೋದ ಅದರ ಸಾಧನೆಗಳನ್ನು ಮತ್ತೆ ಪ್ರಚುರಪಡಿಸಬೇಕು. ಇದನ್ನು ಆಕರ್ಷಕವಾಗಿ ಹೊಸ ಸಾಮಾಜಿಕ ಮಾಧ್ಯಮಗಳನ್ನೂ ಉಪಯೋಗಿಸಿಕೊಂಡು ಮಾಡಬೇಕು. ಪ್ರಚಾರದ ಭಾಷೆ, ಶೈಲಿ, ವಿಧಾನ ಎಲ್ಲವೂ ಬದಲಾಗಬೇಕು. ತುಕ್ಕು ಹಿಡಿದ ಪದಪುಂಜಗಳು, ಬೇಸರ ಹುಟ್ಟಿಸುವ ಪ್ರಬಂಧಗಳು, ಪ್ರವಚನಗಳು ಇಂದಿನ ಯುವಕರ ತಲೆಯ ಮೇಲೆ ಹೋಗುವ ಬೌನ್ಸರ್‌ಗಳಾಗುತ್ತವೆ ! ಭಾರಿ ಸಭೆಗಳಿಗೆ, ರ‍್ಯಾಲಿಗಳಿಗೆ ಇರುವ ಮಹತ್ವಕ್ಕೂ ಒಂದು ಮಿತಿ ಇದೆ. ಮಾಹಿತಿಯನ್ನೂ, ಸಿದ್ಧಾಂತವನ್ನೂ ಲವಲವಿಕೆಯಿಂದ ಸೃಜನಶೀಲವಾಗಿ ಜನರ ನಡುವೆ ಕರೆದೊಯ್ಯಬಲ್ಲ ಯುವ ಸೇನೆಯ ನಿರ್ಮಾಣ, ಸಾಹಿತ್ಯ ಕಲಾಮಾಧ್ಯಮಗಳ ಪರಿಣಾಮಕಾರಿ ಉಪಯೋಗ ಅತ್ಯಗತ್ಯ.

ಆದರೆ ಇವೆಲ್ಲಾ ಆತ್ಮಸಮರ್ಥನೆಯ ಮಟ್ಟದಲ್ಲಿ ಉಳಿದು ಚರ್ವಿತ–ಚರ್ವಣವಾದರೆ ಹೇಗೆ ? ಕಮ್ಯುನಿಸ್ಟ್ ಚಳುವಳಿಯಲ್ಲಿ ತಲೆ ಎತ್ತಿದ ಈಗಲೂ ತಲೆ ಎತ್ತುವ ಕುರುಡುತನವನ್ನು ವಿಮರ್ಶಿಸಲೇಬೇಕು. ದೈವೀಕರಿಸಲ್ಪಟ್ಟ ಸ್ಟಾಲಿನ್‌ರನ್ನು ನಾಯಕತ್ವ ತುಚ್ಛೀಕರಿಸಿದಾಗ ಪ್ರತಿಭಟನೆ, ಚರ್ಚೆಗಳು ಆ ಪಕ್ಷದಲ್ಲಿ ರಾಷ್ಟ್ರದಲ್ಲಿ ಬರಲೇ ಇಲ್ಲ ಎಂಬುದು ಎಂಥ ವಿಸ್ಮಯದ ಸಂಗತಿ ! ಒಳಸಂಚು, ಪಿತೂರಿಗಳು ಗೆಲ್ಲುವಂಥ ಪರಿಸ್ಥಿತಿ ಪಕ್ಷದಲ್ಲಿ ಇತ್ತೆಂಬುದು ಎಂಥಾ ಆಘಾತಕಾರಿ ಸಂಗತಿ. ಹೋಗಲಿ, ಪಾಠ ಕಲಿತು ಚೀನಾದ ಪಕ್ಷ ಬೇರೆ ರೀತಿಯಲ್ಲಿ ವರ್ತಿಸಿದೆಯೇ ? ಮಾವೋ ನಿಧನದ ನಂತರ ಅಲ್ಲಿಯೂ ಅದೇ ಪ್ರಕ್ರಿಯೆಯ ಪುನರಾವರ್ತನೆ. ನಾಯಕತ್ವದ ಅಂಧ ಆರಾಧನೆ ಇರುವ ಎಲ್ಲಾ ಪಕ್ಷಗಳಲ್ಲೂ ಇದು ಒಂದಲ್ಲ ಒಂದು ದಿನ ಕಂಡುಬರುವಂಥದೇ. ಇಂದಿನ ನಾಯಕರೇ ನಾಳಿನ ಖಳನಾಯಕರು ! ಇದೆಂಥ ವಿಪರ್ಯಾಸ. ನಾಯಕ ಕೆಳಗೆ ಬಿದ್ದದ್ದು ಖಾತ್ರಿಯಾದ ಮೇಲೆ ಇರುವೆ–ಗೊದ್ದಗಳೂ ದೋಷಾರೋಪಣೆ ಪಟ್ಟಿಯೊಂದಿಗೆ ಕ್ಯೂ ನಿಲ್ಲುವುದು ಚಳುವಳಿಗೆ ಶೋಭಾಯಮಾನ ಸಂಗತಿಯೇ ? ಹಳೆಯ ಕುರುಡುತನದ ಜಾಗದಲ್ಲಿ ಹೊಸ ಕುರುಡುತನ ಬಂದದ್ದಕ್ಕೆ ಅದು ಸಾಕ್ಷಿ ಅಷ್ಟೇ.

ಇದನ್ನು ನೋಡಿದಾಗ ಕೇಂದ್ರೀಕರಣವೇ ಅಪಾಯಕಾರಿಯೇನೋ ಎಂಬ ಆತಂಕ ಬರಬಹುದು. ಆದರೆ ಕೇಂದ್ರೀಕರಣ ಜೀವಜಗತ್ತಿನಲ್ಲೂ, ಸಾಮಾಜಿಕ ರಚನೆಯಲ್ಲೂ ಸಹಜ ನಿಯಮ. ಹುಚ್ಚು ಹಿಡಿಯುವ ಸಾಧ್ಯತೆ ಇದೆ ಎಂಬ ಕಾರಣಕ್ಕಾಗಿ ಮೆದುಳೇ ಬೇಡ ಎಂದು ವಾದಿಸಬಹುದೇ ? ಜನತಂತ್ರವನ್ನು ಬಲಪಡಿಸುವುದು, ವಿಭಿನ್ನ ಅಭಿಪ್ರಾಯಗಳನ್ನು ಸಹಿಸುವುದು, ನಾಯಕತ್ವಕ್ಕೆ ಸವಾಲೊಡ್ಡುವುದನ್ನು – ಜಾಣತನದಿಂದಲ್ಲ – ನಿಜವಾಗಿ ಪ್ರೋತ್ಸಾಹಿಸುವುದು, ನಿರಂತರ ಸೈದ್ಧಾಂತಿಕ ಹುಡುಕಾಟಗಳಲ್ಲಿರಲು ಕಾರ್ಯಕರ್ತರನ್ನು ಪ್ರೋತ್ಸಾಹಿಸುವುದು, ನಾಯಕರು ದೈನಂದಿನ 'ಗೊಡ್ಡು ಜಂಜಾಟದ ಒತ್ತಡದಲ್ಲಿ' ಮುಳುಗದೆ ತಾವೂ ಹೊಸ ಬೆಳವಣಿಗೆಗಳತ್ತ ಗಮನಕೊಡುವುದು ಅಗತ್ಯ. ಅಲ್ಲದೆ 'ಶ್ರೇಷ್ಠತೆಯ ವ್ಯಸನ'ದಲ್ಲಿ ಮುಳುಗಿ ಪಕ್ಷಗಳು ಪಂಥಗಳಾಗದೆ, ಗೊಡ್ಡು ಆಚರಣೆಯ ಮಠಗಳಾಗದೆ, ಸಮಾನ ಮನಸ್ಕರೊಂದಿಗೆ ಸಮಾನಸ್ಕಂದರಾಗಿ ವ್ಯವಹರಿಸಲು ಕಲಿಯಬೇಕು.

ಮುಂದೆ ಬರುವ ಕ್ರಾಂತಿಗಳು ಇನ್ನಷ್ಟು ಸಂಕೀರ್ಣವಾಗಲಿವೆ. ರಷ್ಯಾ, ಚೈನಾ ಎರಡೂ ಕಡೆಯೂ ಕ್ರಾಂತಿಯು ಬಲವಾಗಿ ಬೇರೂರಿದ್ದ ಬಂಡವಾಳಶಾಹಿಯನ್ನು ಎದುರಿಸಲಿಲ್ಲ. ಆದರೆ ನಾವು ಎದುರಿಸಬೇಕಾಗಿದೆ. ಸಾಮ್ರಾಜ್ಯಶಾಹಿಗಳು ಕಡು ಜಾಣರಾಗಿದ್ದಾರೆ. ಅವರ ಕೈಗಳು ಎಲ್ಲೆಡೆ ಪಸರಿಸಿವೆ. ಭಾರತದಂಥ ಎಲ್ಲ ದೇಶಗಳಲ್ಲೂ ಬಂಡವಾಳಶಾಹಿಗಳು, ಆಳುವ ವರ್ಗ ಹಳ್ಳಿಯಿಂದಲೂ ತನ್ನ ಸಂಘಟನೆಗಳನ್ನು ಕಟ್ಟಿಕೊಂಡಿವೆ. ನಗರಗಳ ಜನಸಂಖ್ಯೆ ಏರುತ್ತಿದೆ. ಅವರ ಸಮಸ್ಯೆಗಳನ್ನೂ ಎಡಪಕ್ಷಗಳು ಎತ್ತಿಕೊಳ್ಳಬೇಕು. ಬಹಳ ದೊಡ್ಡ ಮಧ್ಯಮ ವರ್ಗ ಸೃಷ್ಟಿಯಾಗಿದೆ. ಮಾಧ್ಯಮದ ಮೇಲಿನ ಹತೋಟಿಯೇ ಶಕ್ತಿ ಎಂದರಿತ 'ಸಾಮ್ರಾಜ್ಯಶಾಹಿಗಳು' ಜಗತ್ತಿನ ಎಲ್ಲಾ ಮಾಧ್ಯಮಗಳನ್ನೂ ತಮ್ಮ ತೆಕ್ಕೆಯಲ್ಲಿರಿಸಿಕೊಂಡಿದ್ದಾರೆ. ಅನೇಕ ಗೊಂದಲಗಳನ್ನು, ಒಡಕುಗಳನ್ನು ಸೃಷ್ಟಿಸಲಾಗಿದೆ. ಸಿದ್ಧ ಮಾದರಿಗಳು, ಹಳೆಯ ಶೈಲಿಗಳು ಇನ್ನು ಕೆಲಸ ಮಾಡುವುದಿಲ್ಲ. ಫ್ಯಾಸಿಸ್ಟ್ ಶಕ್ತಿಗಳು ತಲೆ ಎತ್ತುತ್ತಿರುವ ಸಂದರ್ಭದಲ್ಲಿ ನಾವು ಕೇವಲ ಅವರ ಕಾರ್ಯಸೂಚಿಗೆ ಪ್ರತಿಕ್ರಿಯಿಸಿದರೆ ಸಾಲದು. ನಮ್ಮ ಕಾರ್ಯಸೂಚಿ, ನಮ್ಮ ಮಾದರಿ, ನಮ್ಮ ಸಾಧನೆ, ಚಿಂತನೆಗಳನ್ನು ನಾವು ಮುನ್ನೆಲೆಗೆ ತರಬೇಕು.

ಯುಗಪುರುಷ ಲೆನಿನ್‌ರ ನವೆಂಬರ್ ಕ್ರಾಂತಿಯ ಸಂದೇಶ ಇದೇ. ತತ್ವನಿಷ್ಠರಾಗಿರಿ, ಆದರೆ ಬದಲಾದ ಪರಿಸ್ಥಿತಿಗಳೊಂದಿಗೆ ಬಾಗುತ್ತಾ, ಬಳುಕುತ್ತಾ, ಸೆಟೆದುನಿಲ್ಲುತ್ತಾ ಕ್ರಾಂತಿಯನ್ನು ಮುಂದೆ ಮುಂದೆ ನಡೆಸಿಕೊಂಡು ಹೋಗಿ. ಈ ಗುರುತರ ಜವಾಬ್ದಾರಿಯನ್ನು ಸೂಕ್ತವಾಗಿ ನಿರ್ವಹಿಸಬೇಕಾಗಿದೆ.

**ಡಾ॥ ಬಿ. ಆರ್. ಮಂಜುನಾಥ**
೬೧, ೪ನೇ ಅಡ್ಡರಸ್ತೆ, ಅಶೋಕನಗರ, ಎನ್. ಆರ್. ಕಾಲೋನಿ ಹತ್ತಿರ, ಬೆಂಗಳೂರು – ೫೦

## ಬಂದೂಕು ಸಂಸ್ಕೃತಿ ತಂದ ಭಾರಿ ಅನಾಹುತ

**ಕ**ಳೆದ ತಿಂಗಳ ಆದಿಯಲ್ಲಿ ಅಮೆರಿಕದ ಜೂಜು ಕಟ್ಟೆ ಲಾಸ್ ವೇಗಾಸ್ ನಗರದಲ್ಲಿ ಸುರಿದ ಗುಂಡಿನ ಮಳೆಯಲ್ಲಿ ೫೯ ಮಂದಿ ಹತರಾಗಿ, ನೂರಾರು ಮಂದಿ ಗಾಯಗೊಂಡರು. ಅರವತ್ತನಾಲ್ಕು ವರ್ಷದ ಬಿಳಿಯ ಸ್ಟೀಫನ್ ಪ್ಯಾಡಕ್ ಎಂಬ ಬುದ್ಧಿ ವಿಕಲ್ಪ ನಡೆಸಿದ ಹೀನ ಕೃತ್ಯ ಇದು ಎಂದು ಅಮೆರಿಕದ ಪೊಲೀಸು ಅಧಿಕಾರಿಗಳು ತೀರ್ಮಾನಕ್ಕೆ ಬಂದಿದ್ದಾರೆ. ಇದುವರೆಗೆ ಬಂದೂಕು ಸಂಸ್ಕೃತಿ ಪೋಷಿಸುತ್ತ ಬಂದಿರುವ ಈ ನಾಡಿನಲ್ಲಿ ಸಂಭವಿಸಿರುವ ಹತ್ಯಾಕಾಂಡಗಳಲ್ಲಿ ವೇಗಾಸ್ ದುರಂತ ಅತಿದೊಡ್ಡದು. ೨೦೧೬ರಲ್ಲಿ ಫ್ಲಾರಿಡಾರಾಜ್ಯದ ಆರ್ಲೆಂಡೋದ ನೈಟ್ ಕ್ಲಬ್ ಒಂದರ ಮೇಲೆ ಜರುಗಿದ ದಾಳಿಯಲ್ಲಿ ೪೯ ಮಂದಿ ಹತರಾಗಿದ್ದರು. ಅಮೆರಿಕದ ಶಾಲೆಗಳಲ್ಲಿ, ರಸ್ತೆಗಳಲ್ಲಿ, ಮನೆಗಳಲ್ಲಿ, ಜನಸೇರುವ ಸ್ಥಳಗಳಲ್ಲಿ ಗುಂಡಿನ ದಾಳಿಗಳು ನಡೆಯುತ್ತಲೇ ಇವೆ. ಬುದ್ಧಿಮಾಂದ್ಯ ಮಕ್ಕಳೂ ಕೂಡ ಮನೆಯಿಂದ ಪಿಸ್ತೂಲು ತಂದು ಅನಾಹುತ ಎಸಗಿರುವ ಪ್ರಕರಣಗಳೂ ಇವೆ. ಅಮೆರಿಕದ ಕಾಂಗ್ರೆಸ್ಸಿನ ಸಂಶೋಧನಾ ಸಂಸ್ಥೆಯ ಅಂದಾಜಿನ ಪ್ರಕಾರ ದೇಶದ ಜನಸಂಖ್ಯೆಯನ್ನೂ ಮೀರಿದೆ ಬಂದೂಕಗಳ ಸಂಖ್ಯೆ. ೧೯೬೮ರಿಂದೀಚೆಗೆ ದೇಶದಲ್ಲಿ ಬಂದೂಕುಗಳ ಸಂಖ್ಯೆ ದ್ವಿಗುಣಗೊಂಡಿದೆ ಎಂದು ಒಂದು ವರದಿ ಇದೆ. ಇಷ್ಟೆಲ್ಲ ಅನಾಹುತ ಸಂಭವಿಸುತ್ತಿದ್ದಾಗ್ಯೂ ದೇಶದಲ್ಲಿ ಬಂದೂಕಿನ ಮಾರಾಟದ ಮೇಲೆ ನಿರ್ಬಂಧಗಳನ್ನು ಹೇರಿಲ್ಲ. ಪ್ರಾಪ್ತವಯಸ್ಸಿಗೆ ಬಂದ ಯಾವ ನಾಗರಿಕನೂ ಸುಲಭವಾಗಿ ಇತರ ವಸ್ತುಗಳನ್ನು ಖರೀದಿಸುವಂತೆಯೇ ಗನ್, ಪಿಸ್ತೂಲು, ಸ್ವಯಂಚಾಲಿತ ರೈಫಲ್‌ಗಳನ್ನು ಕೊಳ್ಳಬಹುದು. ಒಂದೊಂದು ಸಲ ದುರ್ಘಟನೆ ಸಂಭವಿಸಿದಾಗಲೂ ದೇಶದಲ್ಲಿ ಬಂದೂಕು ಮಾರಾಟದ ಮೇಲೆ ನಿರ್ಬಂಧ ಹೇರಬೇಕೆಂಬ ಕೂಗೇಳುತ್ತದೆ. ಆಡಳಿತ ನಡೆಸುವವರ ಇಚ್ಛಾ ಶಕ್ತಿಯ ಕೊರತೆಯಿಂದಾಗಿ ಅದು ಹಾಗೇ ತಣ್ಣಗಾಗುತ್ತದೆ. ಅಧಿಕಾರಾರೂಢವಾಗಿರುವ ಡೊನಾಲ್ಡ್ ಟ್ರಂಪ್ ಹಾಗೂ ರಿಪಬ್ಲಿಕನ್ ಪಕ್ಷ ಯಾವತ್ತೂ ಬಂದೂಕು ಸಂಸ್ಕೃತಿಯ ಬೆಂಬಲಿಗರು. ವೇಗಾಸ್‌ನ ದುರಂತವನ್ನು ಪರಿಶೀಲಿಸಲು ಹೋಗಿದ್ದ ಅಮೆರಿಕದ ಅಧ್ಯಕ್ಷರು ಕಾಲಕ್ರಮೇಣ ಬಂದೂಕು ಕಾಯಿದೆಗಳ ಕುರಿತು ಮಾತನಾಡುತ್ತೇವೆ ಎಂಬ ಹಾರಿಕೆ ಪ್ರತಿಕ್ರಿಯೆ ವ್ಯಕ್ತಪಡಿಸಿದ್ದಾರೆ. ಸದ್ಯಕ್ಕಂತೂ ಯಾವ ಕ್ರಮವನ್ನೂ ಜರುಗಿಸುವುದಿಲ್ಲ ಸರಕಾರ ಎನ್ನುವುದು ಇದರಿಂದ ಸ್ಪಷ್ಟ.



ಸ್ಟೀಫನ್ ಪ್ಯಾಡಕ್

ವೇಗಾಸ್‌ನಲ್ಲಿ ಜರುಗಿದ ಘಟನೆಯನ್ನು ಪರಿಶೀಲಿಸಿದರೆ ಪೂರ್ವ ನಿಯೋಜಿತ ಎನ್ನುವುದು ಸ್ಪಷ್ಟ. ಘಟನೆ ನಡೆದ ಒಂದು ವಾರಕ್ಕೆ ಮುನ್ನ ಈತ ತನ್ನ ಸೂಟ್‌ಕೇಸುಗಳೊಂದಿಗೆ ಬಂದು ಹೋಟೆಲಿನಲ್ಲಿ ನೆಲೆಸಿದ್ದ. ಅವುಗಳು ಬಂದೂಕುಗಳು ಮತ್ತು ಗುಂಡುಗಳಿಂದ ತುಂಬಿದ್ದವು. ಒಂದು ವರದಿ ಪ್ರಕಾರ ಆತನ ಕೋಣೆಯಲ್ಲಿ ೪೭ ಗನ್‌ಗಳು. ಸಾವಿರಾರು ಸುತ್ತು ಗುಂಡುಗಳು ಇದ್ದವು. ದುರಂತ ಸಂಭವಿಸಿದ ದಿನ ಸಂಜೆ ಜೂಜು ಕಟ್ಟೆಯ ಸಮೀಪದಲ್ಲಿರುವ ಬಯಲಿನಲ್ಲಿ ಸಂಗೀತ ಕಾರ್ಯಕ್ರಮವೊಂದಕ್ಕೆ ಜನ ಸೇರಿದ್ದರು. ಸುಮಾರು ಇಪ್ಪತ್ತೆರಡು ಸಾವಿರ ಜನ ಇದ್ದರೆಂದು ಹೇಳುತ್ತಾರೆ. ಅಮೆರಿಕದಲ್ಲಿ ಯಾವುದೇ ಸಂಗೀತ ವೃಂದದ ಕಾರ್ಯಕ್ರಮಕ್ಕೂ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಜನ ಸೇರಿರುತ್ತಾರೆ. ಇದನ್ನು ಅರಿತೇ ಆತ ಸಿದ್ಧನಾಗಿ ಬಂದಿದ್ದಾನೆ. ೩೨ನೇ ಮಹಡಿಯ ಕೋಣೆಯ ಕಿಟಕಿಗಳನ್ನು ಒಡೆದು ಜಾತ್ರೆಯ ಜನರ ಮೇಲೆ ಗುಂಡು ಹಾರಿಸಿದ. ತಾನೂ ಗುಂಡಿಗೆ ಬಲಿಯಾಗಿ ಆತ್ಮಹತ್ಯೆ ಮಾಡಿಕೊಂಡ. ಇವೆಲ್ಲ ನಡೆದದ್ದು ಕೆಲವೇ ಕ್ಷಣಗಳಲ್ಲಿ. ಮೊದಲಲ್ಲೇ ಇಸ್ಲಾಮಿಕ್ ಮೂಲಭೂತವಾದಿಗಳು ಇದು ತಾವು ನಡೆಸಿದ ಕೃತ್ಯ ಎಂದು ಹೇಳಿಕೊಂಡಿದ್ದಾರೆ. ಪೊಲೀಸರು ಅದನ್ನು ತಳ್ಳಿಹಾಕಿದ್ದಾರೆ, ಇದು ಓರ್ವ ಬುದ್ಧಿಮಾಂದ್ಯನ ಕೃತ್ಯ ಎಂದು ಹೇಳಿದ್ದಾರೆ. ಸ್ಟೀಫನ್ ಪ್ಯಾಡಕ್ ಸ್ವಲ್ಪ ಸಮಯದ ಹಿಂದೆ ಇಸ್ಲಾಮ್ ಧರ್ಮವನ್ನು ಅಂಗೀಕರಿಸಿದ್ದನಂತೆ. ವೇಗಾಸ್‌ನ ದುರಂತವಂತೂ ನಡೆದುಹೋಯಿತು. ಅಮೆರಿಕದಲ್ಲಿ ಬಂದೂಕು ಸಂಸ್ಕೃತಿಯೂ ಮುಂದುವರಿಯಿತು. ಜೀವನ ಯಥಾಸ್ಥಿತಿ.

* * *

## ಕ್ರಾಂತಿಕಾರಿ ಚೆ ಗುವೇರ ಒಂದು ಸ್ಮರಣೆ

**ಅ**ಕ್ಟೋಬರ್ ಮಹಾಕ್ರಾಂತಿಯ ನೂರನೇ ವರ್ಷದ ಸಂದರ್ಭದಲ್ಲಿ ನೆನಪಾಗುವುದು ಅದರಿಂದ ಪ್ರಭಾವಿತನಾಗಿ ಕ್ರಾಂತಿಕಾರಿಯಾದ ಚೆ ಗುವೇರ. ಇವತ್ತಿಗೂ ಎಲ್ಲ ದೇಶಗಳ ಯುವ ಜನರ ಮೈನವಿರೇಳಿಸುವ ಕ್ರಾಂತಿಕಾರಿ ಚೆ ಗುವೇರ ಯೋಧನೊಬ್ಬನ ಗುಂಡಿಗೆ ಬಲಿಯಾಗಿ ಐವತ್ತು ವರ್ಷ. ದಕ್ಷಿಣ ಬೊಲಿವಿಯದ ಕುಗ್ರಾಮ ವೊಂದರಲ್ಲಿ ಆತ ಅಸುನೀಗಿದ್ದು ಅಕ್ಟೋಬರ್ ೯, ೧೯೬೭ರಂದು, ಹುಟ್ಟಿದ್ದು ೧೯೨೮ರಲ್ಲಿ. ವೃತ್ತಿಯಲ್ಲಿ ವೈದ್ಯನಾದ ಅರ್ನೆಸ್ಟೋ ಚೆ ಗುವೇರಾ ಕ್ರಾಂತಿಕಾರಿಯಾದದ್ದೇ ಒಂದು ಮಹತ್ವದ ಸಾಹಸಗಾಥೆ. ವೆನೆಜುವೇಲದ ಕುಷ್ಠರೋಗಿಗಳ ಶುಶ್ರೂಷೆ, ಬೊಲಿವಿಯದ ತವರದ ಗಣಿಗಾರರೊಂದಿಗೆ, ಅರ್ಜೆಂಟೈನಾದ ಕ್ರಾಂತಿಕಾರಿಗಳೊಂದಿಗೆ ಒಡನಾಟ ಮತ್ತು ೧೯೫೪ರಲ್ಲಿ ಗ್ವಾಟೆಮಾಲಾದಲ್ಲಿ ನಡೆದ ಕ್ಷಿಪ್ರಕ್ರಾಂತಿ ಆತನನ್ನು ಕ್ರಾಂತಿಕಾರಿಯಾಗಿಸಿತು. ಮೆಕ್ಸಿಕೊದಲ್ಲಿದ್ದಾಗ ಚೆ ಗೆ ಮಾರ್ಕ್ಸ್‌ವಾದಿ ಸಿದ್ಧಾಂತದ ಪರಿಚಯ – ಅಧ್ಯಯನ. ಅಮೆರಿಕದ ಕಾರ್ಪೊರೇಟ್ ವಲಯದ ಯುನೈಟೆಡ್ ಫ್ರೂಟ್ ಕಂಪೆನಿಯು ಗ್ವಾಟೆಮಾಲದಲ್ಲಿ ನಡೆಸುತ್ತಿದ್ದ ತೀವ್ರವಾದ ಶೋಷಣೆಯ ವಿರುದ್ಧವಾಗಿ ಸೆಣಸಿದ ಈತ ಜೀವವಿರುವವರೆಗೆ ಕ್ರಾಂತಿಕಾರಿಯಾಗಿ ಬಂಡವಾಳ ವ್ಯವಸ್ಥೆಯ ವಿರುದ್ಧ ಹೋರಾಡಲು ಪಣತೊಟ್ಟ.



ಚೆ ಗುವೇರ

ಕ್ಯೂಬಾದ ನಾಯಕ ಫೀಡೆಲ್ ಕ್ಯಾಸ್ಟ್ರೋ ಜೊತೆಗೂಡಿ ಕ್ಯೂಬಾದ ಕ್ರಾಂತಿಯಲ್ಲಿ ಭಾಗಿಯಾದ ಚೆ ಇತಿಹಾಸ ಸೃಷ್ಟಿಸಿದ. ೧೯೫೯ರಲ್ಲಿ ಕ್ಯೂಬಾದ ಸರ್ವಾಧಿಕಾರಿ ಬಾಟಿಸ್ಟಾ ಸರಕಾರ ಪತನಗೊಂಡ ನಂತರ ಕ್ಯಾಸ್ಟ್ರೋ ಸಂಪುಟದಲ್ಲಿ ಸಚಿವನಾದ. ಸಚಿವನಾಗಿ ಕಾರ್ಯನಿರ್ವಹಿಸುತ್ತ ನೆಮ್ಮದಿಯಿಂದಿರಬಹುದಾಗಿದ್ದ ಈತನ ಆಯ್ಕೆ ಬೇರೆಯೇ ಆಗಿತ್ತು. ಬೊಲಿವಿಯದಲ್ಲಿ ಕ್ರಾಂತಿ ಜರುಗಿಸಲು ಸಜ್ಜಾಗಿ ಸಚಿವ ಸ್ಥಾನ ತ್ಯಜಿಸಿದ. ಪ್ರಪಂಚದ ಯಾವುದೇ ಭಾಗದಲ್ಲಾದರೂ ಸರಿ ಅನ್ಯಾಯದ ವಿರುದ್ಧವಾಗಿ ಹೋರಾಟ ನಡೆಸುವುದು ಕ್ರಾಂತಿಕಾರಿಯ ಗುಣವಾಗಿರಬೇಕು ಎನ್ನುವುದು ಚೆ ಗುರಿಯಾಗಿತ್ತು. ಪ್ರಪಂಚದ ಮಹಾನ್ ಕ್ರಾಂತಿಕಾರಿಗಳಲ್ಲಿ ಈತನಷ್ಟು ಯಾರೂ ಜನಪ್ರಿಯವಾಗಿರಲಿಲ್ಲ. ಯುವ ಜನರ ಆರಾಧ್ಯ ಕ್ರಾಂತಿಕಾರಿ ಚೆ ನೆನಪು ಯಾವತ್ತೂ ಸ್ಮರಣೀಯ.

**ಸೀಯಾರ್ಕೆ**

'ಚೌಬೀನ', ನಂ. ೮೫೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ಅಕ್ಟೋಬರ್ ಮಹಾಕ್ರಾಂತಿ ಮತ್ತು ಭಾರತ



ಪ್ರಪಂಚದ ಇತಿಹಾಸದಲ್ಲಿ ಎಷ್ಟೋ ಕ್ರಾಂತಿಗಳು ಜರುಗಿವೆ. ರೈತರು ತಮ್ಮ ಹಕ್ಕುಗಳಿಗಾಗಿ, ಗುಲಾಮರು ಮುಕ್ತಿಗಾಗಿ ಹೋರಾಟಗಳನ್ನು ನಡೆಸಿದ್ದಾರೆ. ಇನ್ನೂರಕ್ಕೂ ಹೆಚ್ಚು ವರ್ಷಗಳ ಹಿಂದೆ ಫ್ರಾನ್ಸ್‌ನಲ್ಲಿ 'ಸ್ವಾತಂತ್ರ್ಯ, ಸಮಾನತೆ, ಸಹೋದರತ್ವ'ದ ಘೋಷವನ್ನು ಜಗತ್ತಿನಲ್ಲಿ ಮೊದಲ ಬಾರಿಗೆ ಮೊಳಗಿಸಿದ್ದು ಫ್ರಾನ್ಸಿನ ಮಹಾಕ್ರಾಂತಿ. ಈ ಕ್ರಾಂತಿ ನಡೆದದ್ದು ನಿರಂಕುಶ ಅರಸೊತ್ತಿಗೆಯ ವಿರುದ್ಧ, ರೂಢಮೂಲ ಸಮಾಜ ವ್ಯವಸ್ಥೆಯ ವಿರುದ್ಧ. ಕ್ರಾಂತಿಯು ಯಶಸ್ವಿಯಾದರೂ, ಅದು ಸ್ಥಾಪಿಸಿದ ಸರಕಾರ ಅಸ್ತಿತ್ವದಲ್ಲಿದ್ದುದು ಕೆಲವೇ ದಿನಗಳು ಮಾತ್ರ. ಕಾರಣ ಏನೇ ಇರಲಿ, ಈ ಐತಿಹಾಸಿಕ ಕ್ರಾಂತಿಯನ್ನು ನೆನಪು ಮಾಡಿಕೊಳ್ಳುತ್ತೇವೆ.

ಅಕ್ಟೋಬರ್ ಮಹಾಕ್ರಾಂತಿಗೆ ನೂರು ವರ್ಷ ರಷ್ಯದ ಕ್ಯಾಲೆಂಡರ್ ಪ್ರಕಾರ. ಆದರೆ ನಮ್ಮ ಕ್ಯಾಲೆಂಡರಿನಂತೆ ನವೆಂಬರ್ ೭, ೧೯೧೭. ಈ ಮಹಾಕ್ರಾಂತಿ ರಷ್ಯಾದಲ್ಲಿ ತ್ಸಾರ್‌ಶಾಹಿ ಆಡಳಿತೆಯನ್ನು ನಿರ್ನಾಮಗೊಳಿಸಿದ್ದಷ್ಟೇ ಅಲ್ಲದೆ ಕ್ರಾಂತಿಯ ನಾಯಕ ವ್ಲಾದಿಮಿರ್ ಇಲ್ಯಿಚ್ ಲೆನಿನ್ ನೇತೃತ್ವದಲ್ಲಿ ವಿಶ್ವದಲ್ಲಿ ಮೊದಲಬಾರಿಗೆ ರೈತರ–ಕಾರ್ಮಿಕರ ಸರಕಾರವನ್ನು ಅಸ್ತಿತ್ವಕ್ಕೆ ತಂದಿತು. ಇಡೀ ಜಗತ್ತಿನಲ್ಲಿ ಸಂಚಲನ ಮೂಡಿಸಿತು. ಬಂಡವಾಳಶಾಹಿ ವ್ಯವಸ್ಥೆಗೆ ಪರ್ಯಾಯ ವ್ಯವಸ್ಥೆಯ ಸಾಧ್ಯತೆಯನ್ನು ಪರಿಚಯಿಸಿತು. ಬೋಲ್ಶೆವಿಕ್ ಪಾರ್ಟಿಯ (ರಷ್ಯಾದ ಕಮ್ಯುನಿಸ್ಟ್ ಪಕ್ಷ) ಮುಂದಾಳತ್ವದಲ್ಲಿ ಜರುಗಿದ ಈ ಕ್ರಾಂತಿಯ ಪರಿಣಾಮವಾಗಿ ಸ್ಥಾಪಿತವಾದ ಸರಕಾರ ಅಸ್ತಿತ್ವದಲ್ಲಿದ್ದುದು ಸುಮಾರು ಏಳು ದಶಕಗಳ ಕಾಲ. ಮಾರ್ಕ್ಸ್‌ವಾದಿ ಸಿದ್ಧಾಂತಗಳ ಮೇಲೆ ಆಧಾರಿತವಾದ ಈ ಮಹಾಕ್ರಾಂತಿಯ ಗುರಿ ಕಾರ್ಲ್ ಮಾರ್ಕ್ಸ್ ಮತ್ತು ಏಂಗೆಲ್ಸ್‌ರು ನಿರೂಪಿಸಿದ್ದ ಶೋಷಣೆ ರಹಿತ ಸಮಾಜವನ್ನು, ಮಾನವನಿಂದ ಮಾನವನ ಶೋಷಣೆಯನ್ನು ಅಂತ್ಯಗೊಳಿಸಿ ಸಮಾಜವಾದಿ ಸಮಾಜವನ್ನು, ತದನಂತರ ಸಮತಾವಾದಿ ಸಮಾಜವನ್ನು (ಕಮ್ಯುನಿಸಂ) ಸ್ಥಾಪಿಸುವುದಾಗಿತ್ತು. ಈ ಗುರಿಯ ಸಾಧನೆಗೆ ಲೆನಿನ್‌ರ ನಾಯಕತ್ವದಲ್ಲಿ ಬುನಾದಿಯನ್ನು ನಿರ್ಮಿಸಲಾಯಿತು. ಬಂಡವಾಳಶಾಹಿ ಜಗತ್ತಿನಿಂದ ಸುತ್ತುವರಿದಿದ್ದ ರಷ್ಯ ಹಿಂದುಳಿಕೆಯನ್ನು ಬಿಟ್ಟು ಮಹಾನ್ ಕೈಗಾರಿಕಾ ರಾಷ್ಟ್ರವಾಗಿ, ಶಕ್ತರಾಷ್ಟ್ರವಾಗಿ ಮುಂದೆ ಬಂದದ್ದು ಇತಿಹಾಸ. ಎರಡನೇ ಮಹಾಯುದ್ಧದ ಹೊತ್ತಿಗೆ ಹಿಟ್ಲರನ ಫ್ಯಾಸಿಸ್ಟ್ ಪಡೆಗಳನ್ನು ಎದುರಿಸಿ, ಸೋಲಿಸುವ ಮಟ್ಟಕ್ಕೆ ಬೆಳೆದ ದೇಶ ರಷ್ಯ. ಯುದ್ಧಾನಂತರ ಪೂರ್ವ ಯುರೋಪಿನಲ್ಲಿ ಕಮ್ಯುನಿಸ್ಟ್ ಸರಕಾರಗಳು ಅಸ್ತಿತ್ವಕ್ಕೆ ಬಂದು ಅಭಿವೃದ್ಧಿ ಸಾಧಿಸಿದಾಗ್ಯೂ ಸಮಾಜವಾದಿ ಸಮಾಜದ ನಿರ್ಮಾಣಗೊಳ್ಳಲಿಲ್ಲ. ಇಪ್ಪತ್ತನೇ ಶತಮಾನದ ಅದ್ಭುತಗಳಲ್ಲಿ ಒಂದು ಸಮಾಜವಾದಿ ಸಮಾಜದ ಗುರಿ ಹೊಂದಿದ್ದ ದೇಶಗಳ ಸಮುದಾಯದ ಉದಯ. ಆ ಶತಮಾನದ ಪ್ರಾರಂಭದಲ್ಲಿ ಅಸ್ತಿತ್ವಕ್ಕೆ ಬಂದ ಸಮಾಜವಾದಿ ಸಮಾಜ ನಿರ್ಮಾಣದ ಗುರಿಯ ದೇಶಗಳು ಶತಮಾನದ ಕೊನೆಯಲ್ಲಿ ಅಸ್ತಿತ್ವವನ್ನು ಕಳೆದುಕೊಂಡದ್ದು ವಿಪರ್ಯಾಸ. ಏನೇ ಆದರೂ ಅಕ್ಟೋಬರ್ ಮಹಾಕ್ರಾಂತಿ ಜಗತ್ತಿನ ದುಡಿಯುವ ವರ್ಗಗಳ ಸಂಘಟಿತ ಶಕ್ತಿಯಲ್ಲಿ ಮೂಡಿಸಿದ ವಿಶ್ವಾಸ, ನಂಬಿಕೆಗಳು ಅಚಲ. ಬಂಡವಾಳಶಾಹಿ, ಸಾಮ್ರಾಜ್ಯಶಾಹಿ ಶಕ್ತಿಗಳ ಬುಡವನ್ನೇ ಅಲುಗಾಡಿಸಿ, ಬಂಡವಾಳಶಾಹಿ ಸಾಮಾಜಿಕ ವ್ಯವಸ್ಥೆಗೆ ಬದಲಾಗಿ ಬೇರೊಂದು ಶೋಷಣೆರಹಿತ ಸಮಾಜದ ಸಾಧ್ಯತೆಯನ್ನು ಹುಟ್ಟುಹಾಕಿದ್ದು ಅಕ್ಟೋಬರ್ ಮಹಾಕ್ರಾಂತಿ ಎನ್ನುವುದರಲ್ಲಿ ಸಂದೇಹವಿಲ್ಲ.

ಪ್ರಪಂಚದಾದ್ಯಂತ ಸಾಮ್ರಾಜ್ಯಶಾಹಿ, ವಸಾಹತುಶಾಹಿ ವಿರುದ್ಧವಾಗಿ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದ ಜನತೆಗೆ ನವಚೈತನ್ಯ ಉಂಟುಮಾಡಿದ್ದು ರಷ್ಯದಲ್ಲಿ ಜರುಗಿದ ಮಹಾಕ್ರಾಂತಿ. ಅಸ್ತಿತ್ವದಲ್ಲಿದ್ದ ಸೋವಿಯೆತ್ ಒಕ್ಕೂಟ ಮತ್ತು ಸಮಾಜವಾದಿ ಸಮುದಾಯದ ದೇಶಗಳು ನಿರ್ವಸಾಹತೀಕರಣಕ್ಕೆ, ಏಶಿಯಾ, ಆಫ್ರಿಕ, ಲ್ಯಾಟಿನ್ ಅಮೆರಿಕಗಳಲ್ಲಿ ಸ್ವತಂತ್ರ ರಾಷ್ಟ್ರಗಳ ಉದಯಕ್ಕೆ ನೀಡಿದ ಬೆಂಬಲ, ಪ್ರೋತ್ಸಾಹ, ನೆರವು ಅಪಾರ. ಎಲ್ಲ ದೇಶಗಳಲ್ಲೂ ದುಡಿಯುವ ಜನರ ಸಂಘಟನೆಗಾಗಿ ಅಸ್ತಿತ್ವಕ್ಕೆ ಬಂದ ಕಮ್ಯುನಿಸ್ಟ್ ಪಾರ್ಟಿಗಳಿಗೆ ಪ್ರೇರಣೆ ಕೂಡ ರಷಿಯಾದ ಕ್ರಾಂತಿಯೆ. ಅಲ್ಲಲ್ಲಿ ಮಾರ್ಕ್ಸ್‌ವಾದಿ ಚಿಂತಕರು ಹರಡಿಕೊಂಡಿದ್ದರೂ, ಕಮ್ಯುನಿಸ್ಟ್ ಪಕ್ಷಗಳು, ಎಡಚಿಂತನೆಗೆ ಪ್ರೇರಣೆ ರಷ್ಯದ ಮಹಾಕ್ರಾಂತಿಯೆ. ಈಗಲೂ ಹಲವು ದೇಶಗಳಲ್ಲಿ ಕಮ್ಯುನಿಸ್ಟ್ ಪಕ್ಷದ, ಎಡಪಕ್ಷಗಳ ಆಡಳಿತೆ ಇದೆ.

ಈ ಹಿನ್ನೆಲೆಯಿಂದ ಭಾರತ ಸ್ವಾತಂತ್ರ್ಯ ಹೋರಾಟದ ಮೇಲೆ ರಷ್ಯದಲ್ಲಿ ಜರುಗಿದ ಅಕ್ಟೋಬರ್ ಮಹಾಕ್ರಾಂತಿ ಬೀರಿದ ಪರಿಣಾಮವನ್ನು ಅವಲೋಕಿಸೋಣ. ಬ್ರಿಟಿಷ್ ಸಾಮ್ರಾಜ್ಯಶಾಹಿಯ ವಿರುದ್ಧ ನಡೆಯುತ್ತಿದ್ದ ರಾಷ್ಟ್ರೀಯ ಚಳವಳಿಯನ್ನು ಚುರುಕುಗೊಳಿಸಿತಷ್ಟೇ ಅಲ್ಲದೆ ೧೯೨೦–೩೦ರ ದಶಕದಲ್ಲಿ ಪ್ರಬಲವಾದ ಎಡಪಂಥೀಯ ತಂಡಗಳು ಸಂಘಟಿತವಾಗುವುದಕ್ಕೆ ನೆರವಾಯಿತು. ಭಾರತದಲ್ಲಿ ಸಮಾಜವಾದದ ಪರಿಕಲ್ಪನೆ, ವಿಚಾರಧಾರೆ ನೆಲೆಗೊಂಡಿತು. ಭಾರತದ ಯುವ ಜನರಿಗೆ ಸಮಾಜವಾದದ

ಸಿ. ಆರ್. ಕೃಷ್ಣರಾವ್

**ಕ್ರಾಂತಿಯ ಆದರ್ಶವು ಪರಿಪೂರ್ಣವಾಗಿ ನೆರವೇರಬೇಕಾದರೆ ದುಡಿಯುವ ವರ್ಗದ ಅಧಿಕಾರ ಅಸ್ತಿತ್ವಕ್ಕೆ ಬರಬೇಕು. ಕ್ರಾಂತಿಯು ಮಾನವ ಜನಾಂಗದ ಪ್ರಶ್ನಾತೀತವಾದ ಹಕ್ಕು. ಸ್ವಾತಂತ್ರ್ಯವು ಎಂದೂ ಕ್ಷಯವಾಗದ ಜನ್ಮಸಿದ್ಧ ಹಕ್ಕು. ಸಮಾಜದ ನಿಜವಾದ ಆಧಾರ ಸ್ತಂಭ ದುಡಿಮೆ. ದುಡಿಮೆಗಾರರ ಅಂತಿಮಗುರಿ ಜನತೆಯ ಸಾರ್ವಭೌಮತ್ವ .**

*– ಭಗತ್ ಸಿಂಗ್*

ಗುರಿ ಮುಖ್ಯವಾಯಿತು. ಅದೇ ಕಾಲದಲ್ಲಿ ಭಾರತ ಕಮ್ಯುನಿಸ್ಟ್ ಪಾರ್ಟಿ ಮತ್ತು ಕಾಂಗ್ರೆಸ್ ಸೋಷಲಿಸ್ಟ್ ಪಾರ್ಟಿಗಳೂ ಸ್ಥಾಪನೆಗೊಂಡವು. ಭಾರತದ ಸ್ವಾತಂತ್ರ್ಯ ಚಳವಳಿಯ ಮುಂದಳದಲ್ಲಿದ್ದ ಕಾಂಗ್ರೆಸ್ ಪಕ್ಷದಲ್ಲಿ ಬಲವಾದ ಎಡಪಂಥೀಯ ಚಿಂತನೆ ಹಾಗೂ ತಂಡ ರೂಪುಗೊಂಡಿತು. ರಾಷ್ಟ್ರೀಯ ನಾಯಕ ಜವಹರಲಾಲ್ ನೆಹರು ರಾಷ್ಟ್ರೀಯ ಚಳವಳಿಯಲ್ಲಿ ಸಮಾಜವಾದಿ ಪರಿಕಲ್ಪನೆಯನ್ನು ಬಿತ್ತಲು ಮುಂದಾದರು ಮತ್ತು ಸ್ವಾತಂತ್ರ್ಯದೊಂದಿಗೆ, ಸಾಮಾಜಿಕ ಮತ್ತು ಆರ್ಥಿಕ ಸ್ವಾತಂತ್ರ್ಯ ಹಾಗೂ ಅಭಿವೃದ್ಧಿಗಳಿಗೆ ಹೆಚ್ಚು ಒತ್ತುನೀಡಲು ಅದು ಸಹಾಯಕವಾಯಿತು.

೧೯೧೯ರಷ್ಟು ಹಿಂದೆಯೇ ಖ್ಯಾತ ರಾಷ್ಟ್ರೀಯವಾದಿ ಬಿಪಿನ್‌ಚಂದ್ರ ಪಾಲ್ ರಷಿಯನ್ ಕ್ರಾಂತಿಯ ಬಗ್ಗೆ ಪ್ರತಿಕ್ರಿಯಿಸಿದ್ದು ಹೀಗೆ: "ಇಂದು ಜರ್ಮನಿಯ ಮಿಲಿಟರಿಯ ಪತನ, ತ್ಸಾರ್‌ಶಾಹಿಯ ನಿರಂಕುಶಾಧಿಕಾರದ ಅಂತ್ಯದ ನಂತರ ಪ್ರಪಂಚದಾದ್ಯಂತ ಹೊಸ ಶಕ್ತಿಯೊಂದು, ತಮ್ಮ ನ್ಯಾಯವಾದ ಹಕ್ಕುಗಳನ್ನು ಎತ್ತಿಹಿಡಿಯಲು ನಿರ್ಧರಿಸಿರುವ ಜನತೆಯ ಶಕ್ತಿಯೊಂದು ಉದಯಿಸಿದೆ. ಈ ನ್ಯಾಯವಾದ ಹಕ್ಕುಗಳು, ಸ್ವತಂತ್ರವಾಗಿ, ಸಂತೋಷದಿಂದ ಜೀವಿಸುವ, ಸಿರಿವಂತರ ಹಾಗೂ ಉನ್ನತವರ್ಗಗಳ ಶೋಷಣೆಯಿಂದ ಮತ್ತು ಮರ್ದನದಿಂದ ಮುಕ್ತವಾಗುವುದಾಗಿದೆ." ಇಂಥ ಪ್ರತಿಕ್ರಿಯೆಗಳು ಅಂದಿನ ದಿನಗಳಲ್ಲಿ ಜನಜನಿತವಾಗಿದ್ದವು.

ಅಕ್ಟೋಬರ್ ಮಹಾಕ್ರಾಂತಿಯ ವಿಚಾರಗಳು ಹರಡದಂತೆ ತಡೆಯಲು ಬ್ರಿಟಿಷ್ ಸರಕಾರ ಏನೇ ಕ್ರಮಗಳನ್ನು ತೆಗೆದುಕೊಂಡಾಗ್ಯೂ ಭಾರತದಲ್ಲಿ ಪ್ರಬಲವಾದ ಎಡಚಿಂತನೆ ಬೆಳೆಯಿತು. ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ನೆರವು ಕೋರಿ ಹಲವು ಭಾರತೀಯ ತಂಡಗಳು ಸೋವಿಯೆತ್ ಮಧ್ಯ ಏಷಿಯಕ್ಕೆ ಭೇಟಿನೀಡಿದ್ದ ದಾಖಲೆಗಳಿವೆ. ೧೯೧೮ರಷ್ಟು ಹಿಂದೆಯೇ ಆಫ್ಘಾನಿಸ್ತಾನದ ಕಾಬೂಲಿನಲ್ಲಿ ಹಂಗಾಮಿ ಭಾರತ ಸರಕಾರ ಸ್ಥಾಪಿಸಿಕೊಂಡಿದ್ದ ರಾಜಾ ಮಹೇಂದ್ರ ಪ್ರತಾಪ್, ತಾಷ್ಕೆಂಟ್‌ಗೆ ಭೇಟಿ ನೀಡಿ ಸೋವಿಯೆತ್ ನೆರವನ್ನು ಅಪೇಕ್ಷಿಸಿದ್ದರು. ೧೯೨೦ರಲ್ಲಿ ಬಾಕುವಿನಲ್ಲಿ ಜರುಗಿದ ಪೌರ್ವಾತ್ಯ ಜನರ ಮಹಾಧಿವೇಶನದಲ್ಲಿ ಭಾರತೀಯ ಕ್ರಾಂತಿಕಾರಿ ಸಂಘದ ಏಳು ಮಂದಿ ಪ್ರತಿನಿಧಿಗಳು ಭಾಗವಹಿಸಿದ್ದರು. ಅದೇ ವರ್ಷದ ಅಂತ್ಯದಲ್ಲಿ ಸುಮಾರು ೨೦೦ ಭಾರತೀಯ ಕ್ರಾಂತಿಕಾರಿಗಳು ತಾಷ್ಕೆಂಟ್‌ನಲ್ಲಿ ಇದ್ದರು. ಇವರಲ್ಲಿ ಎಂ. ಎನ್. ರಾಯ್ ಮತ್ತು ಅಬನಿ ಮುಖರ್ಜಿಯವರೂ ಇದ್ದರು. ಭಾರತ ಕಮ್ಯುನಿಸ್ಟ್ ಪಾರ್ಟಿ ಸಂಘಟನೆಗೆ ಪ್ರಯತ್ನ ನಡೆದದ್ದೂ ತಾಷ್ಕೆಂಟ್‌ನಲ್ಲಿಯೇ ಅದೇ ಕಾಲಾವಧಿಯಲ್ಲಿ. ಮುಂಬಯಿಯಲ್ಲಿ ಭಾರತ ಕಮ್ಯುನಿಸ್ಟ್ ಪಾರ್ಟಿ ಸ್ಥಾಪಕರಲ್ಲೊಬ್ಬರಾದ ಎಸ್. ಎ. ಡಾಂಗೆ 'ಗಾಂಧಿ ಮತ್ತು ಲೆನಿನ್' ಎಂಬ ಕಿರು ಹೊತ್ತಿಗೆಯನ್ನು ಪ್ರಕಟಿಸಿದ್ದರು ಮತ್ತು "ಸೋಷಿಯಲಿಸ್" ಎಂಬ ವಾರಪತ್ರಿಕೆಯನ್ನು ಹೊರತರುತ್ತಿದ್ದರು. ಬಂಗಾಳದಲ್ಲಿ ಮುಜಫರ್ ಅಹ್ಮದ್ 'ನವಯುಗ' ಪತ್ರಿಕೆಯನ್ನು, ಕವಿ ನಜ್ರೂಲ್ ಇಸ್ಲಾಮ್ ಜೊತೆಗೂಡಿ 'ಲಂಗಾಲ್' ಎಂಬ ಪತ್ರಿಕೆಯನ್ನು, ಪಂಜಾಬಿನಲ್ಲಿ ಗುಲಾಮ್ ಹುಸೇನ್ ಮತ್ತು ಇತರರು ಸೇರಿ 'ಇಂಕ್ವಿಲಾಬ್' ಪತ್ರಿಕೆಯನ್ನು ಮದರಾಸು ಪ್ರಾಂತದಲ್ಲಿ ಎಂ. ಸಿಂಗಾರವೇಲು 'ಲೇಬರ್, ಕಿಸಾನ್ ಗೆಜೆಟ್' ಪತ್ರಿಕೆಯನ್ನು ಸ್ಥಾಪಿಸಿ, ಪ್ರಕಟಿಸುತ್ತಿತ್ತು. ಇವೆಲ್ಲವೂ ಮಾರ್ಕ್ಸ್‌ವಾದಿ ಚಿಂತನೆಯನ್ನು, ಎಡಪಂಥೀಯ ವಿಚಾರಧಾರೆಯನ್ನು ಹೊಂದಿದ್ದವು. ದೇಶಾದ್ಯಂತ ನೂರಾರು ಯುವಜನ ಹಾಗೂ ವಿದ್ಯಾರ್ಥಿ ಸಂಘಟನೆಗಳು ಸಮಾಜವಾದಿ ಆದರ್ಶದಿಂದ ಪ್ರೇರಿತವಾಗಿ ತಲೆ ಎತ್ತಿದ್ದವು. ಕ್ರಾಂತಿಕಾರಿ ರಾಷ್ಟ್ರೀಯವಾದಿಗಳಾದ ಚಂದ್ರಶೇಖರ ಆಜಾದ್ ಮತ್ತು ಭಗತ್ ಸಿಂಗ್ ಇವರುಗಳು ಸಮಾಜವಾದಿ ಗುರಿಯನ್ನು ಹೊಂದಿದ್ದರು. ಭಗತ್ ಸಿಂಗ್ ಗಲ್ಲಿಗೇರುವ ಮುನ್ನ ರಷಿಯಾದ ಮಹಾನ್ ನಾಯಕ ಲೆನಿನ್‌ರ ಜೀವನ ಚರಿತ್ರೆ ಓದುತ್ತಿದ್ದರು ಎನ್ನುವ ದಾಖಲೆ ಇದೆ. ೧೯೩೦ರ ಕಾಲದಲ್ಲಿ ಆರ್ಥಿಕ ಮುಗ್ಗಟ್ಟಿನಿಂದ ಬಂಡವಾಳಶಾಹಿ ಜಗತ್ತು ತತ್ತರಿಸುತ್ತಿರುವಾಗ ಸಮಾಜವಾದಿ ಚಿಂತನೆಗಳು ಹೆಚ್ಚು ಹೆಚ್ಚು ಜನಜನಿತವಾಗತೊಡಗಿದವು.



ಬಿಪಿನ್ ಚಂದ್ರಪಾಲ್



ಜವಾಹರಲಾಲ್ ನೆಹರು

ಸಾವಿರದ ಒಂಭೈನೂರ ಮೂವತ್ತರ ದಶಕದಲ್ಲಿ ಸೋವಿಯೆತ್ ಒಕ್ಕೂಟದಲ್ಲಿ ಸಂಭವಿಸುತ್ತಿದ್ದ ಸಾಮಾಜಿಕ, ಆರ್ಥಿಕ ಬೆಳವಣಿಗೆಗಳು ಭಾರತದ ಬುದ್ಧಿಜೀವಿಗಳನ್ನು ವಿಶೇಷವಾಗಿ ಆಕರ್ಷಿಸಿದ್ದುವು. ಅದೇ ದಶಕದ ಪ್ರಾರಂಭದಲ್ಲಿ ಸ್ವತಂತ್ರ ಭಾರತದ ಪ್ರಧಾನಿಯಾದ ಜವಹರಲಾಲ್ ನೆಹರು ಹಾಗೂ ರಾಷ್ಟ್ರಕವಿ ರವೀಂದ್ರನಾಥ ಟ್ಯಾಗೂರ್ ಸೋವಿಯೆತ್ ಒಕ್ಕೂಟವನ್ನು ಸಂದರ್ಶಿಸಿ ತಮ್ಮ ಅನುಭವಗಳನ್ನು ದಾಖಲಿಸಿದ್ದಾರೆ. ನೊಬೆಲ್ ಪುರಸ್ಕೃತ ಕವಿ ಟ್ಯಾಗೋರರನ್ನು ವಿಶೇಷವಾಗಿ ಆಕರ್ಷಿಸಿದ್ದು ಅಲ್ಲಿನ ಶಿಕ್ಷಣ ವ್ಯವಸ್ಥೆ ಹಾಗೂ ರೈತರು ಮತ್ತು ಕಾರ್ಮಿಕರು ಸಾಧಿಸಿದ ಪ್ರಗತಿ. ಕೆಲವೇ ವರ್ಷಗಳಲ್ಲಿನ ಈ ಸಾಧನೆ ಐತಿಹಾಸಿಕವಾದದ್ದು ಎಂದು ಅವರು ಅಭಿಪ್ರಾಯಪಟ್ಟಿದ್ದಾರೆ. ಸಮಾಜವಾದಿ ಸಮಾಜ ನಿರ್ಮಾಣದ, ಮಾನವನಿಂದ ಮಾನವನ ಶೋಷಣೆಯಿಂದ ಮುಕ್ತವಾದ ವ್ಯವಸ್ಥೆಯ ಸ್ಥಾಪನೆಯ ಗುರಿಹೊಂದಿದ್ದ ಸೋವಿಯೆತ್ ಒಕ್ಕೂಟಕ್ಕೆ ಭಾರತದಿಂದ ಅನೇಕ ಮಂದಿ ಭೇಟಿ ನೀಡಿದ್ದಾರೆ, ತಮ್ಮ ಅಭಿಪ್ರಾಯಗಳನ್ನು ಮುಕ್ತವಾಗಿ ದಾಖಲಿಸಿದ್ದಾರೆ. ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ, ವಸಾಹತು ಆಳ್ವಿಕೆಯಿಂದ ಬಳಲುತ್ತಿದ್ದ ದೇಶದ ಜನತೆಗಳ ಹೋರಾಟಕ್ಕೆ ರಷ್ಯಾದ ಮಹಾಕ್ರಾಂತಿ ನೀಡಿದ ಸ್ಫೂರ್ತಿ, ಪ್ರೋತ್ಸಾಹ, ಉತ್ತೇಜನ ಅವಿವಾದಾಸ್ಪದ.

ಜಗತ್ತಿನಾದ್ಯಂತ ಸಮಾಜವಾದಿ ಸಮಾಜ ನಿರ್ಮಾಣದ ಚಿಂತನೆಯನ್ನು ಹರಡಿದ ರಷಿಯಾದ ಮಹಾಕ್ರಾಂತಿ, ಕೆಲವೇ ವರ್ಷಗಳಲ್ಲಿ ಕ್ರಾಂತಿಯ ಪರಿಣಾಮವಾಗಿ ಸ್ಥಾಪಿತವಾದ ಸೋವಿಯೆತ್ ಒಕ್ಕೂಟ ಸಾಧಿಸಿದ ಪ್ರಗತಿ ಹೊಸದಾಗಿ ಸ್ವತಂತ್ರಗೊಂಡ ದೇಶಗಳ ಮೇಲೆ ಭಾರಿ ಪರಿಣಾಮ ಉಂಟುಮಾಡಿದ್ದುವು. ಹೆಚ್ಚಾಗಿ ಯೋಜನಾಬದ್ಧ ಅರ್ಥವ್ಯವಸ್ಥೆಗೆ ಸೋವಿಯೆತ್ ಒಕ್ಕೂಟದ ಅನುಭವವೇ ಆಧಾರ. ಹಾಗಾಗಿ, ಸ್ವತಂತ್ರ ಭಾರತ ಆರ್ಥಿಕ ಪ್ರಗತಿಗಾಗಿ, ಕೈಗಾರಿಕಾಭಿವೃದ್ಧಿಗಾಗಿ ಅನುಸರಿಸಿದ್ದು ಬಹುತೇಕ ಸೋವಿಯೆತ್ ಮಾದರಿಯನ್ನೇ. ಸ್ವತಂತ್ರ ಭಾರತದ ಮೊದಲ ಪ್ರಧಾನಿಯಾಗಿದ್ದ ಜವಹರಲಾಲ್ ನೆಹರೂ ಭಾರತ ಸ್ವತಂತ್ರವಾದ ಮೇಲೆ ಮೊದಲು ರಾಯಭಾರಿ ಸಂಬಂಧಗಳನ್ನು ಸ್ಥಾಪಿಸಿದ ದೇಶ ಸೋವಿಯೆತ್ ರಷ್ಯ. ಭಾರತದ ಪಂಚವಾರ್ಷಿಕ ಯೋಜನೆಗಳಿಗೆ ಸೋವಿಯೆತ್ ಪ್ರಯೋಗವೇ ಮೂಲ. ಹಾಗೆ ಸ್ಥಾಪನೆಗೊಂಡ ಸಂಬಂಧಗಳು ಇಂದು ಕೂಡ ಆ ದೇಶದೊಂದಿಗೆ ಮುಂದುವರಿಯುತ್ತಿವೆ. ಭಾರತದ ಔದ್ಯೋಗೀಕರಣಕ್ಕೆ, ಕೃಷಿ ಅಭಿವೃದ್ಧಿಗೆ ಹಾಗೂ ಯಂತ್ರೀಕರಣಕ್ಕೆ, ಬಾಹ್ಯಾಕಾಶ ಸಂಶೋಧನೆಗೆ, ತೈಲೋದ್ಯಮದ ಸ್ಥಾಪನೆಗೆ ಸೋವಿಯೆತ್ ಒಕ್ಕೂಟ ನೀಡಿದ ನೆರವು ಅವಿಸ್ಮರಣೀಯ. ಹಾಗೆಯೇ ರಷ್ಯ ಉದಯೋನ್ಮುಖ ದೇಶಗಳ ಅಭಿವೃದ್ಧಿಗೆ ನೀಡಿದ ಸಹಾಯವೂ ಅವಿಸ್ಮರಣೀಯ. ಮುಖ್ಯವಾಗಿ, ಭಾರತ ಸ್ವತಂತ್ರಗೊಂಡ ಮೊದಲ ವರ್ಷಗಳಲ್ಲಿ ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಭಾರತ–ಸೋವಿಯೆತ್ ಒಕ್ಕೂಟಗಳ ಮಧ್ಯೆ ಸಹಕಾರ, ವಿಶ್ವಸಂಸ್ಥೆಯ ಒಳಗೂ ಹಾಗೂ ಹೊರಗೂ ಆದರ್ಶಪ್ರಾಯವಾಗಿತ್ತು. ಸೋವಿಯೆತ್ ಒಕ್ಕೂಟದ ಬೆಂಬಲ ಭಾರತಕ್ಕೆ ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಆಸರೆಯಾಗಿತ್ತು, ಈಗಲೂ ಇದೆ. ಕಾಶ್ಮೀರದ ವಿಷಯದಲ್ಲಿ, ಗೋವಾ ವಿಮೋಚನೆಯ ಸಂದರ್ಭದಲ್ಲಿ, ಬಂಗ್ಲಾದೇಶದ ಸ್ಥಾಪನೆಯ ವಿಚಾರದಲ್ಲಿ ಭಾರತಕ್ಕೆ ಸೋವಿಯೆತ್ ಒಕ್ಕೂಟ ನೀಡಿರುವ ಬೆಂಬಲ ಅಚಲ. ಅಲಿಪ್ತ ಚಳವಳಿಗೆ ಯಾವತ್ತೂ ಬೆಂಬಲ ನೀಡುತ್ತಿದ್ದ ದೇಶ ಸೋವಿಯೆತ್ ರಷ್ಯ.

ಅಕ್ಟೋಬರ್ ಮಹಾಕ್ರಾಂತಿಯಿಂದ ಸ್ಥಾಪಿತವಾದ ಸೋವಿಯೆತ್ ಒಕ್ಕೂಟ ಇಂದು ಅಸ್ತಿತ್ವದಲ್ಲಿಲ್ಲ. ಅದು ಹಾಕಿಕೊಂಡಿದ್ದ ಸಮಾಜವಾದಿ ಸಮಾಜದ ಸ್ಥಾಪನೆಯ ಗುರಿ ಮುಟ್ಟಲಿಲ್ಲ. ಅದಕ್ಕೆ ಕಾರಣಗಳನ್ನು ಕೆದಕುವುದು ಈ ಲೇಖನದ ವ್ಯಾಪ್ತಿಗೆ ಮೀರಿದ್ದು. ಆದರೆ ಆ ಮಹಾಕ್ರಾಂತಿಗೆ ನೂರು ವರ್ಷವಾದರೂ ಅದು ಅವಿಸ್ಮರಣೀಯ. ಅದು ಸದಾಜೀವಂತ, ಹಾಗೆಯೇ ಸಮಾಜವಾದಿ ಸಮಾಜದ ಆದರ್ಶ, ಶೋಷಣೆ ಮುಕ್ತ ವ್ಯವಸ್ಥೆಯ ನಿರ್ಮಾಣದ ಗುರಿಯೂ ಜೀವಂತ.

ಸಿ. ಆರ್. ಕೃಷ್ಣರಾವ್
'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫




# ಕ್ರಾಂತಿಯ ರೂವಾರಿ ಲೆನಿನ್

**ನ**ಮ್ಮ ದೇಶದ ಇಂದಿನ ಸನ್ನಿವೇಶದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ದಿನನಿತ್ಯ ಯಾವುದಾದರೊಂದು ಸುಧಾರಣೆಯ ಯೋಜನೆಯನ್ನು ಘೋಷಿಸುತ್ತಿರುತ್ತವೆ. ಕೇಂದ್ರವು ಬ್ಯಾಂಕಿನ ನೋಟುಗಳ ಅಮಾನ್ಯೀಕರಣವನ್ನು ದೊಡ್ಡ ಸುಧಾರಣೆಯೆಂದು ತಮಟೆ ಹೊಡೆಯಿತು. ಆದರೆ ಅದರಿಂದ ನೇರವಾಗಿ ೧೨೦ ಜನ ಸತ್ತರು, ಸಾವಿರಾರು ಜನ ನಿರುದ್ಯೋಗಿಗಳಾದರು, ಹತ್ತಾರು ಉದ್ದಿಮೆಗಳು ನೆಲಕಚ್ಚಿದವು. ಅದಾದ ನಂತರ ದೇಶಕ್ಕೆಲ್ಲಾ ಒಂದೇ ತೆರಿಗೆಯೆಂದು ಜಿಎಸ್‌ಟಿಯ ಸುಧಾರಣೆ ಬಂದಿದೆ. ವ್ಯಾಪಾರಿಗಳು ಮತ್ತು ಗಿರಾಕಿಗಳು ಭಾರಿ ನಷ್ಟಕ್ಕೆ ಸಿಲುಕಿದ್ದಾರೆ, ಮಾರುಕಟ್ಟೆಯಲ್ಲಿ ವಹಿವಾಟು ಕಡಿಮೆಯಾಗಿದೆ. ರಾಜ್ಯ ಸರ್ಕಾರವು ಸ್ವಾಗತಾರ್ಹವಾದ ಕಡಿಮೆ ಬೆಲೆಯ ಕ್ಯಾಂಟೀನ್‌ಗಳನ್ನು ತೆರೆದಿದೆ. ಅದೂ ಒಂದು ಸುಧಾರಣೆಯೇ ಆಗಿದೆ. ಇಂತಹ ಹತ್ತು ಸುಧಾರಣೆಗಳನ್ನು ಜಾರಿಗೊಳಿಸುವುದು ಅಥವಾ ನೂರು ಸುಧಾರಣೆಗಳನ್ನು ಘೋಷಿಸುವುದು ಸಮಾಜದ ಜನರಿಗೆ ಗುಣಾತ್ಮಕ ಬದಲಾವಣೆಗಳನ್ನು ತರುವುದಿಲ್ಲ. ವ್ಯವಸ್ಥೆಯ ದೃಷ್ಟಿಯಿಂದ ಮೋದಿ ಸರ್ಕಾರದ "ಸುಧಾರಣೆಗಳು" ಒಂದು ವರ್ಗಕ್ಕೆ ಮಾತ್ರ ರುಚಿಕರ; ಬೇರೆ ವರ್ಗಗಳಿಗೆ ಅವು ವಿಷ. ಇದ್ದ ಉದ್ಯಮಗಳನ್ನು ಮುಚ್ಚುವುದು ಇಲ್ಲವೇ ಅವನ್ನು ಬೇಕಾಬಿಟ್ಟಿ ಖಾಸಗಿ ಮಾಲಿಕತ್ವಕ್ಕೆ ವರ್ಗಾಯಿಸುವುದು ಜನದ್ರೋಹವೇ ವಿನಾ ಆರೋಗ್ಯಕರ ಬೆಳವಣಿಗೆಯಲ್ಲ. ಅದು ಕ್ರಾಂತಿಯ ಹಾದಿಯಂತೂ ಸುತರಾಂ ಅಲ್ಲ.

ಕ್ರಾಂತಿಯ ಮೂಲಭೂತ ಲಕ್ಷಣವೆಂದರೆ ಒಂದು ವ್ಯವಸ್ಥೆಗೆ ಪರ್ಯಾಯವಾಗಿ ಬೇರೊಂದು ವ್ಯವಸ್ಥೆಯನ್ನು ನಿರ್ಮಾಣ ಮಾಡುವುದು. ಅದು ರಿಪೇರಿ ಕೆಲಸವಲ್ಲ, ಬೇರೊಂದು ಉತ್ತಮವಾದ ಘಟಕವನ್ನು ಹಿಂದಿನ ಘಟಕದ ಜಾಗದಲ್ಲಿ ಹೊಸದಾಗಿ ನಿರ್ಮಿಸುವುದು. ಅದು ಜನಪರವಾಗಿರಬೇಕು ಮತ್ತು ಗುಣಾತ್ಮಕವಾಗಿ ಭಿನ್ನವಾಗಿರಬೇಕು. ಪೋಷಕರು ಮಕ್ಕಳಿಗೆ ವ್ಯಾಸಂಗ ಮಾಡುವಾಗ ಏಕಾಗ್ರತೆ ಇರಬೇಕೆಂದು ಎಚ್ಚರಿಸುತ್ತಿರುತ್ತಾರೆ. ಹಾಗೆಂದರೇನು ? ಗಣಿತವನ್ನೋ ಇತಿಹಾಸವನ್ನೋ ಅಭ್ಯಾಸ ಮಾಡುತ್ತಿರುವಾಗ ಯಾವುದೋ ಕುಚೇಷ್ಟೆಯು ನೀಡಿದ್ದ ಮೋಜನ್ನು ನೆನೆಯುತ್ತಿರಬಾರದು ಎಂದರ್ಥ. ಹತ್ತು ವಿಷಯಗಳತ್ತ ಗಮನಕೊಡುವ ಕೆಲಸವನ್ನು ಮನಸ್ಸಿಗೆ ಕೊಡದೆ ಅದನ್ನು ನಿಶ್ಚಿತವಾಗಿ ಒಂದು ವಿಷಯಕ್ಕೆ ಸೀಮಿತಗೊಳಿಸಲು ಸಾಧ್ಯವಾದರೆ ಮಗುವಿನ ಗ್ರಹಣ ಸಾಮರ್ಥ್ಯವು ಗುಣಾತ್ಮಕವಾಗಿ ಬದಲಾವಣೆ ಹೊಂದುತ್ತದೆ, ವ್ಯಾಸಂಗ ಮಾಡಿದ್ದು ಸ್ಥಿರವಾಗಿ ಮನಸ್ಸಿನಲ್ಲಿ ಉಳಿಯುತ್ತದೆ. ಅದೇ ಕ್ರಾಂತಿ. ಹತ್ತು ವಿಷಯಗಳನ್ನು ಎಂಟು ವಿಷಯಗಳಿಗೆ ಇಳಿಸಿದರೆ ಅದು ಸುಧಾರಣೆ. ಯಾವ ವಿಷಯವೂ ಇಲ್ಲದೆ ಮನಸ್ಸು ಪೂರ್ತಿ ನಿಶ್ಚಲವಾಗಿದ್ದರೆ ವ್ಯಕ್ತಿಯು ನಿಜಾರ್ಥದಲ್ಲಿ ಯೋಗಿಯಾಗುತ್ತಾನೆ. ನಮ್ಮ ಢೋಂಗಿಬಾಬಾಗಳು ಹತ್ತು ವಿಷಯಗಳನ್ನು ಇಪ್ಪತ್ತು ಮಾಡುವ ಭೋಗಿಗಳು, ಆದ್ದರಿಂದ ಅವರ ಮನಸ್ಸು ಎಂದಿಗೂ ಕ್ರಾಂತಿಕಾರಕವಾಗಿ ಬದಲಾಗುವುದಿಲ್ಲ. ಅವರು ನಿತ್ಯಾನಂದನೋ, ರಾಘವೇಶನೋ, ರಾಮರಹೀಮನೋ ಆಗುತ್ತಾರೆ. ಅದೃಷ್ಟವಿದ್ದರೆ ಜೈಲಿಗೆ ಹೋಗುತ್ತಾರೆ, ಇಲ್ಲದಿದ್ದರೆ ಯಾರಾರದೋ ಕಾಲು ಕಟ್ಟಿ ಮಠಗಳಲ್ಲಿ ಪರಾವಲಂಬಿಗಳಾಗಿ "ಸುಖವಾಗಿ" ಜೀವಿಸುತ್ತಾರೆ !

ರಷ್ಯಾದಲ್ಲಿ ಲೆನಿನ್ನರ ನೇತೃತ್ವದಲ್ಲಿ ಕಮ್ಯುನಿಸ್ಟ್ (ಬಾಲ್ಶೆವಿಕ್) ಪಕ್ಷವು ೧೯೧೭ರ ನವೆಂಬರ್ ೭ರಂದು ನಡೆಸಿದ್ದು ಕ್ರಾಂತಿ, ಏಕೆಂದರೆ ಅಂದಿನಿಂದ ಎಪ್ಪತ್ತೆರಡು ವರ್ಷಗಳ ಕಾಲ ರಷ್ಯಾದಲ್ಲಿ ಗುಣಾತ್ಮಕವಾಗಿ ಭಿನ್ನವಾದ ಜನತಾ ಪ್ರಭುತ್ವವು ಅಸ್ತಿತ್ವದಲ್ಲಿ ಇರುವಂತಾಯಿತು. ಸಾಮಾಜಿಕ ಸಂಬಂಧಗಳು ಅತ್ಯುತ್ತಮವಾಗಿ ಬದಲಾಗಲಿಲ್ಲ, ಆದರೆ ಉತ್ಪಾದನಾ ಸಂಬಂಧಗಳು ಪೂರ್ತಿಯಾಗಿ ಭಿನ್ನವಾದವು. ಮಾಲಿಕ ಮತ್ತು ಕೂಲಿ, ಜಮೀನ್ದಾರ ಮತ್ತು ಗೇಣಿದಾರ, ಖಾಸಗಿ ಉದ್ಯಮಿ ಮತ್ತು ಕಾರ್ಮಿಕ ಎಂಬ ವರ್ಗ ಸಂಬಂಧಗಳು ನಶಿಸುತ್ತಾ ಸಾಮಾಜಿಕ ಒಡೆತನ ಮತ್ತು ಸಮುದಾಯದ ಪಾಲ್ಗೊಳ್ಳುವಿಕೆ ವಿಕಸಿಸುತ್ತಾ ಮುನ್ನಡೆಯಿತು. ಅದೇಕೆ ಹಾಗೆಯೇ ಮುಂದುವರಿದು ಇನ್ನೂ ಮೇಲ್ಮಟ್ಟಕ್ಕೆ ಏರಲಿಲ್ಲ ಎಂಬುದು ಬೇರೊಂದು ಅಧ್ಯಯನದ ವಸ್ತುವಾಗುತ್ತದೆ.

ರಷ್ಯಾದ ಅಂದಿನ ಪಂಚಾಂಗದಲ್ಲಿ ಈಗ

ಚಾಲ್ತಿಯಲ್ಲಿರುವ ಗ್ರಿಗೋರಿಯನ್ ಕ್ಯಾಲೆಂಡರ್ ಚಾಲ್ತಿಯಲ್ಲಿರಲಿಲ್ಲ. ಅವರ ಕ್ಯಾಲೆಂಡರ್‌ನಲ್ಲಿ ನವಂಬರ್ ೭ ಎನ್ನುವುದು ಅಕ್ಟೋಬರ್ ೨೫ ಆಗಿತ್ತು. ಆದ್ದರಿಂದ ಕ್ರಾಂತಿಯನ್ನು "ಮಹಾನ್ ಅಕ್ಟೋಬರ್ ಸಮಾಜವಾದಿ ಕ್ರಾಂತಿ" ಎಂದು ಕರೆಯಲಾಯಿತು. ಕ್ರಾಂತಿಯು ಒಬ್ಬ ಮಹಾಪುರುಷನ ಇಚ್ಛೆಯಂತೆ ಅಥವಾ ಕಾಣಿಕೆಯಂತೆ ಜನತೆಗೆ ಬಳಿವಳಿಯಾಗಿ ದೊರಕಲಿಲ್ಲ. ಲೆನಿನ್ ಅಂಥವರು ಅವತಾರ ಪುರುಷರಲ್ಲ, ಅವರು ದೇಶವಾಸಿಗಳನ್ನು ಸಂಘಟಿಸಿ ಕ್ರಾಂತಿ ಪ್ರಕ್ರಿಯೆಗೆ ಚಾಲನೆ ಕೊಡುವ ವ್ಯಕ್ತಿಗಳು, ಅಷ್ಟೆ. ನಮ್ಮಲ್ಲಿ ವಿಷ್ಣುವಿನ ಒಂಭತ್ತು ಅವತಾರಗಳು ಮುಗಿದು ಹತ್ತನೆಯದರ ನಿರೀಕ್ಷೆಯಲ್ಲಿದ್ದೇವೆ. ಅವನು ಧರೆಗಿಳಿದು ಬಂದು ದುಷ್ಟರನ್ನು ಶಿಕ್ಷಿಸುತ್ತಾನೆ, ಶಿಷ್ಟರನ್ನು ರಕ್ಷಿಸುತ್ತಾನೆ, ಧರ್ಮ ಸಂಸ್ಥಾಪನೆ ಮಾಡುತ್ತಾನೆ; ಆ ಪರಿಣಾಮವನ್ನು ಪಡೆಯಲು ಅವೆಷ್ಟೋ ಅಕ್ಷೋಹಿಣಿ ಸೈನ್ಯಗಳು ನಾಶವಾಗುತ್ತವೆ. ಅಂದರೆ, ಮಾನವ ಜೀವಿಗಳು ಹತರಾಗುತ್ತಾರೆ. ಅವತಾರ ಪುರುಷ ಆ ಕಡೆ ಹೋದನೆಂದರೆ ಮತ್ತೆ ಈ ಕಡೆ ಅದೇ ಹಳೆಯ ಅಧರ್ಮ. ಅದನ್ನು ಹೋಗಲಾಡಿಸಲು ಅವನ ಬರುವಿಕೆಗಾಗಿ ಕಾಯುತ್ತಾ ನಾವು ತಪ್ಪತರಾಗುತ್ತೇವೆ. ನರೇಂದ್ರ ಮೋದಿ – ರಾಹುಲ ಗಾಂಧಿ – ನಿತೀಶಕುಮಾರರಂಥವರು ಸುಧಾರಣೆಗಳ ಬುತ್ತಿಯನ್ನು ಬಿಚ್ಚಿಡುವುದಾಗಿ ಜನತೆಗೆ ಆಶ್ವಾಸನೆ ಕೊಡುತ್ತಿರುತ್ತಾರೆ. ಅವೇ ಹಳೆಯ ಉತ್ಪಾದನಾ ಸಂಬಂಧಗಳು ಗೂಟ ಹೊಡೆದುಕೊಂಡು ಕೂತಿರುವಾಗ ಬುತ್ತಿಯು ಹಳಸಬಹುದೇ ವಿನಾ ಉಣಲಿಕ್ಕೆ ಸಿಗುವುದಿಲ್ಲ. ಕ್ರಾಂತಿ ಜರುಗಿದ ೨೪ ಗಂಟೆಗಳು ಕಳೆಯುವ ಮುನ್ನ ಲೆನಿನ್ ನೇತೃತ್ವದ ಹೊಸ ಕ್ರಾಂತಿಕಾರಿ ಪ್ರಭುತ್ವವು ಎರಡು ಅತ್ಯದ್ಭುತ ಶಾಸನಗಳನ್ನು ಜಾರಿಗೊಳಿಸಿತು : ಭೂಮಿಯೆಲ್ಲಾ ಉಳುವ ರೈತರಿಗೆ ಎಂಬ ಒಂದು ಶಾಸನ ಮತ್ತು ರಷ್ಯಾಕ್ಕೆ ಯುದ್ಧ ಬೇಡ, ಶಾಂತಿ ಬೇಕು, ಎಂಬ ಇನ್ನೊಂದು ಶಾಸನ. ಮೊದಲನೆಯ ಶಾಸನವು ನೂರಾರು ವರ್ಷಗಳ ಕಾಲ ರೈತಾಪಿ ವರ್ಗವನ್ನು ಭೂ ಒಡೆಯರು ತಮ್ಮ ಅಧೀನದಲ್ಲಿಟ್ಟುಕೊಂಡಿದ್ದುದನ್ನು ಕೊನೆಗೊಳಿಸಿತು. ಅದಲ್ಲವೆ ನಿಜವಾದ ಗುಣಾತ್ಮಕ ಬದಲಾವಣೆ! ಎರಡನೆಯ ಶಾಸನವು ಮೊದಲ ಮಹಾಯುದ್ಧದಲ್ಲಿ ಬಲವಂತಕ್ಕೆ ಮತ್ತು ಹುಚ್ಚು ಆಸೆಗಳು ಪೂರೈಸುತ್ತವೆಂಬ ಹಂಬಲಕ್ಕೆ ಯುದ್ಧದಲ್ಲಿ ಪಾಲ್ಗೊಂಡು ವಿಪರೀತ ಕಂಗಾಲಾಗಿದ್ದ ದೇಶವನ್ನು ಶಾಂತಿಪಥಕ್ಕೆ ಕರೆತಂದಿತು. ಕ್ರಾಂತಿ ಜರುಗಿದಾಗ ರಷ್ಯಾದಲ್ಲಿ ರಕ್ತಪಾತವಾಗಲಿಲ್ಲ; ಕ್ರಾಂತಿಯ ಹುಟ್ಟಡಗಿಸಲು ಯೂರೋಪಿನ ಹದಿನಾಲ್ಕು ದೇಶಗಳು ತಮ್ಮ ಸೈನ್ಯಗಳನ್ನು ರಷ್ಯಾದೊಳಕ್ಕೆ ನುಗ್ಗಿಸಿದಾಗ ಸಾವು–ನೋವುಗಳು ಸಂಭವಿಸಿದವು. ಲೆನಿನ್ ಮತ್ತು ಬಾಲ್ಶೆವಿಕ್ (ಕಮ್ಯುನಿಸ್ಟ್) ಪಕ್ಷದ ನಿಲುವು ಮತ್ತು ಸಾಧನೆ ಅಂತಹವು.

ಲೆನಿನ್ ಕುರಿತು ದೀರ್ಘವಾಗಿ ನಿರೂಪಣೆ ಮಾಡುವುದರ ಬದಲು ಅವರೊಟ್ಟಿಗೆ ಕ್ರಾಂತಿಯ ಮುಂಚೆ, ಕ್ರಾಂತಿಯ ವೇಳೆ ಮತ್ತು ಕ್ರಾಂತಿಯ ನಂತರ ಬಹಳ ನಿಷ್ಠೆಯಿಂದ ಕೆಲಸ ಮಾಡಿದ ಎ. ಬುಬ್ನೋವ್ ಎಂಬಾತ ಲೆನಿನ್ ಬಗ್ಗೆ ನೀಡಿರುವ ಕಿರುಚಿತ್ರಣವೊಂದನ್ನು ಪರಿಚಯಿಸುವುದು ಸೂಕ್ತವೆನಿಸುತ್ತದೆ. ಬುಬ್ನೋವ್ ಪಕ್ಷದ ಕೇಂದ್ರ ಶಾಖೆಯ ಸದಸ್ಯ. ಸಶಸ್ತ್ರ ಕ್ರಾಂತಿಯನ್ನು ಆಯೋಜಿಸುವ ಕೆಲಸವನ್ನು ಈ ಶಾಖೆಗೆ ನೀಡಲಾಗಿತ್ತು. ಆತ ಕ್ರಾಂತಿಯ ವೇಳೆ ಮಿಲಿಟರಿ ಕ್ರಾಂತಿಕಾರಿ ಸಮಿತಿಯ ಸದಸ್ಯನೂ ಆಗಿದ್ದ. ಪಕ್ಷದಲ್ಲಿ ಎಂತಹ ಚರ್ಚೆಗಳು ನಡೆಯುತ್ತಿದ್ದವು ಮತ್ತು ಕ್ಲಿಷ್ಟಕರ ಸನ್ನಿವೇಶಗಳನ್ನು ಲೆನಿನ್ ಹೇಗೆ ನಿಭಾಯಿಸುತ್ತಿದ್ದರು ಎಂಬುದನ್ನು ಬುಬ್ನೋವ್ ಸಂಕ್ಷಿಪ್ತವಾಗಿ ದಾಖಲಿಸಿದ್ದಾನೆ. ಅಕ್ಟೋಬರ್ ಕ್ರಾಂತಿಯ ದಿನಗಳಲ್ಲಿ ಲೆನಿನ್ ಹೇಗೆ ಕಾರ್ಯತತ್ಪರರಾಗಿರುತ್ತಿದ್ದರು ಎಂಬುದನ್ನು ಸೂಕ್ಷ್ಮವಾಗಿ ತಿಳಿಯಲು ಈ ಚಿತ್ರಣವು ಸಹಾಯಕವಾದೀತು. ಮುಂದಿನದನ್ನು ಬುಬ್ನೋವ್ ಮಾತುಗಳಿಂದಲೇ ಅರಿಯೋಣ :

ಪೆಟ್ರೋಗ್ರಾಡ್‌ನಲ್ಲಿ ಕ್ರಾಂತಿಯ ಕಿಡಿ ಸಿಡಿಯುವುದಕ್ಕೆ ಸ್ವಲ್ಪ ಮೊದಲು ನಾನು ಲೆನಿನ್‌ನನ್ನು ವೈಬೋರ್ಗ್‌ನಲ್ಲಿ ಕಂಡಿದ್ದೆ. ಆಗ ತಾನೆ ಆತ ಫಿನ್ಲೆಂಡಿನಿಂದ ಹಿಂದಿರುಗಿದ್ದ. ಕ್ರಾಂತಿಗಾಗಿ ಲೆನಿನ್ ತಹತಹಿಸುತ್ತಿದ್ದ. ಆದ್ದರಿಂದ ಪೆಟ್ರೋಗ್ರಾಡ್‌ನಲ್ಲಿ ಯಾರ ಸೈನಿಕ ಶಕ್ತಿ ಎಷ್ಟಿದೆಯೆಂದು ಅತ್ಯಂತ ಸೂಕ್ಷ್ಮವಾಗಿ ಗಮನಿಸುತ್ತಿದ್ದ. ಜೊತೆಗೆ, ತಾಂತ್ರಿಕವಾಗಿ ನಾವು ಸಿದ್ಧರಿದ್ದೇವೆಯೇ ಎಂದು ಪರಿಶೀಲಿಸುತ್ತಿದ್ದ. ಪಕ್ಷದ ಕೇಂದ್ರೀಯ ಸಮಿತಿಯ ಸಭೆಯಲ್ಲಿ ಲೆನಿನ್ ಮೊದಲು ಕಾಣಿಸಿಕೊಂಡಿದ್ದು ಅಕ್ಟೋಬರ್ ೧೦ರಂದು. ಅದು ಜರುಗಿದ್ದು ಸುಖನೋವ್‌ನ ಮನೆಯಲ್ಲಿ. ಅಕ್ಟೋಬರ್ ೧೬ರಂದು ಕೇಂದ್ರ ಸಮಿತಿಯ ಸಭೆ ಲೆಸ್ನಾಯ್ ವಿಭಾಗದಲ್ಲಿತ್ತು. ಅದಕ್ಕೆ ಅನೇಕ ಸಂಗಾತಿಗಳಿಗೆ ಆಹ್ವಾನವಿತ್ತು. ಲೆನಿನ್ ಅದರಲ್ಲಿ ಪಾಲ್ಗೊಂಡು ಈ ಎರಡೂ ಸಭೆಗಳು ನಿರ್ಣಾಯಕವಾಗಿದ್ದವು, ಏಕೆಂದರೆ ಕ್ರಾಂತಿಯ ವಿವರಗಳನ್ನು ತೀರ್ಮಾನಿಸಿದ್ದು ಆ ಸಭೆಗಳಲ್ಲಿ. ಅಕ್ಟೋಬರ್ ೨೪ರ ರಾತ್ರಿ ಲೆನಿನ್ ಸ್ಮೋಲ್ನಿ ಇನ್‌ಸ್ಟಿಟ್ಯೂಟನ್ನು ತಲುಪಿದ. ಲೆನಿನ್ ಸೇರಿದಂತೆ ಎಲ್ಲ ಕೇಂದ್ರ ಸಮಿತಿ ಸದಸ್ಯರೂ ಅಲ್ಲಿ ೧೪ನೇ ನಂಬರಿನ ಕೊಠಡಿಯಲ್ಲಿ ಉಳಿದಿದ್ದರು. ಕೆಲವರು ಅವರ ಕುರ್ಚಿಗಳಲ್ಲಿ ಕುಳಿತೇ ನಿದ್ದೆ ಹೋಗಿದ್ದರು. ಕೆಲವರು ನೆಲದ ಮೇಲೆ ಪವಡಿಸಿದ್ದರು. ಇಲ್ಯಿಚ್‌ಗೆ (ಅದು ಲೆನಿನ್ ಹೆಸರು) ಶಿಶಿರ ಅರಮನೆ (ವಿಂಟರ್ ಪ್ಯಾಲೇಸ್) ಬೇಗ ನಮ್ಮ ಸ್ವಾಧೀನಕ್ಕೆ ಬರಬೇಕೆಂಬ ತವಕ. ಇದ್ದವರ ಮೇಲೆಲ್ಲಾ ಅದಕ್ಕಾಗಿ ಒತ್ತಡ ಹೇರುತ್ತಿದ್ದ. ಏಕೆಂದರೆ ಆ ಕಡೆಯಿಂದ ಯಾವ ಫಲಿತಾಂಶಗಳ ವರದಿಯೂ ಬರುತ್ತಿರಲಿಲ್ಲ. ೨೬ರ ಬೆಳಿಗ್ಗೆ ಮೊಟ್ಟ ಮೊದಲ ಬಾರಿಗೆ ಅವನು ಮಿಲಿಟರಿ ಕ್ರಾಂತಿಕಾರಿ ಸಮಿತಿಯ ಸಭೆಯಲ್ಲಿ ಭಾಗವಹಿಸಿದ.

ಕ್ರಾಂತಿಕಹಳೆ ಮೊಳಗಿದ ನಂತರ ಕೇಂದ್ರ ಸಮಿತಿಯ ನಾವೆಲ್ಲಾ ಪ್ರತಿದಿನ ಲೆನಿನ್ನನ ಭೇಟಿ ಮಾಡುತ್ತಿದ್ದೆವು. ಕೆಲವು ದಿನ ಒಂದು ಬಾರಿಗೂ ಜಾಸ್ತಿ ಕೂಡ ಆಗಿಬಿಡುತ್ತಿತ್ತು. ಆ ದಿನಗಳು ನೆನಪಿನಲ್ಲಿ ಅಚ್ಚಳಿಯದೆ ಉಳಿಯುವಂಥವು. ನೂರಾರು ಸೈನಿಕರು, ಕಾರ್ಮಿಕರು, ನೌಕಾದಳದವರು, ಸ್ಮೋಲ್ನಿಯಲ್ಲಿ ಕಾಣಿಸಿಕೊಳ್ಳುತ್ತಿದ್ದರು. ಪೆಟ್ರೋಗ್ರಾಡ್‌ನ (ಇದು ನಂತರ ಲೆನಿನ್‌ಗ್ರಾಡ್ ಆಯಿತು. ಪಾಪಿ ಗೋರ್ಬಚೇವನ ನಂತರ ಮತ್ತೆ ಅದು ಸೆಂಟ್ ಪೀಟರ್ಸ್‌ಬರ್ಗ್ ಆಗಿ ಹೋಯಿತು.) ಎಲ್ಲೆಡೆ ಗುಂಡುಗಳ ಸದ್ದು. ಹೀಗೆ ಆರಂಭವಾದ ಗುಂಡಿನ ಸದ್ದು ಮೂರು ವರ್ಷ ನಿರಂತರವಾಗಿ ಮುಂದುವರಿಯುವಂತಾಯಿತು. ಏಕೆಂದರೆ ನಾವು ಬಹಳ ತೀಕ್ಷ್ಣವಾಗಿ ಹೋರಾಡಿ ನಾಗರಿಕ ಅಂತರ್ಯುದ್ಧದಲ್ಲಿ ವಿಜಯಿಗಳಾಗಬೇಕಿತ್ತು.

ಆಗ ನೊಡಬೇಕಿತ್ತು ಇಲ್ಯಿಚ್‌ನನ್ನು: ಇಡೀ ಜನಸಮುದಾಯದ ಅಗಾಧ ಆಶಯ ಅವನಲ್ಲಿ ಮೂರ್ತಿಭವಿಸಿತ್ತು. ಏನೇ ಆಗಲಿ, ನಾವು ಗೆಲ್ಲಲೇಬೇಕೆಂಬುದು ಜನತೆಯ ಆಶಯವಾಗಿತ್ತು. ಸಂಶಯ ಪಿಶಾಚಿಗಳು ನಮ್ಮಲ್ಲಿರಲಿಲ್ಲವೆಂದೇನಲ್ಲ. ಕೇಂದ್ರ ಸಮಿತಿಯ ಸಭೆಗಳಲ್ಲಿ ಲೆನಿನ್ ಅವರನ್ನು ಮಾತುಗಳಲ್ಲೇ ಥಳಿಸಿಬಿಡುತ್ತಿದ್ದ. ಕ್ರಾಂತಿಯ ನಾಯಕ ಅವನು, ಆದ್ದರಿಂದ ಕ್ರಾಂತಿಯು ಜಯಗಳಿಸಲು ಅಗತ್ಯವಾದ ಎಲ್ಲ ಸನ್ನಿವೇಶಗಳನ್ನೂ ಅವನು ಎಚ್ಚರದಿಂದ ತೂಗಿನೋಡುತ್ತಿದ್ದ. ನಿರ್ದೇಶನದಲ್ಲಿ ಅವನು ಭಾರಿ ಬಿಗಿ. ಅವನು ಯಾವಾಗ ವಿರಾಮ ಪಡೆಯುತ್ತಿದ್ದನೋ ಕಾಣೆ, ಅಷ್ಟು ಕಾರ್ಯಮಗ್ನತೆ ಅವನದು, ವಿರಾಮವಿದ್ದಾಗಲೂ ಮೊಗಸಾಲೆಗಳಲ್ಲಿ ಅತ್ತಿಂದಿತ್ತ ಓಡಾಡುತ್ತಾ ಇರುತ್ತಿದ್ದ. ಎರಡೂ ಕೈಗಳನ್ನೂ ಬೆನ್ನಹಿಂದೆ ಕಟ್ಟಿ ಓಡಾಡುವುದೇ ಒಂದು ನೋಟ. ಆಗಲೂ ಯಾರಾದರೂ ಸಂಗಾತಿಗಳು ಅವನೊಡನೆ ಸಂಭಾಷಣೆಯಲ್ಲಿರುತ್ತಿದ್ದರು, ಸೂಚನೆಗಳನ್ನು ಪಡೆಯುತ್ತಿದ್ದರು.

ನಮ್ಮ ಮಹಾನ್ ಕ್ರಾಂತಿಯ ದಿನಗಳಲ್ಲಿ ಇಲ್ಯಿಚ್‌ನ ಜೀವ ತುಂಬಿಬಂದಿತ್ತು. ಸಂತಸದ ಭಾವ ಮುಖದಲ್ಲಿ ಅರಳಿತ್ತು. ಅದೇನೋ ಒಂದು ವಿಧದ ಬೆಳಕು ಚೆಲ್ಲುತ್ತಿದ್ದನೋ ಎಂದು ತೋರುತ್ತಿತ್ತು. ಅವನೆಂದೂ ಹಿಡಿತವನ್ನು ಸಡಿಲಿಸಲಿಲ್ಲ, ಅಭಿಪ್ರಾಯಗಳನ್ನು ಸುಲಭಕ್ಕೆ ಬದಲಾಯಿಸುವವನಲ್ಲ. ಅವನ ಭರವಸೆ ಮತ್ತು ಬಿಗಿಪು ಗಮನಾರ್ಹ.

ಅಂದಿನ ಪಕ್ಷದೊಳಗಿನ ಘಟನೆಗಳ ಪೈಕಿ ಒಂದನ್ನು ನಾನು ಹೇಳಲೇಬೇಕು. – ಅದು ಮಹತ್ತರ ಗಳಿಗೆ. ಕೇಂದ್ರ ಸಮಿತಿಯು ತನ್ನ ಅಕ್ಟೋಬರ್ ತೀರ್ಮಾನ ಕೈಗೊಳ್ಳಬೇಕಾದ ಕಡೆಯ ಗಳಿಗೆ. ಅಂತೆಯೇ, ಝಿನೊವೀವ್ ಮತ್ತು ಕಮೆನೆವ್ ಇಬ್ಬರನ್ನೂ ಮೆಟ್ಟಿ ನಿಲ್ಲುವ ಕೊನೆಯ ಹಂತ ಕೂಡ ಅದಾಗಿತ್ತು. ಅವರಿಬ್ಬರೂ ಅಕ್ಟೋಬರ್ ಕ್ರಾಂತಿಯ ವಿರೋಧಿ ನೆಲೆಯಲ್ಲಿ ನಿಂತು ತೂಗಾಡುತ್ತಿದ್ದರು. ಅಕ್ಟೋಬರ್ ೨೫–೨೬ರ ನಂತರ ರೈಲ್ವೆ ಕೆಲಸಗಾರರ ಸಂಘವು ಕೆಲವು ರಾಜಿಸೂತ್ರಗಳನ್ನು ಮುಂದಿಡಲಾರಂಭಿಸಿತ್ತು ಮತ್ತು ಅದಕ್ಕೆ ನಮ್ಮ ಒಪ್ಪಿಗೆ ಪಡೆಯುವ ಸಾಹಸದಲ್ಲಿ ತೊಡಗಿತ್ತು.

ಇದನ್ನು ಕುರಿತು ಪಕ್ಷದ ವಾರ್ತಾಪತ್ರವು ತನ್ನ ನಿಲುವನ್ನು ಪ್ರಕಟಿಸಿತ್ತು : "ಅಖಿಲ ರಷ್ಯಾ ರೈಲ್ವೆ ಕೆಲಸಗಾರರ ಸಂಘವು ಸಮ್ಮಿಶ್ರ ಸಮಾಜವಾದಿ ಸಚಿವ ಸಂಪುಟ ರಚನೆಗೊಳ್ಳಬೇಕೆಂಬ ಒತ್ತಾಯವನ್ನು ಮಂಡಿಸಿದೆ. ಈ ನಿಲುವನ್ನು ಯಾವುವಾದರೂ ಪಕ್ಷಗಳು ವಿರೋಧಿಸಿದರೆ ದೇಶಾದ್ಯಂತ ರೈಲ್ವೆ ಕೆಲಸಗಾರರ ಮುಷ್ಕರ ಹೂಡುವುದಾಗಿ ಬೆದರಿಕೆ ಒಡ್ಡಲಾಗಿದೆ. ರಾಜಿ ಸೂತ್ರವನ್ನು ರೂಪಿಸಲು ಈಗಾಗಲೇ ಒಂದು ಕೇಂದ್ರ ನಿರ್ವಾಹಕ ಸಮಿತಿಯನ್ನು ರಚಿಸಲಾಗಿದೆ. ಅದರಲ್ಲಿ ನಮ್ಮ ಕೇಂದ್ರ ಸಮಿತಿ ಹಾಗೂ ಇತರ ಪಕ್ಷಗಳ ಕೇಂದ್ರ ಸಮಿತಿಗಳ ಪ್ರತಿನಿಧಿಗಳಿರುತ್ತಾರೆ. ಬಾಲ್ಶೆವಿಕರನ್ನು ಸಂಪೂರ್ಣವಾಗಿ ವಿರೋಧಿಸುವ 'ಕ್ರಾಂತಿಯ ಮುಕ್ತಿಗಾಗಿ ರಚಿತವಾಗಿರುವ ಸಮಿತಿ'ಯ ಪ್ರತಿನಿಧಿಗಳೂ ಇರುತ್ತಾರೆ. (ಈ ಸಮಿತಿಯು ಸೋವಿಯೆತ್ತುಗಳ ವಿರೋಧಿಯಾಗಿತ್ತು. ಅದು ಅಸ್ತಿತ್ವಕ್ಕೆ ಬಂದಿದ್ದು ಕ್ರಾಂತಿ ಜರುಗಿದ ಎರಡು ವಾರಗಳ ನಂತರ. ಅದರಲ್ಲಿ ಪೆಟ್ರೋಗ್ರಾಡ್ ನಗರಸಭೆ ಸದಸ್ಯರು, ಮೆನ್ಶೆವಿಕರು, ಸಮಾಜವಾದಿ – ಕ್ರಾಂತಿಕಾರಿಗಳು ಮತ್ತು ಬೇರೆ ಕೆಲವರು ಇದ್ದರು). ಜೊತೆಗೆ ರೈಲ್ವೆ ಕೆಲಸಗಾರರ ಸಂಘ ಹಾಗೂ ಅಂಚೆ – ಟೆಲಿಗ್ರಾಫ್ ನೌಕರರ ಸಂಘಗಳ ಪ್ರತಿನಿಧಿಗಳೂ ಇರುತ್ತಾರೆ." ಈ "ರಾಜಿ – ಆಯೋಗವು" ಅತಿದೀರ್ಘಕಾಲಿಕ ಚರ್ಚೆಗಳನ್ನು ಮಾಡುತ್ತಾ "ಎಲ್ಲ ಸೋವಿಯತ್ ಪಕ್ಷಗಳ ಜಂಟೀ ಸಮಾಜವಾದಿ ಸರ್ಕಾರದ" ರಚನೆಯ ಯೋಜನೆಯತ್ತ ಗಮನ ಹರಿಸಿತ್ತು. ನಮ್ಮ ಪಕ್ಷದ ಕೇಂದ್ರ ಸಮಿತಿಯಲ್ಲೂ ಭಿನ್ನಾಭಿಪ್ರಾಯಗಳಿದ್ದವು. ಕೆಲವರು ಅಡ್ಡಗೋಡೆಯ ಮೇಲೆ ಕುಳಿತಿದ್ದರು. ಕೇಂದ್ರ ನಿರ್ವಾಹಕ ಸಮಿತಿಯ ಬಾಲ್ಶೆವಿಕ್ ಪಂಗಡದಲ್ಲಿ ಸಹ ಇಂತಹ ಅಭಿಪ್ರಾಯವನ್ನು ಉಳ್ಳವರಿದ್ದರು.

ಈ ಕೆಲಸಕ್ಕೆ ಬಾರದ ಬಾಲಿಶ ಲವಲವಿಕೆಯಿಂದ ಇಲ್ಯಿಚ್ ರೋಸಿಹೋಗಿದ್ದ. ಈ ತೊಯ್ದಾಟವನ್ನು ಕೊನೆಗೊಳಿಸಬೇಕೆಂಬುದು ಅವನ ಸ್ಪಷ್ಟ ನಿರ್ಧಾರವಾಗಿತ್ತು. ಕ್ರಾಂತಿಯ ಎರಡು ವಾರಗಳ ನಂತರ ಕೇಂದ್ರ ಸಮಿತಿ ಲೆನಿನ್ ಮಂಡಿಸಿದ್ದ ಒಂದು ನಿರ್ಣಯವನ್ನು ಅಂಗೀಕರಿಸಿತು. "ಸೋವಿಯೆತ್ತುಗಳಲ್ಲಿರುವ ಅಲ್ಪಸಂಖ್ಯಾತರು ನೀಡುವ ಗಡುವು ಮತ್ತು ಬೆದರಿಕೆಗಳಿಗೆ ಮಣಿಯುವುದು ಖಂಡನೀಯ"ವೆಂದು ಹೇಳಿ ನಿರ್ಣಯವು "ಸಂಶಯಗ್ರಸ್ತರು ಮತ್ತು ಅಡ್ಡಗೋಡೆಯ ಮೇಲೆ ಕುಳಿತಿರುವವರು ತಮ್ಮ ತೊಯ್ದಾಟಗಳನ್ನು ಕೊನೆಮಾಡಿ ಸರ್ಕಾರದ ಕಾರ್ಯಕ್ರಮಗಳಿಗೆ ತಮ್ಮ ಹೃದಯಪೂರ್ವಕ ಬೆಂಬಲವನ್ನು ಅತೀವ ಶ್ರದ್ಧೆಯಿಂದ ನೀಡಬೇಕೆಂದು ಬಯಸುತ್ತೇವೆ" ಎಂದು ನಿರ್ಣಯ ಹೇಳಿತು.

ಅದರಿಂದ ತೊಯ್ದಾಟಗಳೇನೂ ಕೊನೆಗೊಳ್ಳಲಿಲ್ಲ. ಸಂಶಯಗ್ರಸ್ತರು ತಮ್ಮ ಪಕ್ಷದ ಕೇಂದ್ರ ಸಮಿತಿಯ ದನಿಗೆ ಓಗೊಡಲಿಲ್ಲ. ತಮ್ಮ ತೇಪೇದಾರಿ ಚಟುವಟಿಕೆಗಳನ್ನು ಅವರು ಮುಂದುವರಿಸಿದರು. ನವಂಬರ್ ೧೫ರಂದು ಕೇಂದ್ರ ಸಮಿತಿಯ ಪರವಾಗಿ ಒಂದು ಹೇಳಿಕೆಯನ್ನು ಲೆನಿನ್ ಸಿದ್ಧಪಡಿಸಿದ. ರಾಜಿಸೂತ್ರ ಮತ್ತು ಕೊನೆಯಿಲ್ಲದ ತೊಯ್ದಾಟಗಳನ್ನು ಹರಿತವಾಗಿ ವಿಮರ್ಶೆಗೆ ಗುರಿಪಡಿಸಿದ ಹೇಳಿಕೆ ಅದು. ಹೇಳಿಕೆಯನ್ನು ಸಿದ್ಧಪಡಿಸಿದ ನಂತರ ಕೇಂದ್ರ ಸಮಿತಿಯ ಸದಸ್ಯರನ್ನೆಲ್ಲಾ ಪ್ರತ್ಯೇಕವಾಗಿ ಒಬ್ಬೊಬ್ಬರನ್ನೇ ತನ್ನ ಕೊಠಡಿಗೆ ಬರಮಾಡಿಕೊಂಡ. "ಹೇಳಿಕೆಯನ್ನು ಓದಿ ಅದಕ್ಕೆ ಸಹಿ ಹಾಕಿ" ಎಂದು ಅವರನ್ನು ವಿನಂತಿಸಿಕೊಂಡ. ಸಮಿತಿಯ ಬಹುಸಂಖ್ಯಾತ ಸದಸ್ಯರು ಅದಕ್ಕೆ ಸಹಿ ಮಾಡಿದರು. ಮಾರನೆಯ ದಿನ ಅಂದುಕೊಂಡಿದ್ದೇನೆ, ಕೇಂದ್ರ ಸಮಿತಿಯ ಸಭೆಯಲ್ಲಿ ಅದನ್ನು ಬಹಿರಂಗಗೊಳಿಸಲಾಯಿತು.

ಕೇಂದ್ರ ಸಮಿತಿಯು ಮತ್ತೊಂದು ಹೇಳಿಕೆಯನ್ನು ಸಹ ಅಂಗೀಕರಿಸಿತು : "ಅಲ್ಪಸಂಖ್ಯಾತರ ಪ್ರತಿನಿಧಿಗಳಾದ ಕೆಲವು ಸದಸ್ಯರು ಪಕ್ಷದ ಪ್ರಮುಖ ನಿಲುವನ್ನು ವಿರೋಧಿಸುವ ಕಾರ್ಯವನ್ನು ಮುಂದುವರಿಸಿದ್ದಾರೆ. ಅತಿ ಹೆಚ್ಚಿನ ನಿಷ್ಠೆ ಮತ್ತು ಗಟ್ಟಿತನ ಇಂದಿನ ಅವಶ್ಯಕತೆಯಾಗಿರುವಾಗ ಇಂತಹ ಚಟುವಟಿಕೆಗಳು ನಮ್ಮ ಸದಸ್ಯರ ಹುಮ್ಮಸ್ಸಿಗೆ ಧಕ್ಕೆಯುಂಟುಮಾಡುತ್ತವೆ, ತೊಯ್ದಾಟವನ್ನು ಹೆಚ್ಚಿಸುತ್ತವೆ. ವಿರೋಧಿಗಳು ಬಹುಶಃ ಪಕ್ಷವನ್ನು ಸುಸ್ತುಮಾಡಿ ಪಕ್ಷದ ಸಂಸ್ಥೆಗಳನ್ನು ಸ್ವಾಧೀನ ಪಡಿಸಿಕೊಳ್ಳುವ ಹುನ್ನಾರದಲ್ಲಿದ್ದಾರೆ. ಇದು ಪಕ್ಷದ ಕೆಲಸಕ್ಕೆ ಅಡ್ಡಿಯುಂಟುಮಾಡಿ ಕ್ರಾಂತಿಯನ್ನು ಬುಡಮೇಲು ಮಾಡುವ ಸನ್ನಾಹ. ನಮ್ಮ ಕೆಲಸಗಳು ತುರ್ತಾಗಿ ಸಾಫಲ್ಯ ನೀಡುವಂತಾಗಬೇಕಾದ ಪ್ರಶಸ್ತ ಸಮಯ ಇದು, ಕ್ರಾಂತಿಯ ಭವಿಷ್ಯವು ಅದರ ಮೇಲೆ ನಿಂತಿದೆ."

ನಿರ್ಣಯದ ಪರವಾಗಿದ್ದ ಬಹುಸಂಖ್ಯಾತರು ಕೇಂದ್ರ ಸಮಿತಿಯ ನಿರ್ಣಯವನ್ನು ಪಕ್ಷವು ಅಂಗೀಕರಿಸುತ್ತದೆಂಬ ಭರವಸೆ ಹೊಂದಿದ್ದರು. ಅವರು ಬೇರೊಂದು ಹೇಳಿಕೆಯನ್ನು ನಿರ್ಣಯಕ್ಕೆ ಲಗತ್ತಿಸಿದರು : "ಪಕ್ಷದ ಸಂಘಟನೆಯನ್ನು ಅಸಂಘಟಿತಗೊಳಿಸಲು ಯಾರಾದರೂ ಇಚ್ಛಿಸಿದರೆ ಅಂತಹ ಪ್ರತಿನಿಧಿಗಳು ತಮ್ಮ ವಿಘಟನಾ ಕಾರ್ಯವನ್ನು ಪಕ್ಷದ ಹೊರಗೆ ನಿಂತು ಮಾಡಬೇಕೆಂದು ನಿರ್ಧಾರಕವಾಗಿ ಅವರಿಗೆ ತಿಳಿಸಬೇಕು. ಬೇರೆ ದಾರಿಯೇ ಇಲ್ಲ."

ವಿರೋಧಿಗಳಿಗೆ ಈಗ ಬೇರಿನ್ನಾವ ದಾರಿಯೂ ಉಳಿದಿರಲಿಲ್ಲ. ಆದ್ದರಿಂದ ಈ ನಿರ್ಣಯಕ್ಕೆ ಅವರ ಉತ್ತರವು ಕೇಂದ್ರ ಸಮಿತಿಗೆ ರಾಜಿನಾಮೆ ನೀಡುವುದೊಂದೇ ಆಯಿತು. ಕೇಂದ್ರ ಸಮಿತಿಯಿಂದ ಹಿಂದೆ ಸರಿಯುವ ಹೇಳಿಕೆಗಳಿಗೆ ತಮ್ಮ ಸಹಿಗಳನ್ನು ಹಾಕುತ್ತಾ ಕಮೆನೋವ್ ಮತ್ತು ಝಿನೊವೀವ್ ಮಾಡಿದ್ದೇನೆಂದರೆ ಕ್ರಾಂತಿಗೆ ಮುನ್ನ ಏನು ಅಡಚಣೆಗಳನ್ನು ಉಂಟುಮಾಡುತ್ತಿದ್ದರೋ ಅದನ್ನು ಕ್ರಾಂತಿಯ ನಂತರವೂ ಮುಂದುವರಿಸಿದಂತಾಯಿತು. ಮೊದಲು ಅವರು ವರ್ಗ ಶತ್ರುವಿನ ವಿರುದ್ಧ ಸಶಸ್ತ್ರ ಬಂಡಾಯವನ್ನು ಸಾರ್ವಜನಿಕವಾಗಿ ವಿರೋಧಿಸಿದ್ದರು. ಅಕ್ಟೋಬರ್ ೧೦ರಂದು ಕೇಂದ್ರ ಸಮಿತಿಯು ಸಶಸ್ತ್ರ ಬಂಡಾಯವನ್ನು ಕಾರ್ಯಗತಗೊಳಿಸಬೇಕೆಂದು ನಿರ್ಣಯಿಸಿದಾಗ ಅವರಿಬ್ಬರೂ ಅದನ್ನು ವಿರೋಧಿಸಿದ್ದರು, ಈಗ ಅದೇ ವಿರೋಧವನ್ನು ಕ್ರಾಂತಿಯ ನಂತರವೂ ವ್ಯಕ್ತಪಡಿಸಿದ್ದರು.

ಅಕ್ಟೋಬರ್ ಕ್ರಾಂತಿಯ ದಿನಗಳಲ್ಲಿ ಲೆನಿನ್ ಜನಸಮುದಾಯವನ್ನು ವಿಜಯದ ಪಥದಲ್ಲಿ ಕೊಂಡೊಯ್ಯಲು ಬಹಳ ಬಿಗಿಯಾದ ಪಟ್ಟುಗಳನ್ನು ಹಾಕಬೇಕಾಗಿ ಬಂದಿತ್ತು. ಕ್ರಾಂತಿಯ ವಿಜಯ ಮತ್ತು ಪಕ್ಷದ ಐಕ್ಯತೆ ನಿಚ್ಚಳವಾಗಿ ಅವನ ಮೊದಲ ಹಿತಾಸಕ್ತಿಯಾಗಿತ್ತು. ಆದ್ದರಿಂದ ಸಂಶಯಗ್ರಸ್ತರನ್ನು ಮತ್ತು ಪಕ್ಷದ ವಿಘಟಕರನ್ನು ಅವನು ಅತ್ಯಂತ ತೀವ್ರಗಾಮಿ ಕ್ರಿಯೆಗಳಿಂದ ಎದುರಿಸುತ್ತಿದ್ದ.

* * *

ಇದಿಷ್ಟು ಬುಬ್ನೋವ್‌ನ ಮಾತು. ಅದನ್ನು ನಮ್ಮ ದೇಶದ ಇಂದಿನ ರಾಜಕೀಯ ಸಂದರ್ಭದಲ್ಲಿ ಪ್ರಗತಿಪರರು, ವಿಶೇಷವಾಗಿ ಕಮ್ಯುನಿಸ್ಟರು, ಅನ್ವಯಿಸಿಕೊಂಡು ಸೂಕ್ತವಾದ ಹೆಜ್ಜೆಗಳನ್ನಿರಿಸಬೇಕಾಗಿದೆ. ಇಂದಿನ ವಾತಾವರಣವನ್ನು, ಪ್ರತಿಗಾಮಿಗಳ ಅಬ್ಬರವನ್ನು, ವಿವರಿಸಿ ಹೇಳುವ ಅಗತ್ಯವಿಲ್ಲ. ಅದಕ್ಕೆ ಐಕ್ಯ ಪ್ರತಿರೋಧವು ಅನಿವಾರ್ಯವೆಂದು ಮಾತಿನಲ್ಲಿ ಎಲ್ಲ ಪ್ರಗತಿಪರರು ಮತ್ತು ಕಮ್ಯುನಿಸ್ಟರು ಹೇಳುತ್ತಲೇ ಇರುತ್ತಾರೆ. ಆದರೆ ಕ್ರಿಯೆಯ ಪ್ರಶ್ನೆ ಬಂದಾಗ ತಮ್ಮದೇ ಮಾತುಗಳು ಅವರಿಗೆ ನೆನಪಿಗೆ ಬರುವುದಿಲ್ಲ. ಯಾವ "ತ್ರಿಮತಸ್ಥ ಆಚಾರ್ಯರೂ" ಪಾಲಿಸದ ಮಡಿವಂತಿಕೆ ಪ್ರಗತಿಪರರಲ್ಲಿ ಮತ್ತು ಕಮ್ಯುನಿಸ್ಟರಲ್ಲಿ ಗಾಢವಾದ ಆಚರಣೆಗೆ ಬಂದಿದೆ. ಇದು ಸರ್ವಥಾ ಆರೋಗ್ಯಕರವಲ್ಲ. ಇಪ್ಪತ್ತು ಪ್ರಗತಿಪರ ಸಂಘಟನೆಗಳು ಮತ್ತು ಹತ್ತು ಕಮ್ಯುನಿಸ್ಟ್ ಪಕ್ಷಗಳು ಸೈದ್ಧಾಂತಿಕ ನಿಷ್ಕರ್ಷೆಗಳಿಗಾಗಿ ದೀರ್ಘ ವಾಗ್ವಾದ ನಡೆಸುತ್ತಿರುವುದನ್ನು ಕಂಡು ಪ್ರತಿಗಾಮಿ ಪಕ್ಷಗಳು ಮತ್ತು ಅವುಗಳ ಸರ್ಕಾರಗಳು ಮುಸಿನಗುತ್ತಾ ಜನತೆಯ ಸ್ವಾಸ್ಥ್ಯವನ್ನು ಹಾಳುಮಾಡುತ್ತಿರುತ್ತವೆ. ಲೆನಿನ್ನರ ನಾಯಕತ್ವದಲ್ಲಿ ಜರುಗಿದ ೧೯೧೭ರ ಸಮಾಜವಾದಿ ಕ್ರಾಂತಿಗೆ ಈಗ ನೂರು ವರ್ಷ. ಈಗಲಾದರೂ ಪ್ರಗತಿಪರರು ಲೆನಿನ್ನರ ಮಾರ್ಗವನ್ನು ತಮ್ಮದಾಗಿಸಿಕೊಂಡಾರೆಂದು ಆಶಿಸಬೇಕಾಗಿದೆ. ಪ್ರಾಯೋಗಿಕವಾಗಿ ಐಕ್ಯಗೊಂಡು ಹೋರಾಡುವುದು ನಮ್ಮ ಜನತೆಗೆ, ಅಕ್ಟೋಬರ್ ಸಮಾಜವಾದಿ ಕ್ರಾಂತಿಗೆ ಮತ್ತು ಲೆನಿನ್ನರಿಗೆ ನಾವು ನೀಡಬಹುದಾದ ಗೌರವ ಮತ್ತು ಕಾಣಿಕೆ.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫




# ಶುಕ್ರ ಓಟದ ಪ್ರಾತ್ಯಕ್ಷಿಕೆ

**ಈ** ತಿಂಗಳ ಮುಂಜಾವುಗಳಲ್ಲಿ ಬಹಳ ಆಕರ್ಷಣೀಯ ಘಟನೆಗಳು ನಿಮ್ಮ ಕ್ಯಾಮೆರಾಗಾಗಿ ಕಾದಿವೆ. ಪ್ರಕಾಶಮಾನವಾಗಿ ಬೆಳಗುವ ಶುಕ್ರ; ಅದರ ಸಮೀಪದಲ್ಲಿಯೇ ಗುರುಗ್ರಹ. ಇವೆರಡೂ ದಿನದಿನಕ್ಕೆ ಸ್ಥಾನ ಬದಲಿಸುವುದನ್ನು ನೋಡಲು ಇದು ಸದವಕಾಶ. ಒಂದನ್ನೊಂದು ಸಮೀಪಿಸುವ ಈ ಎರಡು ಚುಕ್ಕೆಗಳು ೧೩ರ ಮುಂಜಾವಿನಲ್ಲಿ ಅರ್ಧ ಡಿಗ್ರಿಯಷ್ಟು ಸಮೀಪವಾಗಿ ಪುನಃ ದೂರ ಸರಿಯತೊಡಗುವುವು. ಇವುಗಳಿಗಿಂತ ಸ್ವಲ್ಪ ದೂರದಲ್ಲಿ ಕಾಣುವ ಕೆಂಪು ಚುಕ್ಕೆಯೇ ಮಂಗಳ ಗ್ರಹ. ಹೀಗೆ ಮುಂಜಾವಿನಲ್ಲಿ ಪೂರ್ವದಿಕ್ಕಿನಲ್ಲಿ ಮೂರು ಗ್ರಹಗಳನ್ನು ನೋಡಬಹುದು. ತಿಂಗಳ ಮೊದಲ ದಿನದ ಮುಂಜಾವಿನಲ್ಲಿ ಶುಕ್ರದ ಪಕ್ಕ ಕಾಣುವ ಚುಕ್ಕೆ ಚಿತ್ರಾ ನಕ್ಷತ್ರ. ದಿನಕಳೆದಂತೆ ಇವೆರಡೂ ದೂರದೂರವಾಗುತ್ತವೆ. ಶುಕ್ರ ಕೆಳಗೆ ಸರಿದಂತೆ, ಚಿತ್ರಾ ಮೇಲೆ ಸರಿದಂತೆ ಕಾಣುತ್ತದೆ. ಚಿತ್ರಾ ನೀಲಿ ನಕ್ಷತ್ರ; ಆದರೆ ಇದು ದಿಗಂತಕ್ಕೆ ಸಮೀಪ ವಾಗಿ ಇರುವುದರಿಂದ ಕೆಂಪಗೆ ಕಾಣುವುದು. ಈ ಚುಕ್ಕೆಯನ್ನೇ ಪ್ರತಿ ಮುಂಜಾವಿನಲ್ಲಿ ಗಮನಿಸಿ. ಕೆಂಪು ಮಂಗಳ ಗ್ರಹವನ್ನು ಅದು ೨೭ರಂದು ಸಮೀಪಿಸಿದಾಗ ಬಣ್ಣದ ವ್ಯತ್ಯಾಸ ಸ್ಪಷ್ಟವಾಗಿ ಕಾಣುತ್ತದೆ.

ಸಂಜೆಯ ಆಕಾಶದಲ್ಲಿ ಪಶ್ಚಿಮದಲ್ಲಿ ಕಾಣುವ ಗ್ರಹ ಶನಿ. ಇದು ವೃಶ್ಚಿಕವನ್ನು ದಾಟಿದೆ; ಧನುವನ್ನು ಪ್ರವೇಶಿಸಿಲ್ಲ. ಉರಗಧರ (ಒಫಿಯೂಕಸ್) ಎಂಬ ನಕ್ಷತ್ರ ಪುಂಜದ ಎಲ್ಲೆಯೊಳಗಿದೆ. ತಿಂಗಳ ಮೊದಲಲ್ಲಿ ಪಶ್ಚಿಮದ ಅಂಚಿನಲ್ಲಿ ಬುಧಗ್ರಹ ಕಾಣುತ್ತದೆ. ಕ್ರಮೇಣ ಮೇಲೇರಿದಂತೆ ಕಾಣುವ ಬುಧ, ತುಲಾದಿಂದ ವೃಶ್ಚಿಕವನ್ನು ಹಾಯುತ್ತದೆ. ತಿಂಗಳ ಕೊನೆಗೆ ೨೮ರಂದು ಶನಿಗ್ರಹಕ್ಕೆ ಸಮೀಪವಾಗುವುದನ್ನು ಗಮನಿಸಬಹುದು. ೨೪ರಂದು ಗರಿಷ್ಠ ಕೋನೋನ್ನತಿ. ಇದನ್ನು ನೋಡಲು ಶುಭ್ರ ಆಕಾಶ ಅತ್ಯಗತ್ಯ.




ಕಳೆದ ತಿಂಗಳ ಮಳೆಯ ನೆನಪಿದೆಯಲ್ಲವೇ? ಇದು ಅಕ್ಟೋಬರ್ ಮಳೆ. ಇದನ್ನು ರೈತಾಪಿ ಜನರು "ಚಿತ್ರಾ" ಮಳೆ ಎಂದು ಕರೆಯುತ್ತಾರೆ. ಕುರುಡು ಚಿತ್ತೆ ಎಂದು ಗಾದೆಯೂ ಇದೆ. ಅಂದರೆ ಈ ಮಳೆ ಕುರುಡನಂತೆ ಎಲ್ಲೆಲ್ಲೋ ಮಳೆ ಸುರಿಸುತ್ತದೆ ಎಂಬರ್ಥ. ಆದರೆ ಈ ಸಲದ ಮಳೆ ಕುರುಡಾಗದೇ ಎಲ್ಲೆಲ್ಲೂ ಸುರಿದು ದಾಖಲೆ ನಿರ್ಮಿಸಿತು. ನವೆಂಬರ್‌ನ ಮಳೆ ನಕ್ಷತ್ರ ಅನೂರಾಧಾ; ಸೋಹೋ ಕಳಿಸುವ ಚಿತ್ರಗಳನ್ನು ನೋಡಿದರೆ ಸೂರ್ಯನ ಪಕ್ಕದಲ್ಲಿ ಈ ನಕ್ಷತ್ರವನ್ನು ಗುರುತಿಸಬಹುದು. "ಅನೂರಾಧೆ ಬಿದ್ರೆ ನಮ್ಮ ಬೆಳೆ ನಮಗೆ" ಎಂಬುದು ಗಾದೆ. ಇದಕ್ಕೆ ಮಳೆ ನಕ್ಷತ್ರ ಎಂದೇಕೆ ಹೆಸರು? ಅದು ಸೂರ್ಯನ ಸ್ಥಾನವನ್ನು ಗುರುತಿಸುವ ಪದ್ಧತಿ. ಬಹಳ ಹಳೆಯದು; ಅಲೆಕ್ಸಾಂಡರ್ ಜೊತೆಗೆ ಬಂದ ಹನ್ನೆರಡು ರಾಶಿಗಳಿಗಿಂತ ಮುಂಚೆ ಚಾಲ್ತಿಯಲ್ಲಿದ್ದ ಪದ್ಧತಿ. ರೈತರು ಅದಕ್ಕೆ "ಮೈಲಿಗೆ" ಮಾಡಿಸದೇ ಹಾಗೇ ಉಳಿಸಿ ಕೊಂಡಿದ್ದಾರೆ. ಆದರೆ ಇಂದಿನ ಕೆಲವು ಜ್ಯೋತಿಷಿಗಳು ಇದನ್ನು "ಮಹಾ ನಕ್ಷತ್ರ" ಎಂದು ಕರೆಯತೊಡಗಿರುವುದು ತಪ್ಪು ಕಲ್ಪನೆಗೆ ದಾರಿ ಮಾಡಿ ಕೊಟ್ಟಿದೆ.

ನವೆಂಬರ್ ಎಂದರೆ ಲಿಯೋನಿಡ್ಸ್ ಉಲ್ಕಾವೃಷ್ಟಿಯ ಸಮಯ. ೧೭, ೧೮, ೧೯ರ ಅವಧಿಯಲ್ಲಿ ಮುಂಜಾವಿನಲ್ಲಿ ಸಿಂಹರಾಶಿಯಿಂದ ಹೊರಟಂತೆ ಕಾಣುವ ಉಲ್ಕೆಗಳನ್ನು ನೋಡಬಹುದು. ಅಮಾವಾಸ್ಯೆಯ ಕಾರಣ ಚಂದ್ರನ ಪ್ರಕಾಶದ ಅಡಚಣೆ ಇಲ್ಲ. ಗಂಟೆಗೆ ೨೦ ಉಲ್ಕೆಗಳು ಬೀಳುವುದೆಂಬುದು ಅಂದಾಜು. ೩೩ ವರ್ಷಗಳಿಗೊಮ್ಮೆ ಬರುವ ಟೆಂಪಲ್ – ಟಟಲ್ ಎಂಬ ಧೂಮಕೇತುವಿನ ತುಣುಕುಗಳು ಇವು.

ತಿಂಗಳ ಮಧ್ಯಕ್ಕೆ ಮೋಡಗಳು ಹಿಂದೆ ಸರಿದು ನೀಲಿ ಆಕಾಶವನ್ನು ಒದಗಿಸಲಿವೆ. ಸಂಜೆಯ ಆಕಾಶದಲ್ಲಿ ಕಾಣುವ ಆಕಾಶಗಂಗೆಯ ಭಾಗವನ್ನು ಮರೆಯದೇ ವೀಕ್ಷಿಸಿ. ನೈಋತ್ಯ ದಿಕ್ಕಿನಲ್ಲಿ ವೃಶ್ಚಿಕ, ಧನುರಾಶಿಗಳು ಕಾಣುವ ಭಾಗದಲ್ಲಿಗೆ ಆಕಾಶಗಂಗೆಯ ಕೇಂದ್ರ ಭಾಗ ಶನಿಗ್ರಹವೂ ಅಲ್ಲಿಯೇ ಇರುವುದನ್ನು ಬಳಸಿ, ಅದರ ಆಸುಪಾಸನ್ನು ದುರ್ಬೀನು, ದೂರದರ್ಶಕಗಳಿಂದ ವೀಕ್ಷಿಸಿದರೆ ನೆಬ್ಯುಲಾಗಳೂ, ನಕ್ಷತ್ರಗುಚ್ಛಗಳೂ ಕಾಣುವುವು. ಈ ಗೆಲಾಕ್ಸಿಯ ಸುರುಳಿಯಂತಹ ಒಂದು ತೋಳು ಉತ್ತರಕ್ಕೆ ಚಾಚಿದೆ. ಇದು ಗರುಡ (ಅಕ್ವಿಲಾ) ಮತ್ತು ವೀಣಾ (ಲೈರಾ) ಪುಂಜಗಳ ನಡುವೆ ಹಾದುಹೋಗಿದೆ. ಶ್ರವಣ ಮತ್ತು ಅಭಿಜಿತ್ ನಕ್ಷತ್ರಗಳ ನಡುವೆ ದುರ್ಬೀನಿನಿಂದ ವೀಕ್ಷಿಸಿದರೆ ತೆಳ್ಳನೆಯ ಮೋಡದಂತಹ ರಚನೆ ಕಾಣುವುದು.

**ಖಗೋಳ ದಿನಚರಿ**

೧ ಶುಕ್ರ–ಚಿತ್ರಾ ಜೋಡಿ (ಮುಂಜಾವು)
೪ ಹುಣ್ಣಿಮೆ ೧೦:೫೭ಕ್ಕೆ
೬ ಭೂಮಿ–ಚಂದ್ರ ನಡುವೆ ಕನಿಷ್ಠ ದೂರ
೧೦ ಚಾಂದ್ರಮಾಸದ ಕೊನೆಯ ಪಾದ
೧೨ ಬುಧ–ಜ್ಯೇಷ್ಠಾ ಜೋಡಿ (ಸಂಜೆ)*
೧೩ ಗುರು–ಶುಕ್ರ ಜೋಡಿ (ಮುಂಜಾವು)*
೧೫ ಮಂಗಳ – ಚಂದ್ರ ಜೋಡಿ (ಮುಂಜಾವು)*
೧೬ ಗುರು – ಶುಕ್ರ – ಚಂದ್ರ ಪುಟ್ಟ ಗುಂಪು (ಮುಂಜಾವು)*
೧೮ ಲಿಯೋನಿಡ್ಸ್ ಉಲ್ಕಾವೃಷ್ಟಿ ಗರಿಷ್ಠ*
ಅಮಾವಾಸ್ಯೆ ೧೭:೧೨ಕ್ಕೆ
೨೦ ಬುಧ–ಚಂದ್ರ ಜೋಡಿ (ಸಂಜೆ)*
೨೧ ಶನಿ–ಚಂದ್ರ ಜೋಡಿ (ಸಂಜೆ)
೨೪ ಬುಧ ಗ್ರಹದ ಗರಿಷ್ಠ ಕೋನೋನ್ನತಿ
೨೬ ಚಾಂದ್ರಮಾಸದ ಮೊದಲ ಪಾದ
೨೭ ಮಂಗಳ–ಚಿತ್ರಾ ಜೋಡಿ (ಮುಂಜಾವು)
೨೮ ಶನಿ–ಬುಧ ಜೋಡಿ (ಸಂಜೆ)*
(*ಛಾಯಾಗ್ರಹಣಕ್ಕೆ ಸದವಕಾಶ)

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ
ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧



೧೬ರ ಮುಂಜಾವು ಚಿತ್ರಾ
ಮಂಗಳ–ಗುರು–ಶುಕ್ರ–ಚಂದ್ರ

# ಅಲೆಕ್ಸಾಂಡ್ರಾ ಕೊಲ್ಲಂತಾಯ್

ಅಲೆಕ್ಸಾಂಡ್ರಾ ಕೊಲ್ಲಂತಾಯ್ ರಷ್ಯಾದ ಕ್ರಾಂತಿಕಾರಿ ಮಹಿಳೆಯರಲ್ಲಿ ಅಗ್ರಗಣ್ಯಳು. ಲೆನಿನ್ ನೇತೃತ್ವದಲ್ಲಿ ರಷ್ಯಾದಲ್ಲಿ ಜರುಗಿದ ಸಮಾಜವಾದಿ ಕ್ರಾಂತಿಯ ನಂತರ ಸಮಾಜವಾದಿ ಸಮಾಜದ ನಿರ್ಮಾಣಕಾರ್ಯದಲ್ಲಿ ಶ್ರಮಿಸಿದ ಮತ್ತು ಮಹಿಳೆಯರ ನಡುವೆ ಕ್ರಾಂತಿಯ ಸಂದೇಶವನ್ನು ಬಿತ್ತಿದ ಪ್ರಭಾವಶಾಲಿ ಕಮ್ಯುನಿಸ್ಟ್ ನಾಯಕಿ ಅಲೆಕ್ಸಾಂಡ್ರಾ. ಝಾರ್ ದೊರೆಗಳ ಆಳ್ವಿಕೆಯನ್ನು ಕಿತ್ತೊಗೆದು ಕ್ರಾಂತಿಯ ಮೂಲಕ ಅಧಿಕಾರ ಸ್ಥಾಪಿಸಿದ್ದ ದುಡಿಯುವ ವರ್ಗಕ್ಕೆ ಸೋವಿಯೆತ್ ಒಕ್ಕೂಟದ ಕಮ್ಯುನಿಸ್ಟ್ ಪಕ್ಷ ನೇತೃತ್ವ ನೀಡಿತ್ತು. ಸಾಮಾಜಿಕ ಸ್ಥಿತ್ಯಂತರದಲ್ಲಿ ಹಳೆಯ ವ್ಯವಸ್ಥೆಗೆ ಜೋತುಬಿದ್ದಿದ್ದ ಮಹಿಳಾ ಸಮುದಾಯವನ್ನು ಸುಧಾರಿಸಿ ಸಂಕೋಲೆಗಳಿಂದ ಬಿಡುಗಡೆಗೊಳಿಸಿ ಪ್ರಗತಿಯತ್ತ ಕೊಂಡೊಯ್ದವರಲ್ಲಿ ಅಲೆಕ್ಸಾಂಡ್ರಾ ಪ್ರಮುಖರು.



**ಸ**ಮಾಜದ ಶೋಷಿತ ಜನವರ್ಗಗಳು ಸಕ್ರಿಯವಾಗಿ ಭಾಗವಹಿಸದೆ ಯಾವುದೇ ಕ್ರಾಂತಿ ಸಂಭವಿಸಲಾರದು. ೨೦ನೇ ಶತಮಾನದಲ್ಲಿ ಜಗತ್ತನ್ನೇ ತಲ್ಲಣಗೊಳಿಸಿದ ರಷ್ಯಾ ಸಮಾಜವಾದಿ ಕ್ರಾಂತಿ, ವಿಮೋಚನೆಯತ್ತ ದಾಪುಗಾಲಿಡುತ್ತಿದ್ದ ಅಸಂಖ್ಯ ದೇಶಗಳ ಮೇಲೆ ಪ್ರಭಾವ ಬೀರಿತ್ತು. ಸಮಾಜವಾದದ ಹಿನ್ನೆಲೆಯಲ್ಲಿ ಮಹಿಳಾಪರ ಹೋರಾಟಗಳನ್ನು ವಿಸ್ತಾರಗೊಳಿಸಿತು. ಅಂತರರಾಷ್ಟ್ರೀಯ ಮಹಿಳಾ ಚಳವಳಿ ಮತ್ತು ರಷ್ಯಾ ಕ್ರಾಂತಿಯ ಬಗ್ಗೆ ತಿಳಿದವರಿಗೆ ಅಲೆಕ್ಸಾಂಡ್ರಾ ಕೊಲ್ಲಂತಾಯ್ ಚಿರಪರಿಚಿತಳು.

ಅಲೆಕ್ಸಾಂಡ್ರಾ ಕೊಲ್ಲಂತಾಯ್ ರಷ್ಯಾದ ಕ್ರಾಂತಿಕಾರಿ ಮಹಿಳೆಯರಲ್ಲಿ ಅಗ್ರಗಣ್ಯಳು. ಲೆನಿನ್ ನೇತೃತ್ವದಲ್ಲಿ ರಷ್ಯಾದಲ್ಲಿ ಜರುಗಿದ ಸಮಾಜವಾದಿ ಕ್ರಾಂತಿಯ ನಂತರ ಸಮಾಜವಾದಿ ಸಮಾಜದ ನಿರ್ಮಾಣಕಾರ್ಯದಲ್ಲಿ ಶ್ರಮಿಸಿದ ಮತ್ತು ಮಹಿಳೆಯರ ನಡುವೆ ಕ್ರಾಂತಿಯ ಸಂದೇಶವನ್ನು ಬಿತ್ತಿದ ಪ್ರಭಾವಶಾಲಿ ಕಮ್ಯುನಿಸ್ಟ್ ನಾಯಕಿ ಅಲೆಕ್ಸಾಂಡ್ರಾ. ಝಾರ್ ದೊರೆಗಳ ಆಳ್ವಿಕೆಯನ್ನು ಕಿತ್ತೊಗೆದು ಕ್ರಾಂತಿಯ ಮೂಲಕ ಅಧಿಕಾರ ಸ್ಥಾಪಿಸಿದ್ದ ದುಡಿಯುವ ವರ್ಗಕ್ಕೆ ಸೋವಿಯೆತ್ ಒಕ್ಕೂಟದ ಕಮ್ಯುನಿಸ್ಟ್ ಪಕ್ಷ ನೇತೃತ್ವ ನೀಡಿತ್ತು. ಸಾಮಾಜಿಕ ಸ್ಥಿತ್ಯಂತರದಲ್ಲಿ ಹಳೆಯ ವ್ಯವಸ್ಥೆಗೆ ಜೋತುಬಿದ್ದಿದ್ದ ಮಹಿಳಾ ಸಮುದಾಯವನ್ನು ಸುಧಾರಿಸಿ ಅದನ್ನು ಸಂಕೋಲೆಗಳಿಂದ ಬಿಡುಗಡೆಗೊಳಿಸಿ ಪ್ರಗತಿಯತ್ತ ಕೊಂಡೊಯ್ದವರಲ್ಲಿ ಅಲೆಕ್ಸಾಂಡ್ರಾ ಮುಂಚೂಣಿಯಲ್ಲಿ ನಿಲ್ಲುತ್ತಾಳೆ. ಕ್ರಾಂತಿಯ ಮೂಲಕ ಅಧಿಕಾರ ಪಡೆಯುವಷ್ಟೇ ಮಹತ್ವದ ಕೆಲಸ ಕ್ರಾಂತಿಯ ನಂತರದಲ್ಲಿ ದುಡಿಯುವ ಜನರ ಬದುಕನ್ನು ಕಟ್ಟುವುದರೊಂದಿಗೆ ಸಮಾಜವಾದದ ಕನಸುಗಳನ್ನು ನನಸಾಗಿಸುವಂತಹದ್ದು. ಈ ದಿಶೆಯಲ್ಲಿ ಅವಿರತವಾಗಿ ಶ್ರಮಿಸಿದ ಸಹಸ್ರಾರು ಸಂಗಾತಿಗಳಲ್ಲಿ ಅಲೆಕ್ಸಾಂಡ್ರಾ ಕೊಲ್ಲಂತಾಯ್ ಅವಿಸ್ಮರಣೀಯ. ಝಾರ್ ಅಧಿಕಾರಾವಧಿಯಿಂದಲೂ ಕಾಡುತ್ತಿದ್ದ ವೇಶ್ಯಾವಾಟಿಕೆ ಪೆಡಂಭೂತವನ್ನು ಹೊಡೆದೋಡಿಸಿ ಸ್ವಸ್ಥ ಸಮಾಜವನ್ನು ನಿರ್ಮಿಸುವಲ್ಲಿ ಅಲೆಕ್ಸಾಂಡ್ರಾಳ ಕೊಡುಗೆ ಅಪಾರ.

**ಬಾಲ್ಯ ಮತ್ತು ಮಾರ್ಕ್ಸ್‌ವಾದಿ ಚಿಂತನೆಯ ಒಲವು**

ಅಲೆಕ್ಸಾಂಡ್ರಾ ಮಿಖಾಯಿಲೊವ್ನಾ ಡೊಮೊಂಟೋವಿಚ್, ರಷ್ಯಾದ ಪಾರಂಪರಿಕ ನಗರವಾದ ಸಂತ ಪೀಟರ್ಸ್‌ಬರ್ಗ್‌ನಲ್ಲಿ ೧೮೭೨ರ ಮಾರ್ಚ್ ೩೧ರಂದು ಜನಿಸಿದಳು. ಸೇನಾಧಿಕಾರಿಯಾಗಿದ್ದ ತಂದೆ ಉದಾರ ರಾಜಕೀಯ ಚಿಂತನೆಗಳನ್ನು ಹೊಂದಿದ್ದ. ಫಿನ್‌ಲ್ಯಾಂಡ್ ರೈತನ ಮಗಳಾಗಿದ್ದ ಅಲೆಕ್ಸಾಂಡ್ರಾಳ ತಾಯಿ, ಮೊದಲ ವಿವಾಹದಿಂದ ವಿಚ್ಛೇದನ ಪಡೆದು ಡೊಮೊಂಟೋವಿಚ್‌ನನ್ನು ಪ್ರೀತಿಸಿ ಮದುವೆಯಾದಳು. ಸಮಾಜವನ್ನು ಸಂತೃಪ್ತಿಗೊಳಿಸುವುದಕ್ಕಾಗಿಯೇ ಉಸಿರುಗಟ್ಟಿ ಬದುಕು ಸವೆಸಬೇಕಾದ ತಾಯಿ ತಂದೆಯರ ಸಂಕಷ್ಟಗಳು–ಅನಿವಾರ್ಯತೆಗಳು, ವಿಚ್ಛೇದನ–ಮರುವಿವಾಹಗಳಂತಹ ಕೌಟುಂಬಿಕ ತಲ್ಲಣಗಳೊಂದಿಗೆ ಬೆಳೆದ ಅಲೆಕ್ಸಾಂಡ್ರಾ ವಿವಾಹ, ಲೈಂಗಿಕತೆ ಮತ್ತು ಸಂಬಂಧಗಳ ಬಗ್ಗೆ ಸ್ವತಂತ್ರ ಚಿಂತನೆಯನ್ನು ಬೆಳೆಸಿಕೊಂಡಳು.

ಅಲೆಕ್ಸಾಂಡ್ರಾಳ ಕುಟುಂಬ ಆರ್ಥಿಕವಾಗಿ ಸದೃಢವಾಗಿತ್ತು. ಫ್ರೆಂಚ್, ಫಿನ್ನಿಶ್, ಆಂಗ್ಲ ಮತ್ತು ಜರ್ಮನ್ ಭಾಷೆಗಳ ಜ್ಞಾನವನ್ನು ಸಂಪಾದಿಸಿ ಬಹುಭಾಷಾ ಪಂಡಿತೆಯಾದಳು. ತಂದೆ ಚರಿತ್ರೆಯಲ್ಲಿ ಆಸಕ್ತಿ ಮೂಡಿಸಿದರು. ಉತ್ತಮ ವಿದ್ಯಾರ್ಥಿನಿಯಾಗಿ ಉನ್ನತ ಶಿಕ್ಷಣಕ್ಕೆ ಹಾತೊರೆದ ಅಲೆಕ್ಸಾಂಡ್ರಾಗೆ ತಾಯಿಯ ಸಾಂಪ್ರದಾಯಿಕ ಧೋರಣೆ ಅಚ್ಚರಿ ಹುಟ್ಟಿಸಲಿಲ್ಲ. ಮಹಿಳೆಯರಿಗೆ ಹೆಚ್ಚಿನ ಶಿಕ್ಷಣದ ಅಗತ್ಯವಿಲ್ಲವೆಂದ ತಾಯಿ, ವಿಶ್ವವಿದ್ಯಾನಿಲಯಗಳಲ್ಲಿ ಪ್ರತಿಭಾವಂತ ಯುವಜನತೆ "ಅಪಾಯಕಾರಿ ವೈಚಾರಿಕ ಚಿಂತನೆಗಳ ಕೂಪಕ್ಕೆ" ಬೀಳುವರೆಂಬ ಆತಂಕವನ್ನೂ ವ್ಯಕ್ತಪಡಿಸಿದ್ದಳು. ಶಾಲಾ ಶಿಕ್ಷಕಿಯಾಗಲು ಪರೀಕ್ಷೆ ತೆಗೆದುಕೊಳ್ಳಲಷ್ಟೇ ಅನುಮತಿ ನೀಡಬಹುದೆಂದೂ ಇನ್ನು ಪದ್ಧತಿಯಂತೆ ಅಲೆಕ್ಸಾಂಡ್ರಾಳಿಗೆ ವರಾನ್ವೇಷಣೆ ನಡೆಸುವುದಾಗಿ ತಾಯಿ ಕಟ್ಟಾಜ್ಞೆಯಿತ್ತಿದ್ದಳು.

೧೮೯೦–೧೮೯೧ರಲ್ಲಿ ಸೇನಾ ಸಂಸ್ಥೆಯೊಂದರಲ್ಲಿ ಅಲೆಕ್ಸಾಂಡ್ರಾ ತನ್ನ ಭಾವಿ ಪತಿ ವ್ಲಾದಿಮಿರ್ ಕೊಲ್ಲಂತಾಯ್‌ನನ್ನು ಭೇಟಿ ಮಾಡಿದಳು. ಆತ ಬಡವನಾಗಿದ್ದರಿಂದ ಅವಳ ತಾಯಿ ಈ ಸಂಬಂಧವನ್ನು ಒಪ್ಪಲಿಲ್ಲ. ತಾನು ಶಿಕ್ಷಕಿಯಾಗಿ ದುಡಿದು ಜೀವನ ಸಾಗಿಸುವುದಾಗಿ ಅಲೆಕ್ಸಾಂಡ್ರಾ ತಾಯಿಗೆ ಹೇಳಿದಾಗ, ಆಕೆ ಹೀಯಾಳಿಸಿದ್ದಳು. ಅವರಿಬ್ಬರನ್ನು ಪ್ರತ್ಯೇಕಗೊಳಿಸುವ ಸಲುವಾಗಿ ಅಲೆಕ್ಸಾಂಡ್ರಾಳನ್ನು ಪಶ್ಚಿಮ ಯುರೋಪ್ ಪ್ರವಾಸಕ್ಕೆ ಕಳುಹಿಸಲಾಯಿತಾದರೂ ತಾಯಿಯ ಆಸೆ ಈಡೇರಲಿಲ್ಲ. ಪ್ರತಿರೋಧದ ನಡುವೆ ೧೮೯೩ರಲ್ಲಿ ಅವರ ವಿವಾಹವಾಗಿ ೧೮೯೪ರಲ್ಲಿ ಮಿಖಾಯಿಲ್ ಹೆಸರಿನ ಮಗನಿಗೆ ಅಲೆಕ್ಸಾಂಡ್ರಾ ಜನ್ಮವಿತ್ತಳು. ನಂತರ ಅಲೆಕ್ಸಾಂಡ್ರಾ ವೈಚಾರಿಕ ಚಿಂತನೆಗಳ ಮತ್ತು ಮಾರ್ಕ್ಸ್‌ವಾದಿ ಸಾಹಿತ್ಯದತ್ತ ಸಂಪೂರ್ಣ ಗಮನ ಹರಿಸಿದಳು. ಮೊದಮೊದಲು ತನ್ನ ಸಹೋದರಿಯೊಡನೆ ಗ್ರಂಥಾಲಯದಲ್ಲಿ ಸಂತ ಪೀಟರ್ಸ್‌ಬರ್ಗ್ ನಗರದ ಕಾರ್ಮಿಕರಿಗೆ ಭಾನುವಾರದ ಸಾಕ್ಷರತಾ ತರಗತಿಗಳಿಗೆ ನೆರವಾಗುತ್ತಾ ಪಾಠಗಳಲ್ಲಿ ಸಮಾಜವಾದಿ ಚಿಂತನೆಗಳನ್ನೂ ಸೇರಿಸುತ್ತಿದ್ದಳು. ಇದೇ ಉದ್ದೇಶದಿಂದ ರಾಜಕೀಯ ಸೆರೆಯಾಳುಗಳಿಗೆ "ಪೊಲಿಟಿಕಲ್ ರೆಡ್ ಕ್ರಾಸ್" ಎಂಬ ಸಂಸ್ಥೆಯನ್ನು ಹುಟ್ಟುಹಾಕಲಾಗಿತ್ತು. ಅವಳಿಗೆ ಗ್ರಂಥಾಲಯದಲ್ಲಿ ಮಾರ್ಕ್ಸ್‌ವಾದಿ ಚಳವಳಿಗಾರರ ಪರಿಚಯವೂ ಆಯಿತು.

**ಜ್ಯೋತಿ ಎ.**

ಕಾನೂನುಬಾಹಿರ ಕರಪತ್ರಗಳನ್ನು, ಬರಹಗಳನ್ನು ಕ್ರಾಂತಿಕಾರಿಗಳ ನಡುವೆ ಗೌಪ್ಯವಾಗಿ ರವಾನಿಸುವ ಕೆಲಸ ಮಾಡುತ್ತಿದ್ದ ಅಲೆಕ್ಸಾಂಡ್ರಾ ೧೮೯೫ರಲ್ಲಿ ಜರ್ಮನಿಯ ಸಮಾಜವಾದಿ ಚಿಂತಕ ಆಗಸ್ಟ್ ಬೆಬಲ್‌ನ "ಸಮಾಜವಾದದಲ್ಲಿ ಮಹಿಳೆ" ಕೃತಿಯನ್ನೋದಿ ಪ್ರಭಾವಿತಳಾದಳು. ಈ ಬರಹ ಅವಳ ರಾಜಕೀಯ ಮತ್ತು ಹೋರಾಟದ ಜೀವನವನ್ನು ರೂಪಿಸಿತು.

ಸುಮಾರು ೧೮೯೫ರಲ್ಲಿ, ತನ್ನ ವೃತ್ತಿನಿರತ ಇಂಜಿನಿಯರ್ ಪತಿಯೊಂದಿಗೆ ಸಿದ್ಧಉಡುಪು ತಯಾರಿಕಾ ಕೈಗಾರಿಕೆಯೊಂದಕ್ಕೆ ಭೇಟಿಯಿತ್ತಾಗಲೇ ಅಲೆಕ್ಸಾಂಡ್ರಾ ಮೊಟ್ಟಮೊದಲ ಬಾರಿಗೆ ಬಂಡವಾಳಶಾಹಿ ಕೈಗಾರಿಕೆಗಳ ಕರಾಳ ಮುಖ ಕಂಡಳು. ೧೮೯೬ರಲ್ಲಿ ಸಂತ ಪೀಟರ್ಸ್‌ಬರ್ಗ್ ನಗರದ ಕಾರ್ಮಿಕರು ದೊಡ್ಡ ಮಟ್ಟದಲ್ಲಿ ಸಿದ್ಧಉಡುಪು ಕೈಗಾರಿಕಾ ಮುಷ್ಕರ ಹೂಡಿದಾಗ ಅವಳು ಕರಪತ್ರ ಸಿದ್ಧಪಡಿಸಿ, ದೇಣಿಗೆ ಸಂಗ್ರಹಿಸಿ ಹೋರಾಟದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಳು. ಅಲೆಕ್ಸಾಂಡ್ರಾ ನಿರಂತರವಾಗಿ ಇದೇ ಸಂಬಂಧವನ್ನುಳಿಸಿಕೊಂಡು ಬದುಕಿನುದ್ದಕ್ಕೂ ಸಿದ್ಧಉಡುಪು ಕ್ಷೇತ್ರದ ಮಹಿಳಾ ಕಾರ್ಮಿಕರ ಪರವಾಗಿ ಧ್ವನಿಯೆತ್ತಿದಳು. ಸಮಾಜವಾದಿ ಕ್ರಾಂತಿಯಲ್ಲಿ ಶ್ರಮಿಕ ವರ್ಗ ಹೇಗೆ ಮಹತ್ವದ ಪಾತ್ರ ವಹಿಸುವುದೆಂದು ೧೮೯೬ರ ಟೆಕ್ಸ್‌ಟೈಲ್ ಕಾರ್ಮಿಕರ ಮುಷ್ಕರ ಆಕೆಗೆ ಕಲಿಸಿತ್ತು.

**ರಷ್ಯಾದಲ್ಲಿ ಕ್ರಾಂತಿಕಾರಿಯಾಗಿ ಅಲೆಕ್ಸಾಂಡ್ರಾ**

ಬಂಡವಾಳಶಾಹಿ ವ್ಯವಸ್ಥೆಯ ನೆಲೆಯಲ್ಲಿ ಸವೆಸುತ್ತಿದ್ದ ಕೌಟುಂಬಿಕ ಜೀವನಕ್ಕಿಂತ ಸಮಾಜವಾದಿ ಕ್ರಾಂತಿಕಾರಿಯ ಬದುಕು ಅಲೆಕ್ಸಾಂಡ್ರಾಳಿಗೆ ಹೆಚ್ಚು ಆಪ್ತವೆನಿಸಿತು. ವಿವಾಹದ ಬಹುಕಾಲದ ಬಳಿಕ ಅವಳೇ ಹೇಳುವಂತೆ, "ನಾವಿಬ್ಬರೂ ಪರಸ್ಪರ ಪ್ರೀತಿಸುತ್ತಿದ್ದರೂ ಬೇರ್ಪಟ್ಟೆವು, ಕಾರಣ ಎಲ್ಲೋ ಸಿಲುಕಿಕೊಂಡೆನೆಂಬ ಭಾವನೆ ನನ್ನಲ್ಲಿ ಮೂಡಿತ್ತು. ಕೊಲ್ಲಂತಾಯ್‌ನಿಂದ ನಾನು ದೂರಾದೆ, ಏಕೆಂದರೆ ರಷ್ಯಾದಲ್ಲಿ ಕ್ರಾಂತಿಕಾರಿ ಬೆಳವಣಿಗೆಗಳು ತೀವ್ರಗೊಂಡಿದ್ದವು." ಅವಳು ಪುಟ್ಟ ಮಗನನ್ನು ಪೋಷಕರ ಮಡಿಲಿಗೊಪ್ಪಿಸಿ ಅರ್ಥಶಾಸ್ತ್ರದ ಅಧ್ಯಯನಕ್ಕಾಗಿ ೧೮೯೮ರಲ್ಲಿ ಸ್ವಿಟ್ಜರ್‌ಲ್ಯಾಂಡ್‌ನ ಜ಼ುರಿಚ್‌ಗೆ ತೆರಳಿದಳು. ದುಡಿಯುವ ಜನರ ಹೋರಾಟಗಳ ಕುರಿತ ಜ್ಞಾನಾರ್ಜನೆಯ ಸಮಯದಲ್ಲಿ ಮಾರ್ಕ್ಸ್‌ವಾದಿ ಚಿಂತನೆಗಳಿಂದ ಇನ್ನಷ್ಟು ಪ್ರಭಾವಿತಳಾಗಿ ಇಂಗ್ಲೆಂಡ್‌ನಲ್ಲಿ ಬ್ರಿಟಿಷ್ ಲೇಬರ್ ಪಕ್ಷದ ನಾಯಕರನ್ನು ಭೇಟಿ ಮಾಡಿದಳು. ೧೮೯೯ರಲ್ಲಿ ರಷ್ಯಾಗೆ ವಾಪಸ್ಸಾದ ಅಲೆಕ್ಸಾಂಡ್ರಾ, ಲೆನಿನ್‌ರನ್ನು ಕಂಡು ರಷ್ಯಾದ ಸೋಷಿಯಲ್ ಡೆಮಾಕ್ರಟಿಕ್ ಲೇಬರ್ ಪಾರ್ಟಿಯ ಸದಸ್ಯಳಾದಳು. ಆಗ ಅವಳ ವಯಸ್ಸು ೨೭. ೧೯೦೩ರ ಅಧಿವೇಶನದಲ್ಲಿ ಪಕ್ಷ ಬೋಲ್ಶೆವಿಕ್ಸ್ ಮತ್ತು ಮೆನ್ಶೆವಿಕ್ಸ್ ಎಂದು ಇಬ್ಭಾಗವಾದಾಗ ಅಲೆಕ್ಸಾಂಡ್ರಾ ಸ್ಥಿರವಾದ ನಿಲುವನ್ನು ಹೊಂದದೆ ಒಮ್ಮೆ ತಟಸ್ಥಳಾಗಿಯೂ ಮತ್ತೊಮ್ಮೆ ಮೆನ್ಶೆವಿಕ್ಸ್ ಮತ್ತು ಅಂತಿಮವಾಗಿ ಬೋಲ್ಶೆವಿಕ್ಸ್ ಪಕ್ಷದ ಕಾರ್ಯಕರ್ತೆಯಾದಳು. ದುಡಿಯುವ ಮಹಿಳೆಯರನ್ನು ಸಂಘಟಿಸಲು ಹಾಗೂ ಸಮಾಜವಾದಿ ಚಿಂತನೆಯ ಹಿನ್ನೆಲೆಯಲ್ಲಿ ಮಹಿಳೆಯರ ಹಕ್ಕುಗಳಿಗಾಗಿ ಅಲೆಕ್ಸಾಂಡ್ರಾ ರಾಜಿರಹಿತವಾಗಿ ಶ್ರಮಿಸಿದಳು.



## ಅಭಿನಂದನೆ...

ಚಿತ್ರದುರ್ಗದ ಶ್ರೀ ಮುರುಘಾಮಠದವರು ಕೊಡಮಾಡುವ ೨೦೧೬ನೇ ಸಾಲಿನ 'ಬಸವಶ್ರೀ' ಪ್ರಶಸ್ತಿಯು 'ಹೊಸತು' ಲೇಖಕ ಬಳಗದ ಶ್ರೀ ಪಿ. ಸಾಯಿನಾಥ್ ಅವರಿಗೆ ಲಭಿಸಿದೆ. ಲೇಖಕರಿಗೆ 'ಹೊಸತು' ಹಾಗೂ 'ನವಕರ್ನಾಟಕ'ದ ಅಭಿನಂದನೆಗಳು.

೧೯೦೫ರ ರಷ್ಯಾ ಪ್ರಥಮ ಕ್ರಾಂತಿಯಲ್ಲಿ "ಬ್ಲಡಿ ಸಂಡೆ" ಎಂದೇ ಹೆಸರಾಗಿರುವ, ಸಹಸ್ರಾರು ಕಾರ್ಮಿಕರು ಬಲಿಯಾದ ದಂಗೆಯಲ್ಲಿ ಅಲೆಕ್ಸಾಂಡ್ರಾ ಭಾಗವಹಿಸಿದ್ದಳು. ಫಿನ್‌ಲ್ಯಾಂಡ್ ಕುರಿತ ಅವಳ ಎರಡು ಲೇಖನಗಳು ೧೯೦೦ರಲ್ಲೇ ಪ್ರಕಟಗೊಂಡಿದ್ದು, ಜ಼ಾರ್‌ಗಳ ದಬ್ಬಾಳಿಕೆಯ ವಿರುದ್ಧ ಸಿಡಿದೇಳಲು ಫಿನ್‌ಲ್ಯಾಂಡಿನ ಜನತೆಯನ್ನು ಪ್ರೇರೇಪಿಸುವ "ಫಿನ್‌ಲ್ಯಾಂಡ್ ಮತ್ತು ಸಮಾಜವಾದ" ಕೃತಿಯನ್ನು ರಚಿಸಿದ್ದಕ್ಕಾಗಿ ಅವಳ ಬಂಧನಕ್ಕೆ ಆದೇಶಿಸಲಾಯಿತು. ೧೯೦೮ರಲ್ಲಿ ಗಡೀಪಾರಿಗೆ ಗುರಿಯಾಗಿ ಜರ್ಮನಿಗೆ ತೆರಳಿದ ಅಲೆಕ್ಸಾಂಡ್ರಾ ಕಮ್ಯುನಿಸ್ಟ್ ನಾಯಕಿ ರೋಸಾ ಲುಕ್ಸೆಮ್‌ಬರ್ಗ್‌ಳ ಪರಿಚಯ ಪಡೆದುಕೊಂಡಳು. ೧೯೧೧ರಲ್ಲಿ ಇಟಲಿಯಲ್ಲಿ ಮ್ಯಾಕ್ಸಿಮ್ ಗೋರ್ಕಿ ಹಮ್ಮಿಕೊಂಡಿದ್ದ ಸಮಾಜವಾದಿ ಶಾಲೆಯಲ್ಲಿ ಪಾಠ ಹೇಳಿದಳು.

**ಅಂತರರಾಷ್ಟ್ರೀಯ ಸಮಾಜವಾದಿ ಚಳವಳಿ**

ಇಂಗ್ಲೆಂಡ್, ಫ್ರಾನ್ಸ್‌ಗಳಿಗೂ ಭೇಟಿಯಿತ್ತ ಅಲೆಕ್ಸಾಂಡ್ರಾ ೧೯೧೪ರಲ್ಲಿ ಪ್ರಥಮ ಜಾಗತಿಕ ಮಹಾಯುದ್ಧ ಆರಂಭಗೊಳ್ಳುವ ಮುನ್ನ ಜರ್ಮನಿ, ಆಸ್ಟ್ರಿಯಾಗಳಲ್ಲಿ ಯುದ್ಧವಿರೋಧಿ ಪ್ರಚಾರ ಕೈಗೊಂಡಾಗ ಸೆರೆಮನೆವಾಸ ಅನುಭವಿಸಬೇಕಾಯಿತು. ಜರ್ಮನಿಯ ಸಮಾಜವಾದಿ ಪಕ್ಷ ಯುದ್ಧವನ್ನು ಬೆಂಬಲಿಸಿದ್ದರಿಂದ ಅವಳಿಗಲ್ಲಿ ಉಸಿರುಗಟ್ಟಿದಂತಾಗಿ ಸ್ವೀಡನ್‌ಗೆ ತೆರಳಿದಳು. ಯುದ್ಧದ ವಿಚಾರವಾಗಿ ಜಗತ್ತಿನ ಸಮಾಜವಾದಿ ಚಳವಳಿಯಲ್ಲಿ ಬಿರುಕುಂಟಾಗಿ ಜರ್ಮನಿ, ಆಸ್ಟ್ರಿಯ, ಫ್ರಾನ್ಸ್, ಇಂಗ್ಲೆಂಡ್ ದೇಶಗಳ ಸಮಾಜವಾದಿಗಳು ಯುದ್ಧದ ಪರವಾಗಿದ್ದರೆ, ರಷ್ಯಾದ ಟ್ರಾಟ್‌ಸ್ಕಿ, ಅಲೆಕ್ಸಾಂಡ್ರಾ ಕೊಲ್ಲಂತಾಯ್ ಹಾಗೂ ಲೆನಿನ್‌ರ ಬೋಲ್ಶೆವಿಕ್ ಪಕ್ಷ, ಜರ್ಮನಿಯ ಕ್ಲಾರಾ ಜ಼ೆಟ್ಕಿನ್ ಮತ್ತು ರೋಸಾ ಲುಕ್ಸೆಮ್‌ಬರ್ಗ್‌ನಂತಹ ಕಮ್ಯುನಿಸ್ಟರು ಯುದ್ಧದ ಬೆಂಬಲಿಗರನ್ನು ದುಡಿಯುವ ವರ್ಗದ ವಿರೋಧಿಗಳೆಂದು ಜರಿದು, ದುಡಿಯುವ ಜನತೆಯ ಕ್ರಾಂತಿಗಾಗಿ ಹೋರಾಟ ಮುಂದುವರಿಸಬೇಕೆಂದು ಕರೆಯಿತ್ತರು. ಡೆನ್ಮಾರ್ಕ್‌ನ ಸಮಾಜವಾದಿಗಳೂ ಯುದ್ಧಕ್ಕೆ ಬೆಂಬಲ ನೀಡಿದ್ದರಿಂದ ಅಲೆಕ್ಸಾಂಡ್ರಾ ಸ್ವೀಡನ್‌ನತ್ತ ಪ್ರಯಾಣ ಕೈಗೊಂಡಳು. "ಸೋಷಿಯಲ್ ಡೆಮಾಕ್ರೆಟ್"ಗೆ ಲೆನಿನ್ ಬರೆದಿದ್ದ "ಯುದ್ಧ ಮತ್ತು ರಷ್ಯಾದ ಸೋಷಿಯಲ್ ಡೆಮಾಕ್ರೆಸಿ" ಲೇಖನವನ್ನೋದಿ ಪ್ರೇರಿತಳಾದ ಅವಳು ತನ್ನಲ್ಲಿದ್ದ ಗೊಂದಲಗಳಿಗೆ ಲೆನಿನ್‌ರ ವಿಚಾರಧಾರೆಯೇ ಪರಿಹಾರ ಎಂದು ಖಚಿತಪಡಿಸಿಕೊಂಡು, ಗಡೀಪಾರಾಗಿ ಸ್ವಿಟ್ಜರ್‌ಲ್ಯಾಂಡ್‌ನಲ್ಲಿದ್ದ ಲೆನಿನ್‌ರಿಗೆ ಅಕ್ಟೋಬರ್ ೧೯೧೪ರಲ್ಲಿ ಪತ್ರ ಬರೆದಳು. ಪ್ರತಿಯಾಗಿ ಲೆನಿನ್, ಸ್ಕ್ಯಾಂಡಿನೇವಿಯ ದೇಶಗಳಲ್ಲಿ ಯುದ್ಧವಿರೋಧಿ ಪ್ರಚಾರ ಕೈಗೊಳ್ಳಲು ಅಲೆಕ್ಸಾಂಡ್ರಾಳಿಗೆ ಸೂಚಿಸಿ ಕ್ರಾಂತಿಕಾರಿಯೊಬ್ಬನೊಂದಿಗೆ ಪತ್ರವನ್ನು ರವಾನಿಸಿದರು. ಅಂದಿನಿಂದ ಲೆನಿನ್‌ರ ಮಾರ್ಗದರ್ಶನದಲ್ಲಿ ಅಲೆಕ್ಸಾಂಡ್ರಾ ಕೊಲ್ಲಂತಾಯ್ ಕಾರ್ಯನಿರ್ವಹಿಸಿದಳು.

ಅಲೆಕ್ಸಾಂಡ್ರಾ ಬರೆದ "ಯುದ್ಧ ಮತ್ತು ನಮ್ಮ ಕರ್ತವ್ಯದ ಕುರಿತು" ಲೇಖನ ಮತ್ತವಳ ಪ್ರಚಾರದಿಂದಾಗಿ ಸ್ವೀಡನ್ ಸರ್ಕಾರ ಬೋಲ್ಶೆವಿಕ್ ಕೇಂದ್ರವನ್ನು ಮುಚ್ಚಿ ಅವಳನ್ನು ಸೆರೆಮನೆಗಳಿಗೆಳೆದಾಡಿ ಬಂಧಿಸಿತು. ಪೊಲೀಸರ ಸರ್ಪಗಾವಲಿನಲ್ಲಿ ಕೊಪೆನ್‌ಹೇಗನ್‌ಗೆ ಎಳೆದೊಯ್ಯಲಾಯಿತು. ಬಿಡುಗಡೆಯಾಗಿ ಹೊರಹಾಕಿದಾಗ ಯುದ್ಧವನ್ನು ವಿರೋಧಿಸಿದ ನಾರ್ವೆ ಸಮಾಜವಾದಿಗಳು ಅವಳನ್ನು ತಮ್ಮೊಂದಿಗೆ ಕರೆದೊಯ್ದರು. ೧೯೧೫ರಲ್ಲಿ ಸ್ವಿಟ್ಜರ್‌ಲ್ಯಾಂಡ್‌ನ ಜಿಮ್ಮರ್‌ವಾಲ್ಡ್‌ನಲ್ಲಿ ಸಾಮ್ರಾಜ್ಯಶಾಹಿ ಯುದ್ಧವನ್ನು ವಿರೋಧಿಸಿ ಅಂತರರಾಷ್ಟ್ರೀಯ ಸಮ್ಮೇಳನವನ್ನು ಆಯೋಜಿಸುವಲ್ಲಿ ಮುಖ್ಯ ಪಾತ್ರ ವಹಿಸಿದಳು. ಅವಳು ಬರೆದ ಲೇಖನ "ಯುದ್ಧ ಯಾರಿಗೆ ಅಗತ್ಯ" ಹಲವು ಭಾಷೆಗಳಿಗೆ ತರ್ಜುಮೆಗೊಂಡಿತು. ೧೯೧೫ರಲ್ಲಿ ಎರಡು ಬಾರಿ ಅಮೆರಿಕಾ ಪ್ರವಾಸ ಕೈಗೊಂಡು ಜಿಮ್ಮರ್‌ವಾಲ್ಡ್ ನಿಲುವಿನ ಪ್ರಚಾರ ನಡೆಸಿದಳು.

ಅಲೆಕ್ಸಾಂಡ್ರಾ ಕೊಲ್ಲಂತಾಯ್ ಸಾಮ್ರಾಜ್ಯಶಾಹಿ ಯುದ್ಧವನ್ನು ಪ್ರಖರವಾಗಿ ವಿರೋಧಿಸಿದ್ದಳು. "ಸಾಮ್ರಾಜ್ಯಶಾಹಿಗಳು ಯುದ್ಧಗಳ ಮೂಲಕ ದುಡಿಯುವ ಜನರ

ಐಕ್ಯತೆಯನ್ನು ಒಡೆದು ರಾಷ್ಟ್ರಗಳೆಂಬ ಸಂಕುಚಿತ ಪ್ರದೇಶಗಳ ಹುಟ್ಟಿಗೆ ಕಾರಣರಾಗುತ್ತಾರೆ; ದುಡಿಯುವ ವರ್ಗದ ಸೌಹಾರ್ದತೆ ನಾಶವಾಗಿ ಸಮಾಜವಾದಿ ಜಗತ್ತಿನ ನಮ್ಮ ಕನಸು ನುಚ್ಚುನೂರಾಗುತ್ತದೆ" ಎಂಬುದವಳ ಚಿಂತನೆಯಾಗಿತ್ತು. ಸಾಮ್ರಾಜ್ಯಶಾಹಿ ಯುದ್ಧಗಳ ಹಿಂದಿನ ದುಷ್ಟ ಆರ್ಥಿಕತೆಯನ್ನು ಮತ್ತು ಅದಕ್ಕೆ ಪರ್ಯಾಯ ವ್ಯವಸ್ಥೆಯನ್ನೂ "ಯುದ್ಧ ಯಾರಿಗೆ ಅಗತ್ಯ" ಎಂಬ ಲೇಖನದಲ್ಲವಳು ಸ್ಪಷ್ಟಪಡಿಸುವ ವಿಚಾರಗಳು ಪ್ರಸ್ತುತವಾಗಿವೆ. "ಯುದ್ಧಗಳು ಅಂತ್ಯವಾಗಬೇಕಾದರೆ ಸಮಾಜದ ಸಂರಚನೆಯನ್ನು ಬದಲಿಸಬೇಕು. ಯುದ್ಧಗಳನ್ನು ನಿಲ್ಲಿಸಬೇಕೆಂದರೆ ದುಡಿಯುವ ಜನತೆ ಹೊಸ, ನ್ಯಾಯಯುತವಾದ ಸಮಾಜವಾದಿ ಜಗತ್ತನ್ನು ಗೆಲ್ಲಬೇಕು."

**ಅಕ್ಟೋಬರ್ ಕ್ರಾಂತಿ ಮತ್ತು ಅಲೆಕ್ಸಾಂಡ್ರಾ**

೧೯೧೭ರವರೆಗೆ ನಾರ್ವೆಯಲ್ಲಿ ಆಶ್ರಯ ಪಡೆದಿದ್ದ ಅಲೆಕ್ಸಾಂಡ್ರಾ ಕೊಲ್ಲಂತಾಯ್, ಕ್ರಾಂತಿಗಾಗಿ ಬಿರುಸಿನಿಂದ ಅಣಿಯಾಗುತ್ತಿದ್ದ ತಾಯ್ನೆಲಕ್ಕೆ ಮರಳಿದಳು. ತಪ್ಪುಹಾದಿಯಲ್ಲಿದ್ದ ಎರಡನೇ ಸೋಷಿಯಲಿಸ್ಟ್ ಇಂಟರ್‌ನ್ಯಾಷನಲ್‌ನ ಸಹವಾಸ ತೊರೆದಿದ್ದವಳು ಬೋಲ್ಶೆವಿಕ್ ನಿಲುವುಗಳನ್ನು ಸಂಪೂರ್ಣವಾಗಿ ಒಪ್ಪಿದ್ದಳು; ಲೆನಿನ್‌ರ ಅನುಯಾಯಿಯಾಗಿಬಿಟ್ಟಿದ್ದಳು. ೧೯೧೭ರ ಫೆಬ್ರವರಿಯಲ್ಲಿ ಗಡೀಪಾರಿನಲ್ಲಿದ್ದಾಗಲೇ ಲೆನಿನ್ ಬರೆದ "ದೂರದ ಪತ್ರಗಳು" ಬರಹಗಳನ್ನು ಕ್ರಾಂತಿಯ ನಾಡಿಗೆ ತಲುಪಿಸಿದವಳು ಅಕ್ಟೋಬರ್ ಕ್ರಾಂತಿಯ ಮುನ್ನಾ ದಿನಗಳಲ್ಲಿ ಬೋಲ್ಶೆವಿಕ್ ನಾಯಕಿಯಾಗಿ ಕಾರ್ಯನಿರ್ವಹಿಸಿದಳು. ಏಪ್ರಿಲ್ ೪ರಂದು ನಡೆದ ಕ್ರಾಂತಿಕಾರಿಗಳ ಸಭೆಯಲ್ಲಿ "ಸೋವಿಯೆತ್‌ಗಳಿಗೆ ಪೂರ್ಣಾಧಿಕಾರ ಸಲ್ಲಬೇಕೆಂಬ" ಹಕ್ಕೊತ್ತಾಯದ ಪರ ಲೆನಿನ್‌ರಿಗೆ ಬೆಂಬಲವಾಗಿ ಮಾತನಾಡಿದ ಏಕೈಕ ಕ್ರಾಂತಿಕಾರಿ ಅಲೆಕ್ಸಾಂಡ್ರಾ ಎಂದು ಚರಿತ್ರೆ ದಾಖಲಿಸುತ್ತದೆ. ಪೆಟ್ರೋಗ್ರಾಡ್‌ನ ಲಾಂಡ್ರಿ ಕೆಲಸಗಾರರ ಮುಷ್ಕರಕ್ಕೆ ನೇತೃತ್ವವಹಿಸಿ, ಕರಪತ್ರ ಸಿದ್ಧಪಡಿಸಿ, ಪ್ರಚಾರದಲ್ಲಿ ತೊಡಗಿಕೊಂಡು, ಜನರನ್ನು ಹುರಿದುಂಬಿಸುವುದರ ಮೂಲಕ ಕ್ರಾಂತಿಗೆ ಅಣಿನೆರೆಸುತ್ತಿದ್ದಳು. ಬೋಲ್ಶೆವಿಕ್ ಪಕ್ಷ ಹೊರತರುತ್ತಿದ್ದ "ರಾಬೋತ್‌ನಿತ್ಸಾ" (ದುಡಿಯುವ ಮಹಿಳೆ) ಪತ್ರಿಕೆಗೆ ಲೇಖನಗಳನ್ನು ಬರೆದು ಮಹಿಳೆಯರಲ್ಲಿ ಜಾಗೃತಿ ಮೂಡಿಸುತ್ತಿದ್ದಳು.



ಅಲೆಕ್ಸಾಂಡ್ರಾ ತಮ್ಮ ಪತಿಯೊಂದಿಗೆ

ಅಕ್ಟೋಬರ್ ಕ್ರಾಂತಿಯ ನಂತರ ಅಲೆಕ್ಸಾಂಡ್ರಾಳ ಖಾಸಗಿ ಬದುಕಿನಲ್ಲಿ ಕುತೂಹಲಕಾರಿ ಘಟನೆಯೊಂದು ನಡೆದಿತ್ತೆಂದು ಹೇಳಲಾಗಿದೆ. ಅವಳು ಕ್ರಾಂತಿಯಾದ ಕೆಲವೇ ದಿನಗಳಲ್ಲಿ ಸುಮಾರು ಹತ್ತು ದಿನಗಳು ಕಣ್ಮರೆಯಾಗುತ್ತಾಳೆ. ಸಹಜವಾಗಿಯೇ ಎಲ್ಲಾ ನಾಯಕರೂ ಇದರಲ್ಲಿ ಪ್ರತಿಕ್ರಾಂತಿಕಾರಿಗಳ ಕೈವಾಡವನ್ನು ಶಂಕಿಸುತ್ತಾರೆ. ಆದರೆ ಅಲೆಕ್ಸಾಂಡ್ರಾ ತನ್ನ ಪ್ರಿಯತಮ ಪಾವೆಲ್ ಡೈಬೆಂಕೊನನ್ನು ಸಂಧಿಸಿ ಹಿಂದಿರುಗಿದಾಗ ಕ್ರಾಂತಿಕಾರಿಗಳೆಲ್ಲರೂ ಅವಳ ವಿರುದ್ಧ ಲೆನಿನ್‌ರಿಗೆ ದೂರೊಯ್ದು ಒಂದು ಸೋವಿಯೆತ್ ಸಭೆ ಕರೆಯಲು ಮನವಿ ಸಲ್ಲಿಸುತ್ತಾರೆ. ಲೆನಿನ್ ಸಭೆ ಕರೆದು ಅವರೆಲ್ಲರ ದೂರುಗಳನ್ನೂ ತಾಳ್ಮೆಯಿಂದ ಆಲಿಸುತ್ತಾರೆ. ಸ್ನೇಹಿತರೆಂದು ಹೇಳಿಕೊಂಡವರೂ ಅಲೆಕ್ಸಾಂಡ್ರಾಳ ಬಗ್ಗೆ ಅಸಭ್ಯವಾಗಿ ಮಾತನಾಡುತ್ತಾರೆ. ಅಂತಿಮವಾಗಿ, ಲೆನಿನ್ ಸಮಚಿತ್ತದಿಂದ ಹೇಳುತ್ತಾರೆ : "ಸಂಗಾತಿಗಳೇ, ನೀವು ಹೇಳಿದ್ದನ್ನೆಲ್ಲಾ ಒಪ್ಪುವೆ. ಅಲೆಕ್ಸಾಂಡ್ರಾಳನ್ನು ಕಠಿಣ ಶಿಕ್ಷೆಗೆ ಒಳಪಡಿಸಬೇಕೆಂದು ನನ್ನ ಅಭಿಪ್ರಾಯ; ಅವಳು ಡೈಬೆಂಕೊನನ್ನು ಮದುವೆಯಾಗಬೇಕೆಂಬುದು ನನ್ನ ಸೂಚನೆ." ಎಲ್ಲರ ಮುಖಗಳೂ ನಗು ಬೀರಿದಾಗ ದೂರು ನಿವಾರಣೆಯಾಗುತ್ತದೆ ! ಭಾವೋದ್ವೇಗದಿಂದ ಕೆಲಕಾಲವಷ್ಟೇ ಸಂಧಿಸಿದ್ದವನನ್ನು ವಿವಾಹವಾಗುವುದು ಅವಳಿಗೆ ನಿಜಕ್ಕೂ ಶಿಕ್ಷೆಯೇ ಆಗಿರುತ್ತದೆ. ಅಲೆಕ್ಸಾಂಡ್ರಾಳ ಕಣ್ಣಾಲಿಗಳು ಒದ್ದೆಯಾದಾಗ, "ಅದು ನನ್ನ ಮನದಾಳದ ಮಾತಾಗಿತ್ತು" ಎಂದು ಲೆನಿನ್ ಸಮಾಧಾನಪಡಿಸುತ್ತಾರೆ. ಅದರಂತೆ ಡೈಬೆಂಕೊ–ಅಲೆಕ್ಸಾಂಡ್ರಾರ ವಿವಾಹವಾಗುತ್ತದೆ. ಪೂರ್ಣವಾಗಿ ಸೋವಿಯೆತ್ ಒಕ್ಕೂಟದ ಪುನರ್ನಿರ್ಮಾಣ ಕಾರ್ಯದಲ್ಲವಳು ತೊಡಗಿಕೊಂಡಿದ್ದರಿಂದ ಅವರಿಬ್ಬರ ವೈವಾಹಿಕ ಸಂಬಂಧ ಹೆಚ್ಚುದಿನ ಉಳಿಯಲಿಲ್ಲ. ಮನುಷ್ಯರ ನಡುವಿನ ಕ್ಲಿಷ್ಟ ಎನಿಸುವ, ಸಮಸ್ಯೆಯೇ ಅಲ್ಲದ ಆದರೂ ಜಟಿಲವಾಗಿರುವ, ಸಾಮಾಜಿಕ ಪ್ರಭಾವ ಬೀರಬಲ್ಲ ವೈಯಕ್ತಿಕ ವಿಷಯಗಳನ್ನು ಲೆನಿನ್ ನಗು, ಪ್ರೀತಿ–ವಿಶ್ವಾಸಗಳೊಂದಿಗೆ ನಿರ್ವಹಿಸಿ ಬಗೆಹರಿಸುತ್ತಿದ್ದರೆಂಬುದಕ್ಕೆ ಇದು ಸಾಕ್ಷಿಯಾಗುತ್ತದೆ. ತನ್ನ ಬದುಕನ್ನು ಪ್ರಭಾವಿಸಿದ್ದ ಮತ್ತು ತಾನು ಮೆಚ್ಚಿದ್ದ ನಾಯಕ ಲೆನಿನ್‌ರ ಬಗ್ಗೆ ಪೂಜ್ಯ ಭಾವನೆ ಹೊಂದಿದ್ದಳು.

**ಸೋವಿಯೆತ್ ರಷ್ಯಾದಲ್ಲಿ ಅಲೆಕ್ಸಾಂಡ್ರಾ**

ಕ್ರಾಂತಿಯ ತರುವಾಯ ಲೆನಿನ್ ನೇತೃತ್ವದಲ್ಲಿ ಸ್ಥಾಪಿತವಾದ ಸೋವಿಯೆತ್ ಒಕ್ಕೂಟದ ಸಮಾಜವಾದಿ ಸರ್ಕಾರದಲ್ಲಿ ಎರಡು ಬಾರಿ ಸಮಾಜ ಕಲ್ಯಾಣ ಸಚಿವೆಯಾಗಿ (ಕಮಿಸಾರ್) ಆಯ್ಕೆಯಾದಳು. ೧೯೧೮ರಲ್ಲಿ ರಾಜಕೀಯ ಬಾಂಧವ್ಯಬೆಸುಗೆಗಾಗಿ ಸ್ವೀಡನ್, ಫ್ರಾನ್ಸ್ ಮತ್ತು ಇಂಗ್ಲೆಂಡ್‌ಗಳಿಗೆ ಸೋವಿಯೆತ್ ತಂಡವನ್ನು ಒಯ್ದಳು. ರೈತಮಹಿಳೆಯರ ಬವಣೆಗಳನ್ನರಿತ ಅಲೆಕ್ಸಾಂಡ್ರಾ ಮೊಟ್ಟಮೊದಲ ಬಾರಿಗೆ ಸೋವಿಯೆತ್ ದುಡಿಯುವ ಮಹಿಳೆಯರ (ಕಾರ್ಮಿಕ ಮತ್ತು ರೈತ) ಮಹಾಧಿವೇಶನವನ್ನು ಆಯೋಜಿಸಿದಳು. ಸಿಪಿಎಸ್‌ಯುನ ಮಹಿಳಾ ಘಟಕದ (ಜ಼ೆನತ್ದೆಲ್) ಸ್ಥಾಪನೆ ಮತ್ತು ನಿರ್ವಹಣೆಯಲ್ಲಿ ಅವಳು ಪ್ರಮುಖ ಪಾತ್ರ ವಹಿಸಿದಳು. ಉಕ್ರೇನ್‌ನ ಪ್ರಚಾರ ಸಚಿವೆಯಾಗಿಯೂ ಕಾರ್ಯನಿರ್ವಹಿಸಿದ್ದ ಆಕೆ ವಿಶ್ವ ಕಮ್ಯುನಿಸ್ಟ್ ಮಹಾಧಿವೇಶನದ (ಕಮಿನ್ಟರ್ನ್) ಸ್ಥಾಪನಾ ಸಮ್ಮೇಳನದಲ್ಲಿ "ಬೂರ್ಶ್ವಾ ಪ್ರಜಾತಂತ್ರ ಮತ್ತು ದುಡಿಯುವ ವರ್ಗದ ಸರ್ವಾಧಿಕಾರ : ಇವೆರಡರ ನಡುವಿನ ವ್ಯತ್ಯಾಸ" ವಿಷಯದ ಕುರಿತು ಲೆನಿನ್, ಟ್ರಾಟ್ಸ್ಕಿ ಅವರೊಡನೆ ವಿಚಾರ ಮಂಡಿಸಿದಳು.

ವಿದೇಶಾಂಗ ವ್ಯವಹಾರಗಳಲ್ಲಿ ನಿಷ್ಣಾತೆಯಾದ್ದರಿಂದ ಸಂದಿಗ್ಧ ಸನ್ನಿವೇಶಗಳಲ್ಲೂ ರಾಯಭಾರದ




ಸಿದ್ಧಉಡುಪು ತಯಾರಿಕಾ ಕಾರ್ಖಾನೆ

ಉಸ್ತುವಾರಿಯನ್ನು ಅಲೆಕ್ಸಾಂಡ್ರಾಳಿಗೆ ವಹಿಸಲಾಗಿತ್ತು. ದೈನ್ಯತೆ ಮತ್ತು ಪ್ರೀತಿಯಿಂದಲೇ ಎದುರಿದ್ದವರನ್ನೂ ಒಲಿಸಿಕೊಳ್ಳುವ ಸಾಮರ್ಥ್ಯ ಹೊಂದಿದ್ದ ಅವಳು ರಾಜತಾಂತ್ರಿಕತೆಯ ನೈಪುಣ್ಯತೆ ಸಾಧಿಸಿದ್ದಳು. ೧೯೨೩ರಲ್ಲಿ ನಾರ್ವೆಯ ಸೋವಿಯೆತ್ ರಾಯಭಾರಿಯಾದ ಅಲೆಕ್ಸಾಂಡ್ರಾ ಕೊಲ್ಲಂತಾಯ್ ವಿಶ್ವದ ಎರಡನೇ ಮಹಿಳಾ ರಾಯಭಾರಿ ಎಂಬ ಹೆಗ್ಗಳಿಕೆಗೆ ಪಾತ್ರಳಾದಳು. ಮೆಕ್ಸಿಕೊ, ಸ್ವೀಡನ್‌ಗಳಲ್ಲಿ ಸೋವಿಯೆತ್ ರಾಯಭಾರಿಯಾಗಿ, ಲೀಗ್ ಆಫ್ ನೇಷನ್ಸ್‌ಗೆ ಸೋವಿಯೆತ್ ಪ್ರತಿನಿಧಿಯಾದಳು. ಬದುಕಿನ ಅಂತ್ಯದಲ್ಲಿ ಸೋವಿಯೆತ್ ವಿದೇಶಾಂಗ ವ್ಯವಹಾರಗಳ ಸಲಹೆಗಾರ್ತಿಯಾಗಿ ಸೇವೆ ಸಲ್ಲಿಸಿದಳು.

**ಮಹಿಳಾ ಚಳವಳಿ ಮತ್ತು ಅಲೆಕ್ಸಾಂಡ್ರಾ**

ಜ಼ಾರ್ ಆಳ್ವಿಕೆಯಲ್ಲಿ ಹೀನಾಯ ಸ್ಥಿತಿಯಲ್ಲಿದ್ದ ರಷ್ಯನ್ ಮಹಿಳೆಯರನ್ನು ಸಬಲೀಕರಣಗೊಳಿಸಲು ಸೋವಿಯೆತ್ ಸರ್ಕಾರದಲ್ಲಿ ಮಹಿಳಾಪರ ಶಾಸನ ಗಳನ್ನು, ನೀತಿಗಳನ್ನು ರೂಪಿಸಲು ಅಲೆಕ್ಸಾಂಡ್ರಾ ಮಹತ್ವದ ಕೊಡುಗೆ ನೀಡಿದಳು. ಮಹಿಳೆಯರನ್ನು ಅಡುಗೆಕೋಣೆಗಳಿಂದ ಹೊರತಂದು ಅವರನ್ನು ಸಾಮಾಜಿಕ ಉತ್ಪಾದನೆಯಲ್ಲಿ ತೊಡಗಿಸಿದಾಗ ಮಾತ್ರ ಅವರು ಸಶಕ್ತರಾಗಿ ಆರ್ಥಿಕ–ಸಾಮಾಜಿಕ ಸಮಾನತೆ ಸಾಧಿಸಲು ಸಾಧ್ಯವಾಗುವುದೆಂದು ಕ್ರಾಂತಿಯ ಸಂದೇಶವನ್ನು ಮಹಿಳಾ ಸಮುದಾಯಕ್ಕೆ ತಲುಪಿಸಲು ಶ್ರಮಿಸಿದಳು. ಸೋವಿಯೆತ್ ಸರ್ಕಾರದ ಮುಖ್ಯ ಯೋಜನೆಗಳಾದ ಸಮುದಾಯ ಅಡುಗೆ ಕೋಣೆಗಳು, ಹೆರಿಗೆ ಸೌಲಭ್ಯಗಳು, ಶಿಶುವಿಹಾರಗಳು ಮಹಿಳೆಯರ ಸಬಲೀಕರಣಕ್ಕೆ ಪೂರಕವಾದವು. ಅಲೆಕ್ಸಾಂಡ್ರಾ ಸಮಾಜ ಕಲ್ಯಾಣ ಸಚಿವೆಯಾದಾಗ, ಮಹಿಳೆಯರು ತಾಯ್ತನವನ್ನು ಸುಖವಾಗಿ ಆರೋಗ್ಯಕರವಾಗಿ ಅನುಭವಿಸುವುದರ ಜೊತೆಗೆ ಗರ್ಭದಲ್ಲಿ ಬೆಳೆಯುತ್ತಿರುವ ಕುಡಿಯನ್ನು ಸಮಾಜದ ಶಿಶುವಾಗಿ ರಕ್ಷಿಸಿ–ಪೋಷಿಸುವ ಯೋಜನೆಯನ್ನು ಆದ್ಯತೆಯ ಮೇಲೆ ಕೈಗೊಂಡಳು. ತಾಯ್ತನದ ರಕ್ಷಣೆಗಾಗಿ ಮಾದರಿ "ತಾಯ್ತನದ ಅರಮನೆಗಳನ್ನು" ನಡೆಸಲು ಮಂಡಳಿಯನ್ನು ರಚಿಸಿ, ವಿವಾಹಿತೆಯಾಗಲೀ ಅವಿವಾಹಿತೆಯಾಗಲೀ ತಾಯಿಯಾಗುವವಳಿಗೆ ಗೌರವದಿಂದ ತಾಯ್ತನದ ಆರೈಕೆ, ಸೌಲಭ್ಯ ನೀಡುವ ವ್ಯವಸ್ಥೆಗೆ ನಾಂದಿ ಹಾಡಿದಳು.

**ಅಭಿನಂದನೆ...**

ಭಾರತೀಯ ಪ್ರಕಾಶಕರ ಒಕ್ಕೂಟವು ಕೊಡಮಾಡುವ 'ಅತ್ಯುತ್ತಮ ಮುದ್ರಣ ವಿನ್ಯಾಸ' ಪ್ರಶಸ್ತಿಯು ೨೦೧೭ನೇ ಸಾಲಿನ ನವಕರ್ನಾಟಕ ಪ್ರಕಟಿಸಿರುವ 'ಕಿತ್ತಳೆ – ನೇರಳೆ – ಪೇರಳೆ' (ಸುಗತ ಶ್ರೀನಿವಾಸ ರಾಜು) ಕೃತಿಗೆ ಲಭಿಸಿದೆ.

ಜ಼ಾರ್ ದೊರೆಗಳ ಕಾಲದಿಂದ ವ್ಯಾಪಕವಾಗಿದ್ದ ವೇಶ್ಯಾವಾಟಿಕೆಯ ಕೂಪದೊಳಗೆ ತಳ್ಳಲ್ಪಟ್ಟಿದ್ದ ಮಹಿಳೆಯರಿಗೆ ಉದ್ಯೋಗ ನೀಡಿ ಪುನರ್ವಸತಿ ಕಲ್ಪಿಸು ವುದು ಸ್ಥಿತ್ಯಂತರದ ಸಂದರ್ಭದಲ್ಲಿ ಸರ್ಕಾರಕ್ಕೆ ಬಹು ದೊಡ್ಡ ಸವಾಲಾಗಿತ್ತು. ಅಲೆಕ್ಸಾಂಡ್ರಾ ಕೊಲ್ಲಂತಾಯ್ ಇದರ ಗಂಭೀರ ಅಧ್ಯಯನ ನಡೆಸಿ ಸೂಕ್ತ ವೇದಿಕೆಗಳಲ್ಲಿ ಮಂಡಿಸಿ ಲೇಖನಗಳನ್ನು ಬರೆದಳು. ಬೂರ್ಶ್ವಾ ಜೀವನ ವಿಧಾನದ ಕೆಸರಿನಲ್ಲಿ ಎಲ್ಲಾ ಬಗೆಗಳ ವೇಶ್ಯಾವಾಟಿಕೆಯೂ ವಿಷಕಾರಿ ಹೂವುಗಳಾಗಿ ಅರಳುತ್ತವೆಂದು ಅಲೆಕ್ಸಾಂಡ್ರಾ ವಿಮರ್ಶಿಸುತ್ತಾ, ಮಹಿಳೆಯರನ್ನು ನಿರುದ್ಯೋಗ ಹೆಚ್ಚಾಗಿ ಬಾಧಿಸುವುದರಿಂದ "ಬೀದಿ ಹೆಣ್ಣುಗಳ" ಪಡೆ ವ್ಯಾಪಕವಾಗುತ್ತದೆ ಎನ್ನುತ್ತಾಳೆ. ವೇಶ್ಯಾವಾಟಿಕೆಯನ್ನು ಸಾಮಾಜಿಕ ಪಿಡುಗೆಂದು ಪರಿಗಣಿಸಿದ್ದ ಸೋವಿಯೆತ್ ಸರ್ಕಾರ ಪುರುಷನಿಗೆ ಮೈಮಾರಿಕೊಂಡ ಕಾರಣಕ್ಕಾಗಿ ವೇಶ್ಯೆಯರನ್ನೆಂದೂ ನಿಂದಿಸದೆ "ಗೃಹಿಣಿ"ಯರಂತೆ ಸಾಮಾಜಿಕ ಉತ್ಪಾದನೆಯಲ್ಲಿ ಭಾಗಿಯಾಗಿಲ್ಲ ವೆಂಬುದನ್ನಷ್ಟೇ ಗುರುತಿಸಲಾಯಿತು. ಸಮಾಜದ ಆರೋಗ್ಯ ಸರ್ಕಾರದ ಕಾಳಜಿಯಾಗಿದ್ದು ಯುವಜನತೆಗೆ ಲೈಂಗಿಕತೆಯ ಶಿಕ್ಷಣ ನೀಡಲಾಯಿತು. "ಮಹಿಳೆಯನ್ನು ಬೆಲೆಗೆ ಕೊಂಡ ಪುರುಷ ಅವಳನ್ನು ಸಂಗಾತಿಯೆಂದಾಗಲೀ ಸಮಾನ ಹಕ್ಕುಗಳುಳ್ಳ ವ್ಯಕ್ತಿಯೆಂದಾಗಲೀ ಕಾಣುವುದಿಲ್ಲ. ಸೌಹಾರ್ದತೆ–ಸಂಗಾತಿಭಾವಗಳು ಕಮ್ಯುನಿಸಮ್‌ನ ಮೂಲತತ್ವಗಳಿಗಿರುತ್ತವೆ" ಎಂದು ಅಲೆಕ್ಸಾಂಡ್ರಾ ಬರೆದಳು.



ವಿಚ್ಛೇದನ ಕಾನೂನನ್ನು ಸರಳಗೊಳಿಸಿ ಮಹಿಳೆಯರಿಗೆ ಬೇಡಿಯಂತಿದ್ದ ವಿವಾಹಬಂಧದಿಂದ ಮುಕ್ತಿಗೊಳಿಸಲಾಯಿತು. ಮಹಿಳೆಯರನ್ನು ಆರ್ಥಿಕ ವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿಯೂ ಸದೃಢರಾಗುವಂತೆ ವಿಶ್ವಾಸ ತುಂಬಿದ ನಾಯಕಿ ಅಲೆಕ್ಸಾಂಡ್ರಾ. ಸೋವಿಯೆತ್ ಒಕ್ಕೂಟ ಸರ್ಕಾರ ಕೈಗೊಂಡ ಮಹಿಳಾಪರ ಹೆಜ್ಜೆಗಳು ವಿಶ್ವ ಮಹಿಳಾ ಚಳವಳಿಗೆ ಸ್ಫೂರ್ತಿಯಾದವು. ಅನೇಕ ದೇಶ ಗಳಲ್ಲಿ ಮುನ್ನೆಲೆಗೆ ಬರುತ್ತಿದ್ದ ಎಡಪಂಥೀಯ ಮಹಿಳಾ ಚಳವಳಿಗಿದು ದಿಕ್ಸೂಚಿಯಾಯಿತೆಂದರೂ ಅತಿಶಯೋಕ್ತಿಯಲ್ಲ.

ಮಹಿಳಾ ಸಮಾನತೆ ಮತ್ತು ಮಹಿಳಾ ಹಕ್ಕುಗಳ ಮಹತ್ವದ ಪ್ರಶ್ನೆಗಳಿಗೆ ಸಂಬಂಧಿಸಿದಂತೆ ಅಲೆಕ್ಸಾಂಡ್ರಾ ಕೊಲ್ಲಂತಾಯ್ ಮಾರ್ಕ್ಸ್‌ವಾದಿ ದೃಷ್ಟಿಕೋನದಿಂದ ವಿಶ್ಲೇಷಣೆ ಒದಗಿಸುತ್ತಾಳೆ. "ಮಹಿಳಾ ಪ್ರಶ್ನೆಯ ಸಾಮಾಜಿಕ ಮೂಲ" ಎಂಬ ಕೃತಿಯಲ್ಲಿ ಮಹಿಳಾ ವಿಷಯಗಳನ್ನು ಮಾರ್ಕ್ಸ್‌ವಾದಿ ಕಣ್ಣೋಟದಲ್ಲಿ ಮೆಲುಕು ಹಾಕುತ್ತಾಳೆ. ಬೂರ್ಶ್ವಾ ಮಹಿಳಾವಾದದ ಮಿತಿಯ ಬಗ್ಗೆ ಮಾತನಾಡುವ ಅಲೆಕ್ಸಾಂಡ್ರಾ ಹೊಸ ಸಾಮಾಜಿಕ ಮತ್ತು ಆರ್ಥಿಕ ತತ್ವಗಳ ಆಧಾರದಲ್ಲಿ ಜಗತ್ತು ಪರಿವರ್ತನೆ ಯಾದಾಗ ಮಾತ್ರ ಮಹಿಳೆಯರು ನಿಜಾರ್ಥದಲ್ಲಿ ವಿಮೋಚನೆಗೊಳ್ಳಲು ಸಾಧ್ಯವೆನ್ನುತ್ತಾಳೆ. ವರ್ಗವೈರುಧ್ಯ ಗಳಿಂದ ರಚನೆಯಾಗಿರುವ ಸಮಾಜದಲ್ಲಿ ವರ್ಗಭೇದ ವಿಲ್ಲದೆ ಮಹಿಳೆಯರು ಚಳವಳಿಯಲ್ಲಿ ಒಂದುಗೂಡಲು ಸಾಧ್ಯವೇ ಎಂಬುದು ಅವಳ ಮುಂದಿದ್ದ ಗಂಭೀರ ಪ್ರಶ್ನೆಯಾಗಿತ್ತು. ಬಂಡವಾಳವಾದವು ಮಹಿಳೆಯನ್ನು ಹಿಂಡಿ ಹಿಪ್ಪೆ ಮಾಡಿರುವುದನ್ನು ಅಲೆಕ್ಸಾಂಡ್ರಾ ತನ್ನ ಲೇಖನಗಳಲ್ಲಿ ವಿಶ್ಲೇಷಿಸುತ್ತಾ ಮಹಿಳೆಯರನ್ನು ಸಮತಾವಾದವು ಕೌಟುಂಬಿಕ ದಾಸ್ಯದಿಂದ ಬಿಡುಗಡೆಗೊಳಿಸುತ್ತದೆ ಎಂದೂ ಸಮಾಜವಾದಿ ವ್ಯವಸ್ಥೆಯೊಳಗೆ ಮಹಿಳೆ ನೆಮ್ಮದಿಯಿಂದ ಆರೋಗ್ಯಕರವಾಗಿದ್ದಾಳೆಂಬುದನ್ನು ಸಾಕ್ಷೀಕರಿಸುತ್ತಾಳೆ.

ಸೋವಿಯೆತ್ ರಷ್ಯಾ ಕುರಿತ ಬಂಡವಾಳಶಾಹಿಗಳ ಅಪಪ್ರಚಾರಗಳನ್ನು ಅಲೆಕ್ಸಾಂಡ್ರಾ ಎದುರಿಸುತ್ತಾಳೆ. ಸೋವಿಯೆತ್ ಸರ್ಕಾರ ಹೆಣ್ಣುಮಕ್ಕಳನ್ನೂ ರಾಷ್ಟ್ರೀಕರಣ ಗೊಳಿಸಿದೆ ಎಂಬ ಅಮೆರಿಕದ ಕುಹಕಕ್ಕೆ, "ಯಾವುದೇ ರಷ್ಯನ್ ಯುವತಿಯನ್ನು ವಿಚಾರಿಸಿದರೂ ತಿಳಿಯುತ್ತದೆ, ರಾಷ್ಟ್ರೀಕರಣವಾಗಿರುವುದು ಹೆಣ್ಣೋ ಹೊನ್ನೋ ಮಣ್ಣೋ" ಎಂಬರ್ಥದಲ್ಲಿ ಉತ್ತರಿಸುತ್ತಾಳೆ.

ಸಮಾಜವಾದಿ ರಷ್ಯಾ ಎಂಬ ದುಡಿಯುವ ಜನತೆಯ ತವರನ್ನು ನಿರ್ಮಿಸಲು ಆಧಾರಸ್ತಂಭವಾಗಿದ್ದ ಲೇಖಕಿ, ಹೋರಾಟಗಾರ್ತಿ, ಸಂಘಟಕಿ, ಚಿಂತಕಿ ಅಲೆಕ್ಸಾಂಡ್ರಾ ಕೊಲ್ಲಂತಾಯ್ ೧೯೫೨ರ ಮಾರ್ಚ್ ೯ರಂದು ಮಾಸ್ಕೊದಲ್ಲಿ ಕೊನೆಯುಸಿರೆಳೆದಳು. ಅವಳ ಚಿಂತನೆಗಳು ಅಮರವಾಗಿವೆ, ನಮಗೆ ದಾರಿದೀಪವಾಗಿವೆ.

**ಜ್ಯೋತಿ ಎ.**
ನಂ. ೩೭, ೧೭ನೇ ಮುಖ್ಯರಸ್ತೆ, ಎಂ. ಸಿ. ಲೇಔಟ್
ವಿಜಯನಗರ, ಬೆಂಗಳೂರು – ೫೬೦ ೦೪೦

# ಕರ್ನಾಟಕ ಏಕೀಕರಣ
# ಕನಸು ನನಸಾಗಿಲ್ಲ ಏಕೆ?

ವಿಜಯನಗರದ ಪತನದೊಂದಿಗೆ ಕನ್ನಡಿಗರಿಗೆ ನೆಲೆಯಿಲ್ಲದಂತಾಯಿತು. ಸಾವಿರಾರು ವರ್ಷಗಳ ಇತಿಹಾಸವಿದ್ದ ಕನ್ನಡನಾಡು ೧೯ನೆಯ ಶತಮಾನದ ಹೊತ್ತಿಗೆ ೨೨ ಭಾಗಗಳಾಗಿ ಗುರುತು ಸಿಗದಂತೆ ಹರಿದು ಹಂಚಿಹೋಗಿತ್ತು. ಮೈಸೂರು ಸಂಸ್ಥಾನ, ಕೊಡಗು, ಸವಣೂರು ಸಂಸ್ಥಾನಗಳನ್ನು ಬಿಟ್ಟರೆ ಉಳಿದ ಪ್ರದೇಶಗಳಲ್ಲಿ ಕನ್ನಡವನ್ನು ಆಳುವವರು ಕಡೆಗಣಿಸಿದ್ದರು. ಹೀಗೆ ವಿವಿಧ ಆಡಳಿತಗಳಲ್ಲಿ ಹಂಚಿಹೋಗಿದ್ದ ಕನ್ನಡಿಗರು ತಮ್ಮ ಅಸ್ಮಿತೆಯನ್ನು ಉಳಿಸಿಕೊಳ್ಳಲು ಹರಸಾಹಸಪಡುತ್ತಿದ್ದರು. ಕನ್ನಡಿಗರೆಲ್ಲ ಒಂದಾಗುವ ಕನಸು ಕಾಣುತ್ತಿದ್ದರು.



ರಾ. ನಂ. ಚಂದ್ರಶೇಖರ್

**ಕರ್ನಾಟಕ ಎಂಬುದು ಒಂದು ಆದರ್ಶ !**

ಕರ್ನಾಟಕ ಎಂಬ ಹೆಸರು ಮಹಾಭಾರತದಲ್ಲಿ ಬರುತ್ತದೆ; ವಿಷ್ಣು ಪುರಾಣದಲ್ಲಿದೆ. ರಾಮಾಯಣದ ಕಿಷ್ಕಿಂಧೆಯು ಈಗಿನ ಹಂಪೆ. ಕನ್ನಡದ ಚಾಲುಕ್ಯರು, ರಾಷ್ಟ್ರಕೂಟರು ಇಂದಿನ ಬಿಹಾರದವರೆಗೂ ಆಳಿದ್ದಿದೆ. ಕನ್ನಡಿಗ ನನ್ನಿದೇವ ನೇಪಾಳವನ್ನು ಆಳಿದ. ಆದರೆ, ಕರ್ನಾಟಕ ಎಂಬ ಹೆಸರಿನಲ್ಲಿ ರಾಜ್ಯ ಇದ್ದುದಕ್ಕೆ ಐತಿಹಾಸಿಕ ದಾಖಲೆಯಿಲ್ಲ. ಕರ್ನಾಟಕ ಎಂಬುದು ಅಮೂರ್ತ ಕಲ್ಪನೆ; ಆದರ್ಶ. ಮೈಸೂರು ಅರಸರು, ಕಾಕತೀಯ ವೀರಭದ್ರ ರಾಜನಂತಹ ಸಣ್ಣಪುಟ್ಟ ರಾಜರೂ 'ಶ್ರೀಮದ್ ಕರ್ನಾಟ ವೀರಸಿಂಹಾಸನಾಧೀಶ್ವರ' ಎಂದು ಗುರುತಿಸಿಕೊಳ್ಳುತ್ತಿದ್ದರು. ವಿಜಯನಗರದ ರಾಜರೂ ತಮ್ಮನ್ನು 'ಕರ್ನಾಟಕ ರಮಾರಮಣ' ಎಂದು ಗುರುತಿಸಿ ಕರೆದುಕೊಂಡರು. ಈ ಕಾರಣದಿಂದಾಗಿಯೇ ಕರ್ನಾಟಕ ಏಕೀಕರಣದ ಬಗ್ಗೆ ಸ್ಪಷ್ಟ ಭೌಗೋಲಿಕ ಎಲ್ಲೆ ಗುರುತಿಸುವಲ್ಲಿ ಸಾಕಷ್ಟು ಗೊಂದಲವಿತ್ತು. ಆದರೆ ಕನ್ನಡಿಗರೆಲ್ಲ ಒಂದಾಗಿ, ಕರ್ನಾಟಕದ ಏಕೀಕರಣವಾಗಿ ಒಂದು ಆಡಳಿತದಡಿಯಲ್ಲಿ ಬಂದರೆ, ಕನ್ನಡಿಗರ ಭವಿಷ್ಯವು ಉಜ್ವಲವಾಗುತ್ತದೆ, ಕನ್ನಡ ಭಾಷೆ ಇನ್ನಷ್ಟು ಶ್ರೀಮಂತವಾಗುತ್ತದೆ; ಒಂದಾದ ಕನ್ನಡನಾಡು ಸಮೃದ್ಧ ಸ್ವಾಭಿಮಾನಿ ಬೀಡಾಗುತ್ತದೆ ಎಂದು ಏಕೀಕರಣ ಪ್ರತಿಪಾದಕರು ದೃಢವಾಗಿ ನಂಬಿದ್ದರು.

**ಕನ್ನಡ ನಾಡು ಒಂದಾಯಿತು**

ಒಟ್ಟಿನಲ್ಲಿ ಹಲವು ಆಯಾಮಗಳಲ್ಲಿ ನಡೆದ ಕರ್ನಾಟಕ ಏಕೀಕರಣ ಚಳವಳಿ ಫಲ ನೀಡಿತು. ೦೧-೧೧-೧೯೫೬ರಂದು 'ವಿಶಾಲ ಮೈಸೂರು' ಎಂಬ ಹೆಸರಿನಲ್ಲಿ ಕರ್ನಾಟಕ ರಾಜ್ಯವು ಅಸ್ತಿತ್ವಕ್ಕೆ ಬಂದಿತು. ಪಿ. ಕಾಳಿಂಗರಾಯರು ಅಂದು ನಡೆದ ಸಮಾರಂಭದಲ್ಲಿ 'ಉದಯವಾಯಿತು ನಮ್ಮ ಚೆಲುವ ಕನ್ನಡನಾಡು' ಎಂದು ಹಾಡಿದರು. 'ಹೊತ್ತಿತೋ ಹೊತ್ತಿತು ಕನ್ನಡದ ದೀಪ। ಮುಗಿಯಿತೋ ಮುಗಿಯಿತು ಶತಮಾನಗಳ ಶಾಪ' ಎಂದು ಕನ್ನಡಿಗರು ಸಂಭ್ರಮಿಸಿದರು. ಆದರೆ ಕರ್ನಾಟಕಕ್ಕೆ ಸೇರಲೇಬೇಕಿದ್ದ ಹಲವು ಅಚ್ಚಗನ್ನಡ ಪ್ರದೇಶಗಳು ಕರ್ನಾಟಕದ ಹೊರಗುಳಿದವು. ಅದೇನೇ ಇರಲಿ, ಇತಿಹಾಸದಲ್ಲಿ ಈಗಿನಷ್ಟು ವಿಶಾಲವಾದ ಕನ್ನಡ ನಾಡು ಹಿಂದೆಂದೂ ಇರಲಿಲ್ಲ ಎಂಬುದು ಮಹತ್ವದ ಸಂಗತಿ. ಇಷ್ಟೆಲ್ಲ ಪ್ರಯತ್ನದ ಫಲವಾಗಿ ಒಂದಾದ ನಾಡು ಎತ್ತ ಸಾಗುತ್ತಿದೆ ? ಚಿಂತಿಸಿದರೆ ಭಯವಾಗುತ್ತದೆ.

**ಏಕೀಕರಣ : ಅಭಿವೃದ್ಧಿಯ ಸವಾಲು**

ಕರ್ನಾಟಕದ ಇಂದಿನ ಪ್ರಗತಿಯನ್ನು ವಿಶ್ಲೇಷಿಸುವಾಗ ಏಕೀಕರಣದ ಪೂರ್ವಸ್ಥಿತಿಯನ್ನು ಗಮನಿಸುವುದು ಅಗತ್ಯ ಎಂದು ತಜ್ಞರು ಹೇಳುತ್ತಾರೆ. 'ಕೈಗಾರಿಕೀಕರಣ, ಇಲ್ಲವೇ ನಾಶ' ಎಂಬ ಧ್ಯೇಯದಿಂದ ಪ್ರಾತಃಸ್ಮರಣೀಯ ಎಂ. ವಿಶ್ವೇಶ್ವರಯ್ಯನವರು ಮೈಸೂರು ಸಂಸ್ಥಾನವನ್ನು ಪ್ರಗತಿಯತ್ತ ಕೊಂಡೊಯ್ದಿದ್ದರು. ತಾಂತ್ರಿಕ ಕಾಲೇಜು, ವೃತ್ತಿ ಶಿಕ್ಷಣ ಸಂಸ್ಥೆ, ಅಣೆಕಟ್ಟು, ವಿದ್ಯುತ್ ಯೋಜನೆ, ರಸ್ತೆ-ಸಾರಿಗೆ, ರೈಲುಗಳನ್ನು ನಿರ್ಮಿಸಿ ಗಾಂಧೀಜಿಯವರಿಂದ 'ನನ್ನ ಕನಸಿನ ಸ್ವತಂತ್ರ ಭಾರತಕ್ಕೆ ಮೈಸೂರು ಸಂಸ್ಥಾನವೇ ಮಾದರಿ' ಅನ್ನಿಸಿಕೊಂಡಿತ್ತು. ಏಕೀಕರಣ ಪೂರ್ವದಲ್ಲಿಯೇ ಬೆಂಗಳೂರಿನಲ್ಲಿ ಎಚ್.ಎ.ಎಲ್., ಬಿ.ಇ.ಎಲ್., ಐ.ಟಿ.ಐ., ಎಚ್.ಎಂ.ಟಿ.,

ಮೈಕೋಗಳಂತಹ ಬೃಹತ್ ಉದ್ದಿಮೆಗಳು ನೆಲೆಯೂರಿದ್ದವು. ಇದಕ್ಕೆ ಪ್ರತಿಯಾಗಿ ಮುಂಬೈ ಮತ್ತು ಹೈದರಾಬಾದ್ ಆಡಳಿತಕ್ಕೆ ಒಳಪಟ್ಟಿದ್ದ ಕನ್ನಡ ಪ್ರದೇಶಗಳಲ್ಲಿ ಹೇರಳವಾಗಿ ಸಂಪನ್ಮೂಲ ಇದ್ದರೂ, ಆಳುವವರು ಇಂದಲ್ಲ ನಾಳೆ ಇವು ಕರ್ನಾಟಕಕ್ಕೆ ಸೇರುತ್ತವೆ ಅನ್ನುವ ಧೋರಣೆಯಿಂದ ಅಭಿವೃದ್ಧಿ ಕಾರ್ಯವನ್ನು ಸರಿಯಾಗಿ ಕೈಗೊಳ್ಳಲಿಲ್ಲ. ಧಾರವಾಡದಲ್ಲಿ ಮೊದಲ ಕಾಲೇಜು ೧೯೧೭ರಲ್ಲಿ ಪ್ರಾರಂಭವಾಯಿತು. ಆ ಹೊತ್ತಿಗೆ ಮೈಸೂರಿನಲ್ಲಿ ವಿಶ್ವವಿದ್ಯಾಲಯವೇ ಆರಂಭವಾಗಿತ್ತು. ಬೆಳಗಾವಿ ಲಿಂಗರಾಜ ಕಾಲೇಜು ಸ್ಥಾಪನೆಯಾದದ್ದು ೧೯೩೩ರಲ್ಲಿ. ಇಂತಹ ಹಲವು ಸಂಗತಿಗಳನ್ನು ಬಿ. ಡಿ. ಜತ್ತಿಯವರು 'ಮೈಸೂರು – ಏಕೀಕರಣಕ್ಕೆ ಪೂರ್ವ ಮತ್ತು ಅನಂತರ ಸಂಚಿಕೆ' ಎಂಬ ಲೇಖನದಲ್ಲಿ ಪ್ರಸ್ತಾಪಿಸಿದ್ದಾರೆ (ಕರ್ನಾಟಕ ನಾಮಕರಣ ಮಹೋತ್ಸವ ಸಂಚಿಕೆ, ೧೯೭೩). ಹೀಗೆ ಅಸಮಾನ ಪ್ರಗತಿ ಸಾಧಿಸಿದ್ದ ಎರಡು ಭಾಗಗಳು ಒಂದಾದದ್ದು ಸಂಭ್ರಮದ ವಿಷಯವಾಗಿದ್ದಂತೆಯೇ ಎರಡು ಭಾಗಗಳನ್ನು ಸಮಾನ ಪ್ರಗತಿ ಪಥದಲ್ಲಿ ಕೊಂಡೊಯ್ಯುವ ಹೊಣೆಗಾರಿಕೆಯೂ ಇತ್ತು. ಈ ಹೊಣೆಗಾರಿಕೆಯನ್ನು ಅರ್ಥಮಾಡಿಕೊಂಡು ಸರಿಯಾಗಿ ನಿಭಾಯಿಸುವ ನಾಯಕರು ಮೂಡಿಬರಲಿಲ್ಲ, ಅದರಿಂದ ಹಿರಿಯರ ಕನಸಿನ ಕರ್ನಾಟಕ ನನಸಾಗಲಿಲ್ಲ.

## ನಮನ...

ನವಕರ್ನಾಟಕ ಪ್ರಕಾಶನಕ್ಕೆ ಹಲವು ಕೃತಿಗಳನ್ನು ರಚಿಸಿಕೊಟ್ಟ ಖ್ಯಾತ ಮಕ್ಕಳ ಸಾಹಿತಿ ಪಳಕಳ ಸೀತಾರಾಮ ಭಟ್ಟರು ದಿನಾಂಕ ೨೫-೦೯-೨೦೧೭ರಂದು ನಿಧನರಾಗಿದ್ದಾರೆ. ಇವರಿಗೆ 'ಹೊಸತು' ಹಾಗೂ 'ನವಕರ್ನಾಟಕ'ದ ನಮನಗಳು.

**ಕನಸು ಕನಸಾಗಿಯೇ ಇದೆ !**

ಕರ್ನಾಟಕದ ಏಕೀಕರಣವಾಗಿ ೬೦ ವರ್ಷ ತುಂಬಿದ ನಂತರವೂ ಪ್ರಾದೇಶಿಕ, ಸಾಮಾಜಿಕ ಅಸಮಾನತೆಗಳು ಅಳಿದಿಲ್ಲ. ಪ್ರಚಲಿತ ಅಂಕಿ-ಅಂಶಗಳು ಕರ್ನಾಟಕದಲ್ಲಿ ಅಸಮಾನತೆಯಿರುವುದನ್ನು, ಋಣಾತ್ಮಕ ಬೆಳವಣಿಗೆಯನ್ನು ಸೂಚಿಸುತ್ತವೆ. ಕರ್ನಾಟಕ ಒಂದು ರಾಜ್ಯವಾದರೂ ಒಳಗೆ ಮೂರು ರಾಜ್ಯಗಳಿವೆ ಅನ್ನುತ್ತಾರೆ ಅರ್ಥಶಾಸ್ತ್ರಜ್ಞರು. ರಾಜ್ಯದ ಅಭಿವೃದ್ಧಿಯ ದರ ರಾಷ್ಟ್ರದ ಸರಾಸರಿಗಿಂತ ಮೇಲಿದೆ, ಆದರೆ, ಬೆಂಗಳೂರನ್ನು ಹೊರತುಪಡಿಸಿ ರಾಜ್ಯದ ಉಳಿದ ಭಾಗದ ಜಿ.ಡಿ.ಪಿ.ಯನ್ನು ಪರಿಗಣಿಸಿದರೆ ರಾಷ್ಟ್ರದ ಸರಾಸರಿಯ ಆಸು-ಪಾಸಿಗೆ ಬರುತ್ತದೆ. ಉತ್ತರ ಕರ್ನಾಟಕವನ್ನೇ ಗಮನಿಸಿದರೆ ರಾಷ್ಟ್ರದ ಸರಾಸರಿಗಿಂತ ಕೆಳಗಿರುತ್ತದೆ. ಬೆಂಗಳೂರಿನ ತಲಾದಾಯ ರಾಜ್ಯದ ಸರಾಸರಿಗಿಂತ ೩.೨ ಪಟ್ಟು ಹೆಚ್ಚಿದೆ. ಬೆಂಗಳೂರು ನಗರದ ಒಟ್ಟು ಜಿಲ್ಲಾದಾಯ ಚಿಕ್ಕಬಳ್ಳಾಪುರ ಜಿಲ್ಲೆಯ ಜಿಲ್ಲಾದಾಯದ ಹನ್ನೊಂದು ಪಟ್ಟು ಹೆಚ್ಚಿದೆ. ಬೆಂಗಳೂರು ಬೆಳವಣಿಗೆ ಎಲ್ಲರ ಕಣ್ಣು ಚುಚ್ಚುವಂತಿದ್ದರೆ, ಉತ್ತರ ಕರ್ನಾಟಕದ ಕೆಲವು ಪ್ರದೇಶಗಳ ದುಃಸ್ಥಿತಿ ಕಂಡಾಗ ಕಣ್ಣೀರು ಬರುತ್ತದೆ. ಕರ್ನಾಟಕದ ಅಭಿವೃದ್ಧಿಯಲ್ಲಿ ವೈಪರೀತ್ಯಗಳಿವೆ ಎಂಬುದಕ್ಕೆ ಅಂಕಿ-ಅಂಶಗಳಾಗಲಿ, ಸೂಕ್ಷ್ಮ ವಿಶ್ಲೇಷಣೆಯಾಗಲಿ ಬೇಕಿಲ್ಲ. ಅದು ಕಣ್ಣಿಗೆ ಕಾಣುವಂತಿದೆ. ಮೊದಲ ಮುಂದುವರಿದ ೫ ಜಿಲ್ಲೆಗಳಲ್ಲಿ ಒಂದೂ ಉತ್ತರ ಕರ್ನಾಟಕದ ಜಿಲ್ಲೆಯಿಲ್ಲ. ಸಮಸ್ಯೆಗಳ ಪಟ್ಟಿ ಮಾಡಹೊರಟರೆ ಅದು ಮುಗಿಯುವುದೇ ಇಲ್ಲ ಅನ್ನುವಷ್ಟಿದೆ. ಇಂತಹ ಆರ್ಥಿಕ ವಿಶ್ಲೇಷಣೆಯನ್ನು ಬಿಡಿ. ರಾಜ್ಯವು ಒಂದಾಗಿದ್ದರ ದುರಂತವೆಂದರೆ ಭೌಗೋಲಿಕವಾಗಿ ಒಂದಾದ ಕನ್ನಡಿಗರು ಇನ್ನೂ ಭಾವನಾತ್ಮಕವಾಗಿ ಒಂದಾಗಿಲ್ಲ. ಇಂದಿಗೂ ಉತ್ತರ, ದಕ್ಷಿಣ ಎಂಬ ಭೇದದ ಜೊತೆಗೆ ಜಾತಿ ಭೇದಗಳು ಕನ್ನಡಿಗರನ್ನು ಒಂದಾಗಲು ಬಿಟ್ಟಿಲ್ಲ ಅನ್ನುವುದು ನಾಚಿಕೆಗೇಡಿನ ಸಂಗತಿಯಾಗಿದೆ. ಏಕೀಕರಣವಾದಾಗ ಪ್ರಗತಿಯಲ್ಲಿ ರಾಷ್ಟ್ರದ ೨ನೇ ಸ್ಥಾನದಲ್ಲಿದ್ದ ಕರ್ನಾಟಕ ಇಂದು ೧೧ನೆಯ ಸ್ಥಾನಕ್ಕಿಳಿದಿದೆ.

ಕನ್ನಡಿಗರು ಕಂಡ ಕನಸು ಕನಸಾಗಿಯೇ ಉಳಿದಿದೆ ಎಂಬುದಕ್ಕೆ ಹಲವು ನಿದರ್ಶನಗಳನ್ನು ಪಟ್ಟಿ ಮಾಡಬಹುದು. ಕರ್ನಾಟಕ ಎಂದು ನಾಮಕರಣವಾಗಲು ೧೭ ವರ್ಷಗಳಷ್ಟು ಕಾಲ (೧೯೭೩) ಬೇಕಾಯಿತು. ೬೧ ವರ್ಷಗಳು ಉರುಳಿದ ನಂತರವೂ ಕನ್ನಡ ಸಂಪೂರ್ಣವಾಗಿ ಆಡಳಿತ ಭಾಷೆಯಾಗಿಲ್ಲ. ಶಿಕ್ಷಣದಲ್ಲಿ ಕನ್ನಡಕ್ಕೆ ಸ್ಥಾನವಿಲ್ಲ. ಕನ್ನಡಿಗರಿಗೆ ಕೆಲಸ ಸಿಗುತ್ತಿಲ್ಲ. ನೆಲ-ಜಲ ಅನ್ಯರ ಪಾಲಾಗುತ್ತಿದೆ. ನದಿ ವಿವಾದಗಳು ಕಾಡುತ್ತಿವೆ, ಗಡಿ ವಿವಾದಗಳು ಪರಿಹಾರ ಕಂಡಿಲ್ಲ. ಕರ್ನಾಟಕ ಒಂದರ್ಥದಲ್ಲಿ ತೊಂಡು ದನಗಳು ಮೇಯುವ, ಬೇಲಿಯಿಲ್ಲದ ಗೋಮಾಳವಾಗಿದೆ. ಒಂದೇ ಮಾತಿನಲ್ಲಿ ಹೇಳುವುದಾದರೆ 'ಕನ್ನಡಿಗ ಸ್ಥಳೀಯ ನಿರಾಶ್ರಿತ; ಕನ್ನಡ ಅನಾಥ' ಅನ್ನುವ ಸ್ಥಿತಿ ನಮ್ಮದು; ಮತ್ತು ಕನ್ನಡದ ಸಮಸ್ಯೆಗಳು ಚಿರಂಜೀವಿಯಾಗಿವೆ. ಇದೆಲ್ಲ ನಿಜ. ಆದರೆ, ೬೧ ವರ್ಷಗಳಲ್ಲಿ ಕರ್ನಾಟಕದ ಸಾಧನೆ ನಗಣ್ಯವಲ್ಲ. ಏನೂ ಕನ್ನಡದ ಕೆಲಸ ಆಗಿಲ್ಲ ಎಂದರೆ ಸಿನಿಕತನವಾಗುತ್ತದೆ. ಉತ್ತರ ಕರ್ನಾಟಕದಲ್ಲಿಯೇ ನೀರಾವರಿಗೆ ಮಾಡಿರುವ ಖರ್ಚು, ಆಗಿರುವ ಪ್ರಗತಿಯನ್ನು ಸಾರಾಸಗಟಾಗಿ ನಿರಾಕರಿಸಲಾದೀತೆ ? ಆದರೆ, ಆರಂಭದಲ್ಲಿಯೇ ಸೂಕ್ತ ಯೋಜನೆಯನ್ನು ರೂಪಿಸಿ ನಾಡನ್ನು ಸರ್ವಾಂಗೀಣ ಪ್ರಗತಿಯ ಹಾದಿಯಲ್ಲಿ ಸಾಗುವಂತಹ ಅಡಿಪಾಯ ಹಾಕುವಲ್ಲಿ ಅಧಿಕಾರ ಹಿಡಿದ ನಾಯಕರು ಸೋತರು. ಅದರ ಪರಿಣಾಮ ಇಂದು ಅನುಭವಿಸುತ್ತಿದ್ದೇವೆ ಎಂದು ಪತ್ರಕರ್ತರೊಬ್ಬರು ಬರೆದಿದ್ದಾರೆ.

**ಕರ್ನಾಟಕ ಏಕೀಕರಣಕ್ಕೆ ದುಡಿದವರಿಗೆ ಒಂದಾಗಬೇಕೆಂಬ ಹಂಬಲವಿತ್ತು ಆದರೆ...**

ಕುವೆಂಪು ಅವರ 'ಅಖಂಡ ಕರ್ನಾಟಕ ಅಲ್ತೊ ನಮ್ಮ ಬೂಟಾಟದ ರಾಜಕೀಯ ನಾಟಕ ! ಇಂದು ಬಂದು, ನಾಳೆ ಸಂದು, ಹೋಹ ಸಚಿವ ಮಂಡಲ, ನೃಪತುಂಗನೆ ಚಕ್ರವರ್ತಿ ! ಪಂಪನಲ್ಲಿ ಮುಖ್ಯಮಂತ್ರಿ !' ಅನ್ನುವ ಕವನದ ಸಾಲುಗಳು ಅಂದು ಕರ್ನಾಟಕ ಏಕೀಕರಣಕ್ಕೆ ಹೋರಾಡುತ್ತಿದ್ದವರ ಮನೋಭಾವದ ಅಭಿವ್ಯಕ್ತಿಯಾಗಿದೆ. ಕರ್ನಾಟಕ ಏಕೀಕರಣ ಚಳವಳಿಯಲ್ಲಿ ಮುಂಚೂಣಿಯಲ್ಲಿದ್ದವರು ಸಾಹಿತ್ಯ ಲೋಕದವರು. ಕರ್ನಾಟಕದ ಗತವೈಭವದ ಬಗ್ಗೆ ಅಪಾರ ಅರಿವು, ಅಭಿಮಾನ ಇದ್ದ ಇವರು ಮತ್ತೆ ಆ ವೈಭವ ಮರುಕಳಿಸಬೇಕು ಎಂಬ ಕನಸನ್ನು ಹೊತ್ತು ಹೋರಾಡಿದರು. ಆದರೆ, ಏಕೀಕರಣವಾದ ನಂತರ ಕರ್ನಾಟಕವನ್ನು ಹೇಗೆ ಕಟ್ಟಬೇಕು ಎಂಬುದರತ್ತ ಅವರು ಆಲೋಚಿಸಲಿಲ್ಲ. ಏಕೀಕರಣವಾದರೆ ಕರ್ನಾಟಕ ಸ್ವರ್ಗವಾಗಿಬಿಡುತ್ತದೆ ಎಂದು ಸಾಮಾನ್ಯ ಕನ್ನಡಿಗರು ಕನಸು ಕಂಡರು. ಕನಸು ಸುಂದರವಾಗಿರುತ್ತದೆ. ಸುಂದರ ಕನಸು ಮನಸ್ಸಿಗೆ ಮುದ ನೀಡುತ್ತದೆ. ಆದರೆ ವಾಸ್ತವವೇ ಬೇರೆ. ಇದು ಕೇವಲ ಕರ್ನಾಟಕದ ಕತೆಯಲ್ಲ. ಮಹಾರಾಷ್ಟ್ರ , ಆಂಧ್ರ, ಗುಜರಾತ್‌ಗಳಲ್ಲೂ ಇದೇ ಕಥೆ. ಇತಿಹಾಸ ಮತ್ತು ಭಾಷೆಯ ಜೊತೆಗೆ, ಆರ್ಥಿಕವಾಗಿಯೂ ರಾಜಕೀಯವಾಗಿಯೂ ಏಕೀಕರಣ ಚಳವಳಿ ಚರ್ಚಿಸಿದ್ದರೆ, ಪ್ರತ್ಯೇಕತೆಯ ಕೂಗು, ನಂಜುಂಡಪ್ಪ ಆಯೋಗ ಬರುತ್ತಿರಲಿಲ್ಲ.

**ಕನ್ನಡಿಗರ ಮುಂದಿನ ಆಯ್ಕೆ**

ಭಾಷಾನ್ವಯ ರಾಜ್ಯಗಳು ರಚನೆಯಾಗಿ ೬ ದಶಕಗಳು ಕಳೆದನಂತರವೂ 'ಕನ್ನಡ-ಕನ್ನಡಿಗ-ಕರ್ನಾಟಕ'ಗಳ ಬಗ್ಗೆ ಅಭದ್ರ ಅನ್ನುವ ಭಾವನೆಯಿರುವುದು ಕನ್ನಡ ಕುಲಕ್ಕೆ ಗೌರವ ತರುವ ಸಂಗತಿಯಲ್ಲ. ಸರ್ಕಾರವನ್ನು ಹೊಣೆ ಮಾಡುವುದರ ಜೊತೆಗೆ, ತಾನೂ ಕಾರಣ ಎಂಬುದನ್ನು ಅರಿತು, ಜನಪ್ರತಿನಿಧಿಗಳು, ರಾಜಕೀಯ ಪಕ್ಷಗಳು ಕ್ರಿಯಾಶೀಲರಾಗಿ ಕೆಲಸ ಮಾಡುವಂತೆ ನೋಡಿಕೊಳ್ಳಬೇಕು. ಅದಕ್ಕೆ ಮೊದಲು ಪ್ರಸ್ತುತ ಎದುರಿಸುತ್ತಿರುವ ಸಮಸ್ಯೆಗಳನ್ನು ವಸ್ತುನಿಷ್ಠ ನೆಲೆಯಲ್ಲಿ ಪರಿಭಾವಿಸುವ ಮತ್ತು ವಿವೇಚಿಸುವ ಕೆಲಸ ಆಗಬೇಕಿದೆ. ಆಗ ಮಾತ್ರ ಕರ್ನಾಟಕ ಏಕೀಕರಣಕ್ಕೆ ಹೋರಾಡಿದವರ ಆಶಯ ಈಡೇರುತ್ತದೆ. ಕನ್ನಡ ರಾಜ್ಯೋತ್ಸವ ಆಚರಣೆಗೂ ಅರ್ಥ ಬರುತ್ತದೆ.

**ರಾ. ನಂ. ಚಂದ್ರಶೇಖರ್**
ನಂ. ೧, "ಶ್ರೀ ನಿಲಯ", ಮಾರಮ್ಮ ದೇವಸ್ಥಾನದ ರಸ್ತೆ
ಕತ್ತರಿಗುಪ್ಪೆ, ಬನಶಂಕರಿ ೩ನೇ ಹಂತ
ಬೆಂಗಳೂರು – ೫೬೦ ೦೮೫

# ಬ್ಯಾಟಲ್‌ಶಿಪ್ ಪೊಟೆಮ್ಕಿನ್
## ಐಸೆನ್‌ಸ್ಟೈನ್‌ನ ಪ್ರಭಾವಶಾಲಿ ಚಲನಚಿತ್ರ

**ಮ. ಶ್ರೀ. ಮುರಳಿ ಕೃಷ್ಣ**

ಚಲನಚಿತ್ರ ವಿಕಾಸದ ಇತಿಹಾಸದಲ್ಲಿ ಮೂಕ ಚಲನಚಿತ್ರ ಘಟ್ಟ ಪ್ರಮುಖವಾದದ್ದು; ಗಮನಾರ್ಹವಾದದ್ದು ಹೌದು. ಸಾಮಾನ್ಯವಾಗಿ ೧೮೯೫–೧೯೩೦ರ ವರೆಗಿನ ಅವಧಿಯನ್ನು 'ಮೂಕ ಚಲನ ಚಿತ್ರಗಳ ಯುಗ' ಎಂದು ಗುರುತಿಸಲಾಗುತ್ತದೆ. ಮೂಕಾಭಿನಯ ಮತ್ತು ಚಲನಚಿತ್ರದ ವಸ್ತು (ಕಥಾ)ವನ್ನು ಅಥವಾ ಮುಖ್ಯ ಸಂಭಾಷಣೆಯನ್ನು (ಧ್ವನಿರಹಿತ) ಟೈಟಲ್ ಕಾರ್ಡುಗಳ ಮೂಲಕ ಮೂಕ ಚಲನಚಿತ್ರಗಳು ವೀಕ್ಷಕರನ್ನು ತಲುಪುತ್ತಿದ್ದವು. ಈ ಕಾಲಘಟ್ಟದ ಅನೇಕ ಚಲನಚಿತ್ರ ವೀಕ್ಷಕರಿಗೆ / ರಸಿಕರಿಗೆ ಮೂಕ ಚಲನಚಿತ್ರಗಳು ಅಪಥ್ಯವೆನಿಸಬಹುದು. ಆದರೆ ಪ್ರವರ್ಧಮಾನದಲ್ಲಿದ್ದ ಕಾಲದಲ್ಲಿ, ಅವು ಸಂಚಲನವನ್ನು ಉಂಟುಮಾಡಿದ್ದಂತೂ ನಿಜ. 'ಸಿಟಿ ಲೈಟ್ಸ್', 'ಅರ್ಥ್', 'ಬ್ಯಾಟಲ್‌ಶಿಪ್ ಪೊಟೆಮ್ಕಿನ್', 'ದಿ ಜನರಲ್', 'ಮೆಟ್ರೊಪೊಲಿಸ್', 'ದಿ ಕ್ಯಾಬಿನೆಟ್ ಆಫ್ ಡಾ॥ ಕಲಿಗರಿ' ಮುಂತಾದ ಮೂಕ ಚಲನಚಿತ್ರಗಳು ಚಲನಚಿತ್ರ ಇತಿಹಾಸದಲ್ಲಿ ತಮ್ಮದೇ ಆದ ಸ್ಥಾನವನ್ನು ಗಳಿಸಿವೆ. (ಭಾರತದಲ್ಲಿ ಪ್ರಥಮ ಮೂಕ ಚಲನಚಿತ್ರ ೧೯೧೩ರಲ್ಲಿ ತೆರೆಕಂಡಿತು. ಅದೇ ದಾದಾ ಸಾಹೆಬ್ ಫಾಲ್ಕೆ ನಿರ್ದೇಶಿಸಿದ ಮರಾಠಿ ಚಲನಚಿತ್ರ 'ರಾಜಾ ಹರಿಶ್ಚಂದ್ರ'. ನಂತರ 'ಲಂಕಾ ದಹನ್', 'ಕೀಚಕ ವಧಂ', 'ಪ್ರೇಮ್ ಸನ್ಯಾಸ್' ಮೊದಲಾದ ಮೂಕ ಚಲನಚಿತ್ರಗಳು ವೀಕ್ಷಕರನ್ನು ಮೋಡಿ ಮಾಡಿದವು)

ರಷ್ಯಾದಲ್ಲಿ ೧೯೧೭ರಲ್ಲಿ ಜರುಗಿದ 'ಅಕ್ಟೋಬರ್ ಮಹಾಕ್ರಾಂತಿ' ಅನೇಕ ಸೃಜನಶೀಲ ಮನಸ್ಸುಗಳ ಮೇಲೆ ಗಾಢವಾದ ಪರಿಣಾಮಗಳನ್ನು ಬೀರಿತು. ಇನ್ನು ಪ್ರಾರಂಭಿಕ ಹಂತದಲ್ಲಿದ್ದ ಚಲನಚಿತ್ರ ಮಾಧ್ಯಮದಲ್ಲಿ ತೊಡಗಿಸಿಕೊಂಡಿದ್ದವರ ಮೇಲೂ ಇದು ಪ್ರಬಲವಾದ ಪ್ರಭಾವವನ್ನು ಬೀರಿತು. ಅಂತಹವರ ಪೈಕಿ ಚಲನಚಿತ್ರ ನಿರ್ದೇಶಕ ಸರ್ಗೈ ಐಸೆನ್‌ಸ್ಟೈನ್ ಕೂಡ ಒಬ್ಬರಾಗಿದ್ದರು. ಆತ ನಿರ್ದೇಶಿಸಿದ ಮೂಕ ಚಲನಚಿತ್ರ 'ಬ್ಯಾಟಲ್‌ಶಿಪ್ ಪೊಟೆಮ್ಕಿನ್' ಜಗತ್ತಿನ ಶ್ರೇಷ್ಠ ಚಲನಚಿತ್ರಗಳ ಪಟ್ಟಿಯಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿದೆ. ಪ್ರಸ್ತುತ ಈ ಬರೆಹದಲ್ಲಿ ಈ ಚಲನಚಿತ್ರದ ಕೆಲವು ಅಂಶಗಳ ಬಗೆಗೆ ಬೆಳಕನ್ನು ಚೆಲ್ಲಲು ಪ್ರಯತ್ನಿಸಲಾಗಿದೆ. ಹಲವು ವರ್ಷಗಳ ಹಿಂದೆ ಈ ಲೇಖಕ ಈ ಚಲನಚಿತ್ರವನ್ನು ವೀಕ್ಷಿಸಿದ್ದ. ಇತ್ತೀಚೆಗೆ ಪುನಃ ಅದನ್ನು ವೀಕ್ಷಿಸುವ ಸದವಕಾಶ ಆತನಿಗೆ ದೊರೆಯಿತು. ಈ ಬರೆಹದಲ್ಲಿ ಆತನ ಅನಿಸಿಕೆಗಳುಳ್ಳ (ವಿಮರ್ಶೆಯಲ್ಲ!) ಒಂದು ಝಲಕ್ ಇದೆ.

ಅಕ್ಟೋಬರ್ ಮಹಾಕ್ರಾಂತಿ ಜರುಗಿದ ಸುಮಾರು ಹನ್ನೆರಡು ವರ್ಷಗಳ ಮುನ್ನ ಅಂದರೆ ೧೯೦೫ರಲ್ಲಿ ರಷ್ಯಾದಲ್ಲಿ ತ್ಸಾರ್‌ಶಾಹಿ ವಿರುದ್ಧ ಮತ್ತು ಸಮಸಮಾಜದ ಸ್ಥಾಪನೆಗಾಗಿ ಒಂದು ಕ್ರಾಂತಿಯ ಪ್ರಯತ್ನ ನಡೆಯಿತು. ಅದು ಹಲವು ಕಾರಣಗಳಿಂದ ವಿಫಲವಾಯಿತು. ಇದಕ್ಕೆ ಸಂಬಂಧಿಸಿದ ಒಂದು ಘಟನೆಯನ್ನು ಆಧರಿಸಿ, 'ಬ್ಯಾಟಲ್‌ಶಿಪ್ ಪೊಟೆಮ್ಕಿನ್' ಚಲನಚಿತ್ರವನ್ನು ತಯಾರಿಸಲಾಯಿತು.

ಚಲನಚಿತ್ರದ ವಸ್ತು ೧೯೦೫ರ ಜೂನ್‌ನಲ್ಲಿ ಜರುಗುವ ಘಟನೆಗಳ ಸುತ್ತ ಗಿರಕಿ ಹೊಡೆಯುತ್ತದೆ. ಇಂಪಿರಿಯಲ್ ರಷ್ಯಾದ ವಾಯುಪಡೆಯಾದ ಬ್ಲಾಕ್ ಸೀ ಫ್ಲೀಟ್‌ನ ಯುದ್ಧಹಡಗು ಪೊಟೆಮ್ಕಿನ್‌ನ ನಾವಿಕರೇ ಈ ಚಲನಚಿತ್ರದ ಮುಖ್ಯಪಾತ್ರಧಾರರು. ಐಸೆನ್‌ಸ್ಟೈನ್ ಕಥಾವಸ್ತವನ್ನು ಐದು ವಿಭಾಗಗಳಾಗಿ ವಿಂಗಡಿಸಿದ್ದಾರೆ.

### ಮೊದಲನೇ ಭಾಗ : ನಾವಿಕರು ಮತ್ತು ಹುಳಗಳು

ರಷ್ಯಾದಲ್ಲಿ ಜರುಗುತ್ತಿರುವ ಕ್ರಾಂತಿಗೆ ಪೊಟೆಮ್ಕಿನ್‌ನ ನಾವಿಕರು ಸಹಾಯ ಮಾಡಬೇಕೆಂದು ಮತ್ಯುಶೆನ್ಕೊ (Matyushenko) ಮತ್ತು ವಕುಲಿನ್‌ಚಕ್ (Vakulinchuk) ಎಂಬ ಇಬ್ಬರು ನಾವಿಕರು ಮಾತನಾಡಿಕೊಳ್ಳುತ್ತಾರೆ. ಟೆಂಡ್ರ (Tendra) ಎಂಬ ದ್ವೀಪದಲ್ಲಿ ಹಡಗು ನಿಂತಾಗ, ಒಬ್ಬ ನಿದ್ರಿಸುತ್ತಿದ್ದ

ಅಕ್ಟೋಬರ್ ಮಹಾಕ್ರಾಂತಿ ಜರುಗಿದ ಸುಮಾರು ಹನ್ನೆರಡು ವರ್ಷಗಳ ಮುನ್ನ, ಅಂದರೆ ೧೯೦೫ರಲ್ಲಿ ರಷ್ಯಾದಲ್ಲಿ ತ್ಸಾರ್‌ಶಾಹಿ ವಿರುದ್ಧ ಮತ್ತು ಸಮಸಮಾಜದ ಸ್ಥಾಪನೆಗಾಗಿ ಒಂದು ಕ್ರಾಂತಿಯ ಪ್ರಯತ್ನ ನಡೆಯಿತು. ಅದು ಹಲವು ಕಾರಣಗಳಿಂದ ವಿಫಲವಾಯಿತು. ಇದಕ್ಕೆ ಸಂಬಂಧಿಸಿದ ಒಂದು ಘಟನೆಯನ್ನು ಆಧರಿಸಿ, 'ಬ್ಯಾಟಲ್‌ಶಿಪ್ ಪೊಟೆಮ್ಕಿನ್' ಚಲನಚಿತ್ರವನ್ನು ತಯಾರಿಸಲಾಯಿತು. ಚಲನಚಿತ್ರದ ವಸ್ತು ೧೯೦೫ರ ಜೂನ್‌ನಲ್ಲಿ ಜರುಗುವ ಘಟನೆಗಳ ಸುತ್ತ ಗಿರಕಿ ಹೊಡೆಯುತ್ತದೆ. ಇಂಪಿರಿಯಲ್ ರಷ್ಯಾದ ವಾಯುಪಡೆಯಾದ ಬ್ಲಾಕ್ ಸೀ ಫ್ಲೀಟ್‌ನ ಯುದ್ಧಹಡಗು ಪೊಟೆಮ್ಕಿನ್‌ನ ನಾವಿಕರೇ ಈ ಚಲನಚಿತ್ರದ ಮುಖ್ಯಪಾತ್ರಧಾರರು. ಐಸೆನ್‌ಸ್ಟೈನ್ ಕಥಾವಸ್ತುವನ್ನು ಐದು ವಿಭಾಗಗಳಾಗಿ ವಿಂಗಡಿಸಿದ್ದಾರೆ.



## ಹೊಸತು – ೨೦೧೮ ಜನವರಿ ಸಂಚಿಕೆ : ಓದುಗರ ವೇದಿಕೆ

ಆತ್ಮೀಯ ಹೊಸತು ಓದುಗ ಬಂಧುಗಳೇ,

ಜನವರಿ ೨೦೧೮ಕ್ಕೆ ನಿಮ್ಮ ಹೊಸತು ಪತ್ರಿಕೆಯ ವಿಶೇಷ ಸಂಚಿಕೆ ತಯಾರಿ ನಡೆದಿದೆ. ಈ ಸಂಚಿಕೆಯಲ್ಲಿ ಪ್ರತಿವರ್ಷದಂತೆ ಈ ವರ್ಷವೂ ಓದುಗರ ವೇದಿಕೆ ಇರಲಿದೆ. ಈ ಸಲದ ಓದುಗರ ವೇದಿಕೆಯ ವಿಷಯ : **'ಜಿ. ಎಸ್. ಟಿ. (ಸರಕು ಸೇವಾ ತೆರಿಗೆ) ನಿಮ್ಮ ಅನುಭವ, ಅಭಿಪ್ರಾಯ'**.

ಈ ಕುರಿತು ೧೫೦ ಪದಗಳೊಳಗೆ ಇರುವ ನಿಮ್ಮ ಬರಹ ೩೦ ನವೆಂಬರ್ ೨೦೧೭ರೊಳಗೆ ಹೊಸತು ಕಾರ್ಯಾಲಯಕ್ಕೆ ಕಳಿಸಬೇಕಾಗಿ ವಿನಂತಿ.

– ಸಂ.

ನಾವಿಕನ ಮೇಲೆ ಅಧಿಕಾರಿಯೊಬ್ಬ ದರ್ಪವನ್ನು ತೋರಿಸುತ್ತಾನೆ. ಗಲಾಟೆಯಾಗುತ್ತದೆ; ವಕುಲಿನ್‌ಚಕ್ ಎಚ್ಚರಗೊಂಡು – "ಸಂಗಾತಿಗಳೇ ! ನಾವು ಜೋರಾಗಿ ಮಾತನಾಡುವ ಸಮಯ ಬಂದಿದೆ. ಯಾತಕ್ಕಾಗಿ ನಾವು ಕಾಯಬೇಕು. ಇಡೀ ರಷ್ಯಾ ಜಾಗೃತಗೊಂಡಿದೆ. ನಾವೇ ಕೊನೆಯವರಾಗಬೇಕೇನು ?" ಎಂದು ತನ್ನ ಸಹ ನಾವಿಕರನ್ನು ಉದ್ದೇಶಿಸಿ ಮಾತನಾಡುತ್ತಾನೆ. ನಂತರ ಕೆಲವು ನಾವಿಕರು ಮಾಂಸದ ಕಳಪೆ ಗುಣಮಟ್ಟದ ಬಗೆಗೆ ಕ್ಯಾತೆ ತೆಗೆಯುತ್ತಾರೆ. ಮಾಂಸದ ತುಂಬ ಹುಳಗಳಿದ್ದು, ಅದು ಕೊಳೆತಿರುವಂತೆ ಕಂಡುಬರುತ್ತದೆ. ಹಡಗಿನ ವೈದ್ಯ ತೊಳೆದು ತಿನ್ನಬಹುದು ಎಂದು ಅಭಿಪ್ರಾಯ ನೀಡುತ್ತಾನೆ. ಅಡಿಗೆ ತಯಾರಿಸುವವನೂ ಮಾಂಸದ ಗುಣಮಟ್ಟದ ಬಗೆಗೆ ಚಕಾರ ಎತ್ತುತ್ತಾನೆ. ಆತ ಬದಲಿ ಖಾದ್ಯ ತಯಾರಿಸುತ್ತಾನೆ. ಆದರೆ ನಾವಿಕರು ಅದನ್ನು ಭುಜಿಸಲು ನಿರಾಕರಿಸುತ್ತಾರೆ. ನಾವಿಕರಲ್ಲಿ ಒಬ್ಬ ಪಾತ್ರೆಗಳನ್ನು ಶುಚಿಗೊಳಿಸುವಾಗ ಒಂದು ತಟ್ಟೆಯಲ್ಲಿ "ಇಂದು, ನಮಗೆ ನೀಡಬೇಕಿರುವ ದೈನಂದಿನ ಬ್ರೆಡ್ ನೀಡಿ" ಎಂದು ಬರೆದಿರುತ್ತದೆ. ಆತನಿಗೆ ಈ ಸಾಲು ಅರ್ಥವಾಗಿ, ತಟ್ಟೆಯನ್ನು ಒಡೆಯುತ್ತಾನೆ. ಇಲ್ಲಿಗೆ ದೃಶ್ಯ ಕೊನೆಗೊಳ್ಳುತ್ತದೆ.

**ಎರಡನೇ ಭಾಗ : ಡೆಕ್ ಮೇಲಿನ ನಾಟಕ**

ಮಾಂಸವನ್ನು ಸೇವಿಸಲು ನಿರಾಕರಿಸಿದ ನಾವಿಕರನ್ನು ಗುಂಡಿಕ್ಕಿ ಕೊಲ್ಲಲು ಒಬ್ಬ ಅಧಿಕಾರಿ ಆಜ್ಞೆ ನೀಡುತ್ತಾನೆ. ಈ ಕೆಲಸಕ್ಕಾಗಿ ಇರುವ ಪಡೆ ಸಜ್ಜಾಗುತ್ತದೆ. ಆದರೆ ವಕುಲಿನ್‌ಚಕ್ ರೈಫಲುಗಳನ್ನು ಬಳಸದಂತೆ ಮನವಿ ಮಾಡುತ್ತಾನೆ. ಅವರು ಅದಕ್ಕೆ ಸ್ಪಂದಿಸುತ್ತಾರೆ. ನಾವಿಕರು ಅಧಿಕಾರಿಗಳನ್ನು ಸದೆಬಡಿದು ಹಡಗನ್ನು ತಮ್ಮ ವಶಕ್ಕೆ ತೆಗೆದುಕೊಳ್ಳುತ್ತಾರೆ. ಸಾಗರದ ಮೀನುಗಳಿಗೆ ಭಕ್ಷ್ಯ ಸಿಗಲಿ ಎಂದು ನಾವಿಕರು ಹಡಗಿನ ವೈದ್ಯನನ್ನು ಸಾಗರಕ್ಕೆ ಒಗೆಯುತ್ತಾರೆ.

**ಮೂರನೇ ಭಾಗ : ಒಬ್ಬ ಮೃತ ವ್ಯಕ್ತಿ ನ್ಯಾಯಕ್ಕಾಗಿ ಕರೆ ನೀಡುತ್ತಾನೆ ?**

ಬಂಡಾಯ ಸಫಲವಾಗುತ್ತದೆ. ಆದರೆ ವಕುಲಿನ್‌ಚಕ್‌ನ ಹತ್ಯೆಯಾಗುತ್ತದೆ. ಪೊಟೆಮ್ಕಿನ್ ಒಡೆಸ್ಸಾ ಬಂದರನ್ನು ತಲುಪುತ್ತದೆ. ನಾವಿಕ ಸಂಗಾತಿಗಳು ವಕುಲಿನ್‌ಚಕ್‌ನ ಕಳೇಬರವನ್ನು ಹೊತ್ತೊಯ್ದು ಕಿನಾರೆಯಲ್ಲಿ ಒಂದು ಟೆಂಟ್‌ನಲ್ಲಿ ಇರಿಸುತ್ತಾರೆ. ಆತನ ಎದೆಯ ಮೇಲೆ "ಒಂದು ಸ್ಪೂನಿನ ಸೂಪಿಗಾಗಿ" ಎಂಬ ಸಾಲಿರುವ ಒಂದು ಪಟ್ಟಿಯನ್ನು ಪ್ರದರ್ಶಿಸುತ್ತಾರೆ. ಒಡೆಸ್ಸಾದ ಜನತೆ ನಾವಿಕರನ್ನು ಸ್ವಾಗತಿಸುತ್ತದೆ. ಆದರೆ ಅವರು ಪೊಲೀಸರ ಗಮನಕ್ಕೆ ತುತ್ತಾಗುತ್ತಾರೆ.

**ನಾಲ್ಕನೇ ಭಾಗ : ಒಡೆಸ್ಸಾ ಮೆಟ್ಟಿಲುಗಳು**

ಈ ಭಾಗದಲ್ಲೇ ಇಡೀ ಚಲನಚಿತ್ರದ ಅತ್ಯಂತ ಮಾರ್ಮಿಕ, ಘಾಸಿಗೊಳಿಸುವ ದೃಶ್ಯವಿದೆ. ಮೇಲಿನ ಮೆಟ್ಟಿಲುಗಳಿಂದ ಸೈನಿಕರು ನಿರಾಯುಧ ಪ್ರಜೆಗಳ ಮೇಲೆ ಗುಂಡು ಹಾರಿಸುತ್ತಾರೆ. ಅದರಲ್ಲಿ ಮಹಿಳೆಯರು, ಮಕ್ಕಳೂ ಇರುತ್ತಾರೆ. ಜನರು ಚೆಲ್ಲಾಪಿಲ್ಲಿಯಾಗಿ ಓಡುವುದು, ಒಬ್ಬ ಕಂದ ಇರುವ ತಳ್ಳುಗಾಡಿ ರಭಸವಾಗಿ ಮೆಟ್ಟಿಲುಗಳ ಮೂಲಕ ಜಾರುತ್ತ ಸಾಗುವುದು, ಗುಂಡಿಗೆ ಗುರಿಯಾಗುವ ಒಬ್ಬ ಮಹಿಳೆಯ ಕನ್ನಡಕ ಪುಡಿಯಾಗುವುದು, ಸೈನಿಕರ ಎತ್ತರ ಬೂಟುಗಳ ಕಾಲುಗಳ ಚಲನೆಗಳು, ಸಾವುಗಳು, ವೀಕ್ಷಕರನ್ನು ಅಲ್ಲಾಡಿಸಿಬಿಡುತ್ತವೆ.

**ಐದನೇ ಭಾಗ : ಒಬ್ಬರ ವಿರುದ್ಧ ಎಲ್ಲರೂ**

ತ್ಸಾರ್‌ನ ನೌಕಾಪಡೆಯನ್ನು ಎದುರಿಸಲು ಪೊಟೆಮ್ಕಿನ್‌ನ ನಾವಿಕರು ಸಜ್ಜಾಗುತ್ತಾರೆ. ಘರ್ಷಣೆ ಅನಿವಾರ್ಯ ಎಂಬ ಪರಿಸ್ಥಿತಿ ಉದ್ಭವವಾಗುತ್ತದೆ. ಆದರೆ ತ್ಸಾರ್‌ನ ನೌಕಾಪಡೆಯ ಸೈನಿಕರು ತಮ್ಮ ಸಂಗಾತಿಗಳ ಮೇಲೆ ಗುಂಡು ಹಾರಿಸುವುದಕ್ಕೆ ನಿರಾಕರಿಸುತ್ತಾರೆ. ಅವರು ಬಂಡಾಯಕೋರರ ಜೊತೆ ಸೇರುತ್ತಾರೆ, ಹಾಡುತ್ತಾರೆ, ಸಂತಸದಿಂದ ಜೋರಾಗಿ ಕೂಗುತ್ತಾರೆ. ಕೆಂಪು ವರ್ಣದ ಧ್ವಜಗಳು ಹಾರಾಡುವುದು ಕಂಡುಬರುತ್ತದೆ.

ಈ ಚಲನಚಿತ್ರ ತೆರೆಗೆ ಬಂದು ತೊಂಬತ್ತು ವರ್ಷಗಳ ಮೇಲಾದರೂ, ಈಗಲೂ ಇದರ ಬಗೆಗೆ ಚರ್ಚೆಗಳು, ವಾದ–ವಿವಾದಗಳು ಜರುಗುತ್ತಿವೆ. ರಷ್ಯಾದ ಮಹಾಕ್ರಾಂತಿ ಕುರಿತು ಪ್ರಚಾರ ನಡೆಸುವಂತಿದೆ ಈ ಚಲನಚಿತ್ರ ಎನ್ನುವುದು ಅನೇಕ ವಿಮರ್ಶಕರ ಅಂಬೋಣ. ಜೊತೆಗೆ ಇದು ಸಾರ್ವಕಾಲಿಕ ಶ್ರೇಷ್ಠ ಪ್ರಚಾರ ಚಲನಚಿತ್ರ ಎಂದೂ ಶ್ಲಾಘಿಸಿದ್ದಾರೆ. ಈ ಚಲನಚಿತ್ರದ ವಿಶೇಷ ಅಂಶಗಳೆಂದರೆ ಇದರ ಸಂಕಲನ



ಹುಳಗಳಿದ್ದ ಮಾಂಸವನ್ನು ವೀಕ್ಷಿಸುತ್ತಿರುವ ನಾವಿಕರು



ನಾವಿಕರು ತಟ್ಟೆಗಳನ್ನು ಶುಚಿಗೊಳಿಸುತ್ತಿರುವುದು



ನಾವಿಕರು ಅಧಿಕಾರಿಗಳನ್ನು ಸದೆಬಡಿದಿರುವುದು







ಮತ್ತು ವೈಯಕ್ತಿಕ ಪಾತ್ರಗಳನ್ನು ವಿಜೃಂಭಿಸದೆ, ಅವುಗಳನ್ನು ಸಾಮೂಹಿಕ ನೆಲೆಯಿಂದ ಕಟ್ಟಿಕೊಟ್ಟಿರುವ ಬಗೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಇಡೀ ಚಲನಚಿತ್ರದಲ್ಲಿ ಸಾಮೂಹಿಕ ಆಯಾಮ ಢಾಳಾಗಿ ವ್ಯಕ್ತವಾಗುತ್ತದೆ. ಉದಾಹರಣೆಗೆ, ನಾವಿಕರ ಒಗ್ಗಟ್ಟಿನ ಪ್ರತಿಕ್ರಿಯೆ, ಮುನ್ನಡೆಯುವ ತ್ಸಾರ್‌ಶಾಹಿ ಪಡೆಗಳು, ಒಡೆಸ್ಸಾ ಮೆಟ್ಟಿಲುಗಳಲ್ಲಿ ಪ್ರಾಣಾಪಾಯಕ್ಕೆ ಬೆದರಿ ದಿಕ್ಕಾಪಾಲಾಗಿ ಓಡುವ ನಾಗರಿಕರು, ವಕುಲಿನ್‌ಚಕ್ ಕಳೇಬರವನ್ನು ವೀಕ್ಷಿಸಲು ಬರುವ ಜನರ ಸಾಲು ಇತ್ಯಾದಿ. ಇವುಗಳ ಮೂಲಕ ಈ ಚಲನಚಿತ್ರ ಒಂದು ರಾಜಕೀಯ ಆಯಾಮವನ್ನು ಪಡೆದುಕೊಳ್ಳುತ್ತದೆ. ಕ್ರಾಂತಿಯಲ್ಲಿ ರಾಜಕೀಯ ಸಂಘಟನೆಯ ಪಾತ್ರದ ಬಗೆಗೆ ಸೂಚ್ಯವಾಗಿ ತಿಳಿಸುತ್ತದೆ. ಇಲ್ಲಿ ಪಾತ್ರಗಳ ಕಟ್ಟೋಣ ಕಪ್ಪು–ಬಿಳುಪು ರೀತಿಯಲ್ಲಿ ಮಾಡಲಾಗಿದೆ ಎಂದು ಭಾಸವಾಗುತ್ತದೆ. ಪೊಟೆಮ್ಕಿನ್ ಹಡಗಿನ ಕಮಾಂಡರ್ ತನ್ನ ಆಜ್ಞೆಯನ್ನು ಉಲ್ಲಂಘಿಸಿದ ನಾವಿಕರಿಗೆ ಸಾವಿನ ಶಿಕ್ಷೆಯನ್ನು ವಿಧಿಸಲು ಮುಂದಾಗುತ್ತಾನೆ. ಅವರನ್ನು ಹತ್ಯೆ ಮಾಡುವ ಸ್ವಲ್ಪ ಮುನ್ನ ಹಡಗಿನ ಪಾದ್ರಿಯ ಪ್ರವೇಶವಾಗುತ್ತದೆ. ಆತ ತ್ಸಾರ್‌ಶಾಹಿಯ ನಿರಂಕುಶ ಪ್ರಭುತ್ವದ ಜೊತೆ ಶಾಮೀಲಾಗಿರುತ್ತಾನೆ. ನಾವಿಕರ ಆಹಾರ ನಿರಾಕರಣೆಯ ನಿಲುವಿನ ಹಿಂದಿದ್ದ ಕಾರಣದ ಪರವಾಗಿರುವುದರ ಬದಲು ಆತ ಕಮಾಂಡರ್‌ನಿಂದ ಮುಂದೆ ನಡೆಯುವ ಹತ್ಯಾಕೃತ್ಯಗಳನ್ನು ಸಮರ್ಥಿಸುತ್ತಾನೆ. ಆತ ಶಿಲುಬೆಯನ್ನು ಹೊತ್ತಿರುತ್ತಾನೆ. ಇದು ಸಾಂಪ್ರದಾಯಿಕ ಚರ್ಚಿನ ನೈತಿಕ ದಿವಾಳಿಕೋರತನವನ್ನು ಸೂಚಿಸುತ್ತದೆ. ಅಲ್ಲದೆ ಪಾದ್ರಿ ವ್ಯಕ್ತಪಡಿಸುವ ಇನ್ನೊಂದು ಪ್ರತಿಕ್ರಿಯೆ ಕೂಡ ಗಮನಾರ್ಹ. ಸೈನಿಕರು ಗುಂಡಿಕ್ಕಲು ತಯಾರಾದಾಗ ವಕುಲಿನ್‌ಚಕ್ ಮಧ್ಯಪ್ರವೇಶಿಸುತ್ತಾನೆ. ದಂಗೆಯಾಗುತ್ತದೆ. ಅಧಿಕಾರಿಗಳನ್ನು ಸಾಗರಕ್ಕೆ ಎಸೆಯಲಾಗುತ್ತದೆ. ಹಡಗಿನಲ್ಲಿ ಸಾವಿನ ವಾತಾವರಣ. ನೆಲದಲ್ಲಿ ಕವುಚಿ ಬಿದ್ದ ಪಾದ್ರಿ ಮಾತ್ರ ತನಗೂ ತನ್ನ ಸುತ್ತಲು ಜರುಗುತ್ತಿರುವ ವಿದ್ಯಮಾನಗಳಿಗೂ ಸಂಬಂಧವಿಲ್ಲ ಎಂಬಂತಿರುತ್ತಾನೆ.

ಈಗ ಒಡೆಸ್ಸಾ ಮೆಟ್ಟಿಲುಗಳ ದೃಶ್ಯದತ್ತ ಪುನಃ ಗಮನ ಹರಿಸೋಣ... ಚಲನಚಿತ್ರದ ಗ್ರಾಮರ್‌ನ ಉತ್ಕೃಷ್ಟ ನಿದರ್ಶನ ಈ ದೃಶ್ಯ ಎಂಬುದು ಹಲವು ಚಲನಚಿತ್ರ ವಿಶೇಷಜ್ಞರ / ವಿಶ್ಲೇಷಕರ ಅಭಿಪ್ರಾಯ. ಬ್ಯಾಟಲ್‌ಶಿಪ್ ಪೊಟೆಮ್ಕಿನ್‌ನ ಒಳಗಿರುವ ಬಂಡಾಯ ಹೂಡಿದ ನಾವಿಕರಿಗೆ ಅವಶ್ಯವಿರುವ ವಸ್ತುಗಳನ್ನು ಸರಬರಾಜು ಮಾಡಲು ಸಣ್ಣ ದೋಣಿಗಳು ಅದರತ್ತ ಸಾಗುತ್ತವೆ. ಒಡೆಸ್ಸಾ ಮೆಟ್ಟಿಲುಗಳಲ್ಲಿನ ಬಂಡಾಯದ ಸಮರ್ಥಕರು ಬಂಡಾಯಗಾರರನ್ನು ಹುರಿದುಂಬಿಸುತ್ತಿರುತ್ತಾರೆ. ಆಗ 'ಹಠಾತ್ತನೆ' ಎಂಬ ಸಬ್‌ಟೈಟಲ್ ತೆರೆಯ ಮೇಲೆ ಮೂಡುತ್ತದೆ. ಮೆಟ್ಟಿಲುಗಳ ಮೇಲಿರುವ ಜನರ ನಡುವೆ ಭಾರಿ ಕೋಲಾಹಲ ಮೂಡುತ್ತದೆ. ಆ ಜನಸಮೂಹ ಏನು ನೋಡಿತು ಎಂಬುದನ್ನು ಸಿನಿಮಾ ವೀಕ್ಷಕ ವೀಕ್ಷಿಸುವುದಿಲ್ಲ. ಆದರೆ ಏನೋ ದೊಡ್ಡ ಅನಾಹುತ ಜರುಗಿದೆ ಎಂಬುದನ್ನು ಆತ ಆ ಜನರ ಪ್ರತಿಕ್ರಿಯೆಯಿಂದ ಅರಿಯಬಹುದು. ಎಲ್ಲರೂ ರಭಸವಾಗಿ ಮೆಟ್ಟಿಲುಗಳಿಂದ ಇಳಿಯಲು ತೊಡಗುತ್ತಾರೆ. ಹಿಂದಿನಿಂದ ಸೈನಿಕರು ಆಗಮಿಸುವುದನ್ನು ವೀಕ್ಷಕ ನೋಡುತ್ತಾನೆ. ಆತ ಸೈನಿಕರ ಮುಖಗಳನ್ನು ಕ್ಲೋಸ್‌ಅಪ್‌ನಲ್ಲಿ ವೀಕ್ಷಿಸುವುದಿಲ್ಲ. ಇದರರ್ಥ : ಅವರು ಪ್ರಭುತ್ವದ ಪರವಾಗಿ ಹತ್ಯೆ ಮಾಡುವ ವದನರಹಿತ ವ್ಯಕ್ತಿಗಳು, ಅಷ್ಟೇ. ಹಠಾತ್ತನೆ ಜನರು ನೆಲದ ಮೇಲೆ ಬೀಳುತ್ತಾರೆ. ಒಬ್ಬ ತಾಯಿಗೆ ತನ್ನ ಸಣ್ಣ ವಯಸ್ಸಿನ ಮಗ ಗುಂಡಿನ ದಾಳಿಗೆ ಗುರಿಯಾಗಿ ಅಸುನೀಗಿದ್ದಾನೆ ಎಂಬುದು ತಿಳಿಯುತ್ತದೆ. ಆ ಮಗುವಿನ ದೇಹವನ್ನೇ ತುಳಿಯುತ್ತಾ ತಮ್ಮನ್ನು ರಕ್ಷಿಸಿಕೊಳ್ಳಲು ಜನರು ಎಗ್ಗಾಮುಗ್ಗಾ ಓಡುತ್ತಾರೆ. ತಾಯಿ ತನ್ನ ಮಗನನ್ನು ಎತ್ತಿಕೊಂಡು ಮೆಟ್ಟಿಲುಗಳನ್ನು ಹತ್ತುತ್ತಾಳೆ. ನೆಲದಲ್ಲಿ ಹಲ್ಲುಗಳ ರೂಪದಲ್ಲಿ ಇಳಿಯುತ್ತಿರುವ ಸೈನಿಕರ ನೆರಳು ಮೂಡುತ್ತದೆ! ಅಂದರೆ ಆ ತಾಯಿ ಸಾವಿನ ದವಡೆಗಳತ್ತ ಸಾಗುತ್ತಿದ್ದಾಳೆ ಎಂಬ ಭಾವ ಸುಳಿಯುತ್ತದೆ. ಸೈನಿಕರು ಆಕೆಯನ್ನು ಕೊಲ್ಲುತ್ತಾರೆ. ಮೃತ ತಾಯಿ ಮತ್ತು ಕಂದನ ಮೇಲೆ ಬೂಟುಧಾರಿ ಸೈನಿಕರು ಅಡಿಯಿಟ್ಟು ಸಾಗಿ, ಅವರಿಗೆ ತಿಳಿಹೇಳುವ ಒಂದು ನಾಗರಿಕರ ಗುಂಪಿನ ಮೇಲೆ ಗುಂಡುಗಳ ಮಳೆಗರೆಯುತ್ತಾರೆ!

ಸೈನಿಕರು ಗುಂಡು ಹಾರಿಸುವುದನ್ನು ಮುಂದುವರೆಸುತ್ತಾರೆ. ಈ ಬಾರಿ ತಳ್ಳುಗಾಡಿಯನ್ನು ದೂಡುತ್ತಿರುವ ಒಬ್ಬ ತಾಯಿಯ ಮೇಲೆ ಗುಂಡುಗಳ ಪ್ರಯೋಗ ಮಾಡುತ್ತಾರೆ. ಆಕೆ ಕೆಳಗುರುಳುತ್ತಾಳೆ. ಹೀಗಾದಾಗ ತಳ್ಳುಗಾಡಿ ನೂಕಲ್ಪಡುತ್ತದೆ. ಮೆಟ್ಟಿಲುಗಳ ಕೊನೆಗೆ ಅದು ಸಾಗಿ, ನಿಂತುಕೊಳ್ಳುತ್ತದೆ. ಒಳಗಡೆ ಇರುವ ಮಗು ಬೀಳುವ ಹಂತದಲ್ಲಿರುತ್ತದೆ. ಆಗ ಸೈನಿಕರು ಕೆಳಗೆ ಬಿದ್ದಿದ್ದ ಗಾಯಗೊಂಡ ವ್ಯಕ್ತಿಯ ಮೇಲೆ ಗುಂಡುಹಾರಿಸುತ್ತಾರೆ. ಹಾಗೆಯೇ ಒಬ್ಬ ಸೈನಿಕ ರಕ್ತಸಿಕ್ತವಾಗಿರುವ ಒಬ್ಬ ಮಹಿಳೆಯನ್ನು ವಧಿಸಲು ತನ್ನ ಕತ್ತಿಯನ್ನು ಹಿಡಿದು ಮುಂದಾಗುತ್ತಾನೆ. ಆತನ ಕೈಯ ಚಲನೆಯನ್ನು ವಿಶಿಷ್ಟ ಬಗೆಯಲ್ಲಿ ಸಂಕಲನ ಮಾಡಲಾಗಿದೆ. ಕೈ ಮುಂದೆ ಮಾತ್ರ ಚಲಿಸುತ್ತದೆ; ಹಿಂದುಗಡೆ, ಮುಂದುಗಡೆ ಚಲಿಸುವುದಿಲ್ಲ. ಹೀಗೆ ತೋರಿಸುವುದರಿಂದ ಒಂದು ಹೆಚ್ಚಿನ ಹಿಂಸಾತ್ಮಕ ಬಿಂಬ ಮೂಡಿಬಂದಿದೆ.

ಐಸೆನ್‌ಸ್ಟೈನ್ ಈ ಚಲನಚಿತ್ರದಲ್ಲಿ ಬಳಸಿರುವ 'ಮಾಂಟಾಷ್' (Montage) ರೀತಿಯ ಸಂಕಲನ ವೀಕ್ಷಕರನ್ನು ತಲ್ಲಣಗೊಳಿಸುವಂತಿದೆ (ಭಿನ್ನಭಿನ್ನವಾಗಿ ತೆಗೆದ ದೃಶ್ಯಗಳನ್ನು ಯಾ ದೃಶ್ಯಾಂಶಗಳನ್ನು ಆರಿಸಿ, ಕತ್ತರಿಸಿ, ಒಂದು ಸಮಗ್ರ, ಸಂಕೀರ್ಣ ಕಲ್ಪನೆ ಮೂಡಿಸುವಂತೆ ಜೋಡಿಸುವುದಕ್ಕೆ ಮಾಂಟಾಷ್ ಎಂದು ಕರೆಯಲಾಗುತ್ತದೆ). ಪರಸ್ಪರ ವಿರುದ್ಧವಾಗಿರುವ ಎರಡು ಶಾಟ್‌ಗಳನ್ನು ಜೊತೆಗೂಡಿಸಿ, ವೀಕ್ಷಕರಲ್ಲಿ ಭಾವಪ್ರಧಾನ ಪ್ರತಿಕ್ರಿಯೆ ರೂಪಿಸುವುದೇ ಈ ತಂತ್ರದ ಉದ್ದೇಶ. ಐಸೆನ್‌ಸ್ಟೈನ್ ಈ ಬಗೆಯ ಭಿನ್ನ ಶಾಟ್‌ಗಳ ಘರ್ಷಿಸುವ ಕ್ರಿಯೆಯನ್ನು ಥೀಸಿಸ್ (Thesis) ಮತ್ತು ಆ್ಯಂಟಿಥೀಸಿಸ್‌ನ (Antithesis) ಪರಿಕಲ್ಪನೆಗೆ ಹೋಲಿಸುತ್ತಾನೆ. ಅಂದರೆ ಆತನ ಅಭಿಪ್ರಾಯದಲ್ಲಿ 'ಮಾಂಟಾಷ್' ಎನ್ನುವುದು ಮೂಲತಃ ಡೈಲೆಕ್ಟಿಕಲ್ ಹಾಗೂ ಇದು ಮಾರ್ಕ್ಸ್‌ವಾದಿ ಮತ್ತು ಹೆಗೆಲಿಯನ್ ತತ್ವಶಾಸ್ತ್ರದ ಪ್ರದರ್ಶಕ ಬೋಧನೆ. ಸೋವಿಯತ್ 'ಮಾಂಟಾಷ್'ನ ಆದ್ಯ ಪ್ರವರ್ತಕ ಲೆವ್ ಕುಲೆಶೊವ್ (Lev Kuleshov). ಆತನ ಜೊತೆಯಲ್ಲಿ ಐಸೆನ್‌ಸ್ಟೈನ್, ಪುಡೊವ್‌ಕಿನ್ (Pudovkin), ವರ್ಟೊವ್ (Vertov) ಮುಂತಾದವರು ತಮ್ಮದೇ ಆದ ರೀತಿಯಲ್ಲಿ 'ಮಾಂಟಾಷ್'ಅನ್ನು ಬಳಸಿದರು.

'ದಿ ಬೈಸಿಕಲ್ ಥೀವ್ಸ್', 'ಸಿಟಿಜ಼ನ್ ಕೇನ್' (Citizen Kane), 'ಟೋಕಿಯೊ ಸ್ಟೋರಿ', 'ದಿ ರೂಲ್ಸ್ ಆಫ್ ದಿ ಗೇಮ್' ಮುಂತಾದ ಚಲನಚಿತ್ರಗಳಿಗೆ ಸಾಟಿಯಾಗಿ ನಿಲ್ಲುವ 'ಬ್ಯಾಟಲ್‌ಶಿಪ್ ಪೊಟೆಮ್ಕಿನ್'ಅನ್ನು ವೀಕ್ಷಿಸಿ ಹಿಟ್ಲರ್ ಸರ್ಕಾರದಲ್ಲಿ ಪ್ರಚಾರ ಮಂತ್ರಿಯಾಗಿದ್ದ ಗೋಬೆಲ್ಸ್ "ಇದೊಂದು ಸರಿಸಾಟಿಯಿಲ್ಲದ ಚಲನಚಿತ್ರ... ಇದನ್ನು ವೀಕ್ಷಿಸಿದ ತರುವಾಯ ದೃಢವಾದ ರಾಜಕೀಯ ಸಂಕಲ್ಪವಿರದವನೂ ಒಬ್ಬ ಬೋಲ್ಶೆವಿಕನಾಗಿ(Bolshevik) ಪರಿವರ್ತಿತನಾಗುತ್ತಾನೆ" ಎಂದು ಉದ್ಗರಿಸಿದನಂತೆ!

*(ಆಧಾರ : ಕೆಲವು ಮೂಲಗಳಿಂದ)*

**ಮ. ಶ್ರೀ. ಮುರಳಿ ಕೃಷ್ಣ**
ನಂ. ೩೮, ೩ನೇ ಅಡ್ಡರಸ್ತೆ, ರಾಜಾ ಗಾರ್ಡನಿಯಾ ಬಡಾವಣೆ
ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು – ೫೬೦ ೦೬೧






**ಬಹುಜನ** (ಕಾದಂಬರಿ)

ಡಾ॥ ಶರಣಕುಮಾರ ಲಿಂಬಾಳೆ

**ಪುಟ : ೨೫೬**

**ಬೆಲೆ : ರೂ. ೨೦೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು–೫೬೦೦೦೧

ಇದು ನಮ್ಮ ದೇಶದ್ದೇ ಕಥೆ. ಕ್ರೌರ್ಯ ಮತ್ತು ರೌಡಿಸಂ ಮೇರೆ ಮೀರಿದ ಈ ಕಾದಂಬರಿಯಲ್ಲಿ ದಾದಾಗಳು, ಗೂಂಡಾಗಳು ತಮ್ಮ ಪಡೆ ಕಟ್ಟಿಕೊಂಡು ಸಮಾಜಘಾತುಕ – ವಿಧ್ವಂಸಕ ಕೃತ್ಯಗಳಲ್ಲಿ ಸದಾ ನಿರತರು. ತಮಗೆ ಅಡ್ಡಬರುವವರನ್ನು ಕ್ಷಣಾರ್ಧದಲ್ಲಿ ಹೊಸಕಿ ಹಾಕಬಲ್ಲರು. ಇಂಥ ಗೂಂಡಾಗಳಿಗೆ ಹೆದರಿ ಬೆದರಿ ಇನ್ನೇನೂ ಮಾಡಲಾಗದೆ ಅವರೊಂದಿಗೆ ಶಾಮೀಲಾಗಿರುವ ಪೊಲೀಸ್ ವ್ಯವಸ್ಥೆ. ಇನ್ನು ಈ ಗೂಂಡಾಗಳ ಜೊತೆಗಿರುವ ಹೆಂಗಸರಂತೂ ಪೊಲೀಸರನ್ನೂ, ಗೂಂಡಾಗಳನ್ನೂ ಒಟ್ಟಿಗೇ ಆಟ ಆಡಿಸುವ ಅಪಾಯಕಾರಿ ಪ್ರವೃತ್ತಿಯವರು. ಒಂದು ಕಡೆ ಹಿಂದುತ್ವ ಸ್ಥಾಪನೆಗಾಗಿ ಏನು ಮಾಡಲೂ ಹೇಸದ ಸಂಸ್ಕೃತಿ – ಪರಂಪರೆ ಪೋಷಕರು. ಇನ್ನೊಂದೆಡೆ ಅವರಿಗೆ ಸೆಡ್ಡು ಹೊಡೆದು ನಿಂತ ದಲಿತರು. ಮತ್ತೊಂದೆಡೆ 'ಯಾ ಅಲ್ಲಾ' ಎನ್ನುವ ಮುಸ್ಲಿಂ ಸಮುದಾಯ. ಜಾತಿ ಧರ್ಮ ವರ್ಗಗಳ ಸಂಘರ್ಷ. ಹತ್ಯೆ ಮಾಡುವ ಸಂಚು ರೂಪಿಸುವ ಧೂರ್ತ ಸ್ವಾಮೀಜಿ. ಮನುಷ್ಯನ ವಧೆ ಇಲ್ಲಿ ಉಸಿರಾಟದಷ್ಟೇ ಸರಾಗ. ಇದರ ಮಧ್ಯೆ ಇದ್ದೂ ಇಲ್ಲದಂತಿರುವ ಸರಕಾರ. ಇಂಥ ಸರಕಾರದ ಇಲಾಖೆಗಳಲ್ಲಿ ನುಸುಳಿ ಆಯಕಟ್ಟು ಜಾಗ ಪಡೆದು ಸಾಚಾಗಳಂತೆ ವರ್ತಿಸುತ್ತ ಬುಡಕ್ಕೇ ಕೊಡಲಿ ಇಡುವ ನಯವಂಚಕರು ! ಒಟ್ಟಾರೆ "ಸರಕಾರದಲ್ಲಿ ಬುದ್ಧಿವಂತರಿಲ್ಲ; ಸರಕಾರದ ಹೊರಗೆ ದಡ್ಡರಿಲ್ಲ !!" ಎಂಬಂತಾಗಿದೆ ಸ್ಥಿತಿ. ಸರಕಾರದ ಹೊರಗಿರುವುದು ಅಪಾಯಕಾರಿ ಬುದ್ಧಿವಂತರು !!! ಅಬ್ಬಾ, ಇಡೀ ದೇಶವೇ ಇಲ್ಲಿದೆ. ಯಾಕಾದರೂ ಈ ದೇಶದಲ್ಲಿ ಇರುವೆವೊ ಎಂದು ಹಲುಬುವ ಶ್ರೀ ಸಾಮಾನ್ಯನ ಪಾಡು ? ಇದು ಕಥೆಯ ತಿರುಳು.

– **ಇಂದಿರಾಕುಮಾರಿ,** ಯಶವಂತಪುರ, ಬೆಂಗಳೂರು – ೨೨



**ಚಿವುಟಿದಷ್ಟೂ ಚಿಗುರು** (ಸಣ್ಣ ಕತೆಗಳು) ಡಾ॥ ಎಚ್. ಎಸ್. ಅನುಪಮಾ

**ಪುಟ : ೨೦೮** **ಬೆಲೆ : ರೂ. ೧೫೦**

**ಲಡಾಯಿ ಪ್ರಕಾಶನ,** # ೨೧, ಪ್ರಸಾದ್ ಹಾಸ್ಟಲ್, ಗದಗ – ೫೮೨ ೧೦೧

ಡಾ॥ ಎಚ್.ಎಸ್. ಅನುಪಮಾ ಅವರ ಹದಿನೆಂಟು ಕಥೆಗಳ ಸಂಕಲನ "ಚಿವುಟಿದಷ್ಟೂ ಚಿಗುರು." ವೃತ್ತಿಯಿಂದ ವೈದ್ಯೆಯಾದ ಅನುಪಮಾ ಅವರ ಕಥೆಗಳಲ್ಲಿ ಅವರ ವೈದ್ಯಲೋಕದ ಅನುಭವದ ಹಲವಾರು ಮುಖಗಳು ಚಿತ್ರಿತವಾಗಿವೆ. ಅವರ ಕಥಾಲೋಕದ ಕ್ಯಾನ್‌ವಾಸ್ ಅತ್ಯಂತ ದೊಡ್ಡದು. ಹೆಣ್ಣಿನ ಮೇಲಿನ ಅತ್ಯಾಚಾರ, ಜಾತಿ ವೈಷಮ್ಯ, ದುಡಿಮೆಗಾಗಿ ವಲಸೆ, ದನದ ರಾಜಕೀಯ, ನೆರೆ ಪ್ರವಾಹದ ಸಂಕಟಗಳು, ಜನಸಾಮಾನ್ಯರಿಗೆ ಬರುವ ಹಲವು ರೀತಿಯ ಕಾಯಿಲೆಗಳು, ಎಲ್ಲವನ್ನೂ ಅವರು ಕತೆಯಾಗಿಸುವ ಪರಿ ಅನನ್ಯವಾದದ್ದು. 'ಜಾತಿ' ವ್ಯವಸ್ಥೆಯ ಸಾಮಾಜಿಕ ಕ್ರೂರ ವಾಸ್ತವವನ್ನು ಬಿಚ್ಚಿಡುವ ಇಲ್ಲಿನ ಕತೆಗಳು ಸಮಸ್ಯೆಯ ಮೂಲ ಎಲ್ಲಿದೆ ಎಂಬುದರತ್ತ ಬೊಟ್ಟು ಮಾಡುತ್ತವೆ. ಶ್ರಮವನ್ನೇ ನಂಬಿ ಬದುಕುವ ಕೆಳಸ್ತರದ ಹೆಣ್ಣುಗಳ ಚೈತನ್ಯಶೀಲತೆಗೆ ಕಾರಣವಾಗುವ ಅವರ ದುಡಿಮೆಯ ಹಲವಾರು ಸ್ವರೂಪಗಳ ಕಥೆಗಳು ಇಲ್ಲಿವೆ. ಮಾಧ್ಯಮಗಳ ಬೆಳಕಿನಲ್ಲಿ ವಿರೂಪಗೊಳ್ಳುವ ಜನಸಾಮಾನ್ಯರ ನೋವುಗಳು, ಕಾನೂನಿನ ಹಂದರದ ಕೆಳಗೇ ಅಟ್ಟಹಾಸಗೈಯ್ಯುವ ಹಿಂಸೆ, ದೌರ್ಜನ್ಯಗಳು, ಹೆಣ್ಣಿನ ಖಾಸಗಿ ಬದುಕಿನ ಹತ್ತಾರು ಸೂಕ್ಷ್ಮಗಳು ಇಲ್ಲಿ ಕತೆಗಳಾಗಿವೆ. ಅದರ ಜೊತೆಗೆ ಅನುಪಮಾ ಅವರ ವ್ಯಕ್ತಿತ್ವದ ಮೂಲ ಸತ್ವ ಅವರೊಬ್ಬ ಹೋರಾಟಗಾರ್ತಿ. ಇದು ಇವರ ಕತೆಗಳಲ್ಲಿ ದಟ್ಟವಾಗಿ ಮೂಡಿ ಬಂದಿದೆ. "ಇನ್ನು ಇಳಾ ಆಗಿ ಉಳಿಯುವುದು ಸಾಧ್ಯವಿಲ್ಲ" ಎನ್ನುವ ಕತೆಯಲ್ಲಿ ಪ್ರಸಿದ್ಧ ಹೋರಾಟಗಾರ್ತಿ ಶರೋಮ್ ಇರ್ಮಿಳಾ ಅವರ ಬದುಕನ್ನು ನೆನಪಿಸುವ ಕತೆಯಲ್ಲಿ ಸಾಮಾಜಿಕ ಹೋರಾಟಗಳು ತಮ್ಮ ಮೂಲ ಸತ್ವವನ್ನು ಕಳೆದುಕೊಂಡು ಗೀಳಾಗಿ ಪರಿವರ್ತಿತವಾಗಬಾರದೆನ್ನುವ ಎಚ್ಚರವನ್ನು ಕಾಣಬಹುದಾಗಿದೆ. ಹೆಣ್ಣಿನ ಅಂತಸ್ಸತ್ವವನ್ನು ಮತ್ತು ಅನನ್ಯತೆಯನ್ನು ಅಭಿವ್ಯಕ್ತಿಸುವ ಅವರ ಸ್ತ್ರೀಪಾತ್ರಗಳಾದ 'ಬನದ ಕರಡಿ'ಯ ದೇವಿ, 'ಚಿವುಟಿದಷ್ಟೂ ಚಿಗುರು' ಕತೆಯ ಅರುಂಧತಿ, 'ದೋಣಿ ಸಾಗಲಿ'ಯ ಕನ್ನೆ, ಇವು ನಿರಂತರವಾಗಿ ಓದಿನ ನಂತರವೂ ಕಾಡುವ ಪಾತ್ರಗಳಾಗಿವೆ.



**ಬಚ್ಚೀಸು** (ಕತೆಗಳು) ದು. ಸರಸ್ವತಿ

**ಪುಟ : ೯೬** **ಬೆಲೆ : ರೂ. ೮೦**

**ಕವಿ ಪ್ರಕಾಶನ,** ಹೊನ್ನಾವರ ತಾ॥, ಕವಲಕ್ಕಿ – ೫೮೧ ೩೬೧

ಮಹಿಳಾ ಹಕ್ಕುಗಳ ಹೋರಾಟಗಾರ್ತಿ, ಕತೆಗಾರ್ತಿ, ಕವಯಿತ್ರಿ, ವೈಚಾರಿಕ ಬರಹಗಾರ್ತಿ ದು. ಸರಸ್ವತಿಯವರ ಚೊಚ್ಚಲ ಕಥಾ ಸಂಕಲನವಿದು. ಇಲ್ಲಿರುವುದು ಎಂಟೇ ಕಥೆಗಳಾದರೂ ಇವು ಕನ್ನಡ ಕಥನ ಪರಂಪರೆಗೆ ದಲಿತ ಅನುಭವದ ಹಲವಾರು ಆಯಾಮಗಳನ್ನು ಪರಿಚಯಿಸುವ ಅರ್ಥಪೂರ್ಣ ಕಥೆಗಳಾಗಿವೆ. ಅಸಂಘಟಿತ ಕಾರ್ಮಿಕರ, ಅದರಲ್ಲೂ ವಿಶೇಷವಾಗಿ ಪೌರ ಕಾರ್ಮಿಕರ ನಡುವೆ ಸಂಘಟನೆಯ ಕಾರ್ಯದಲ್ಲಿ ತೊಡಗಿರುವ ದು. ಸರಸ್ವತಿಯವರು ತಮ್ಮ ಕಾರ್ಯಕ್ಷೇತ್ರದ ಅನುಭವವನ್ನು ಇಲ್ಲಿ ಕತೆಗಳಲ್ಲಿ ಮೂಡಿಸಿದ್ದಾರೆ. ಸಂಘಟನೆಯ ಸಂದರ್ಭದಲ್ಲಿ ಹುಟ್ಟಿಕೊಳ್ಳುವ ಹತ್ತಾರು ಸಿಕ್ಕುಗಳು ಮತ್ತು ಅವು ಪಡೆದುಕೊಳ್ಳುವ ಪರಿಹಾರಗಳು ಜೀವನದ ಬಗ್ಗೆ ವಿಸ್ಮಯವನ್ನು ಮತ್ತು ತಿಳಿವನ್ನು ಏಕಕಾಲಕ್ಕೆ ಕಟ್ಟಿಕೊಡುವ ಪರಿ ಅನನ್ಯವಾದದ್ದು. ಜಾತಿ ವ್ಯವಸ್ಥೆಯ ದುಷ್ಪರಿಣಾಮದ ಗ್ರಹಿಕೆಯ ನೆಲೆಯೇ ಬೇರೆ, ಜಾತಿಯ ಗ್ರಹಿಕೆ ಕಟ್ಟಿಕೊಡುವ ಭಾವನಾತ್ಮಕ ಜಗತ್ತೇ ಬೇರೆ ಎನ್ನುವಂತೆ ಇಲ್ಲಿನ ಕತೆಗಳ ಅಭಿವ್ಯಕ್ತಿ ಕುತೂಹಲಕಾರಿಯಾಗಿವೆ. ಹುಟ್ಟಿದ ಮಗುವಿನ ಬಲಗೈಯಲ್ಲಿ ಎರಡೇ ಬೆರಳಿರುವುದಕ್ಕೆ ತಾಯಿಯು ದುಃಖಪಡುತ್ತಿದ್ದರೆ, ಅವಳನ್ನು ಸಂತೈಸುವ 'ಬಚ್ಚೀಸು' ಕಥೆಯ ಆಂಜಿನಮ್ಮನ ಮಗಳು "ಈ ಮಗನ ಈಸ್ಕೂಲ್‌ಗೆ ಕಳ್ಸೇ ತೀರ್ಬೇನಿ, ಯಾಕೇಳು ? ಅದ್ಕಿರ ಎಲ್ಡ್ ಬೆಳ್‌ನಾಗೆ ಪೆನ್ನೆ ಇಡ್ಕಕಾಗಾದು; ಪರ್ಕೆನಲ್ಲ. ಆ ದ್ಯಾವ್ರು ಕೊಟ್ಟಿರೂ ಬಚ್ಚೀಸು. ನಾನ್ಯಾಕೆ ಬ್ಯಾಡ ಅನ್ಲಿ !" ಎನ್ನುವ ಕತೆಯ ತಣ್ಣನೆಯ ಕ್ರೂರ ವ್ಯಂಗ್ಯ ಇಲ್ಲಿನ ಹಲವಾರು ಕತೆಗಳಲ್ಲಿ ಮೂಡಿಬಂದಿದೆ. ಸಮಾಜದ ನಿಷ್ಠುರ ವಾಸ್ತವಕ್ಕೆ ಮುಖಾಮುಖಿಯಾಗುವ ಇವರ ಕಥೆಗಳು ಜಾತಿ ಮತ್ತು ಜೆಂಡರ್ ಅಸ್ಮಿತೆಯನ್ನು ಪ್ರಜ್ಞೆಯ ಅತ್ಯಂತ ಆಳವಾದ ಸ್ತರದಲ್ಲಿ ಗ್ರಹಿಸುವ ಮತ್ತು ವಿವೇಚಿಸುವ ಪ್ರಯತ್ನವನ್ನು ಮಾಡುತ್ತವೆ.

– **ಎನ್. ಆಶಾ,** ಗವೀಪುರ, ಬೆಂಗಳೂರು–೫೬೦ ೦೧೯



**ಭೂತ ವರ್ತಮಾನದ ವೇಷ ತಟ್ಟಿತ್ತು** (ಕವನ ಸಂಕಲನ) ಎ. ಎಂ. ಜಯಶ್ರೀ

**ಪುಟ : ೧೦೦** **ಬೆಲೆ : ರೂ. ೯೦**

**ಶ್ರೀ ಗೌರಿ ಪ್ರಕಾಶನ,** ಬಳ್ಳಾರಿ

ಭೂತ ವರ್ತಮಾನದ ವೇಷ ಕಟ್ಟಿತ್ತು, ಬಳ್ಳಿಯ ನಿವೇದನೆ, ದೇವನಭಿರುಚಿ, ಕಾವ್ಯಧರ್ಮ, ಹಾಲಾಹಲ ಬಿಂದು ಎಂಬ ಆಕರ್ಷಕ ಶೀರ್ಷಿಕೆಯ ವಿಭಿನ್ನ ವಸ್ತುಗಳ ಆಯ್ಕೆಯಿಂದ ಕವಯಿತ್ರಿಯು ಕಾಳಜಿಯ ಕಾವ್ಯ ಹಾರವನ್ನು ಓದುಗರ ಕೊರಳಿಗೆ ಅರ್ಪಿಸಿದ್ದಾರೆ. ನಿಸರ್ಗದ ಚೆಲುವು ಮತ್ತು ಹರವುಗಳನ್ನು 'ಓಂಕಾರ ನಾದ' 'ಸಾಗರ' ಮುಂತಾದ ಕವಿತೆಗಳಲ್ಲಿ ಸೊಗಸಾಗಿ ಚಿತ್ರಿಸಿದರೆ; ಏನು ಬೇಕು ಬದುಕಿಗೆ ? ಎಂದು ಪ್ರಶ್ನಿಸುತ್ತಲೇ ಪ್ರೀತಿ ಬೇಕು ಬದುಕಿಗೆ ಎಂಬ ಮಾರ್ಮಿಕವಾದ ಕವಿಸಾಲನ್ನು ಇಲ್ಲಿ ನೀಡುತ್ತಾರೆ. ಆಧುನಿಕ ಜೀವನಶೈಲಿಯಲ್ಲಿ ಬಳಸಿ ಬಿಸಾಡುವ ಸಂಸ್ಕೃತಿಗೆ, ಗಣಿಗಾರಿಕೆ ಮತ್ತಿತರ ಪ್ರಕೃತಿಯ ಮೇಲಿನ ಹಲ್ಲೆಯ ಬಗ್ಗೆ ಆಕ್ರೋಶ ವ್ಯಕ್ತಪಡಿಸುವ ಕವಯಿತ್ರಿ, ಭುವಿಯ ಸಂಪನ್ಮೂಲಗಳನ್ನು ಮಿತ – ಹಿತವಾಗಿ ಬಳಸುವ ಸಂದೇಶ ರವಾನಿಸುತ್ತಾರೆ. 'ಆತ್ಮಶ್ರೀ ಅಕ್ಕ'ದಲ್ಲಿ ಅಕ್ಕ ಮಹಾದೇವಿಯ ದಿಟ್ಟತನ, 'ಅಕ್ಷರದುಡುಗೊರೆ'ಯಲ್ಲಿ ತನ್ನ ಅಜ್ಜಿಯ ಜೀವನ ಪ್ರೀತಿ, 'ಸಣ್ಣಮ್ಮ'ದಲ್ಲಿ ಗೆಳತಿಯ ದುರಂತ ಬದುಕು ಮತ್ತು ಛಲ, ತನ್ನ ವಿದ್ಯಾರ್ಥಿ 'ಮೀನಾಕ್ಷಿ'ಯಲ್ಲಿ ಓದುವ ಅದಮ್ಯೋತ್ಸಾಹ, 'ಸ್ತುತಿ ಪದ್ಯ'ದಲ್ಲಿ ಮಗಳ ಲಾಲಿತ್ಯಗಳನ್ನು ಸುಂದರವಾಗಿ ಸೆರೆಹಿಡಿದು ಓದುಗರ ಮೇಲೆ, ಈ ವ್ಯಕ್ತಿಚಿತ್ರಗಳು ವಿಶೇಷ ಭಾವವನ್ನು ಮೂಡಿಸುತ್ತವೆ. ಒಟ್ಟಾರೆಯಾಗಿ ೬೮ ಕವಿತೆಗಳನ್ನೊಳಗೊಂಡ ಈ ಕೃತಿ, ಕವಯಿತ್ರಿಯ ನಾಲ್ಕನೇ ಸಂಕಲನವಾಗಿದೆ. ನವಿರಾದ ಭಾಷೆ, ಸಹಜವಾಗಿ ಒಡಮೂಡುವ ಭಾವ ಈ ಸಂಕಲನದ ವೈಶಿಷ್ಟ್ಯಗಳಾಗಿವೆ. 'ಮೇಲಿನಿಂದ ಬೀಳುವ ಹನಿಗೆ / ನೆಲದಾಯ್ಕೆಯ ಪ್ರಶ್ನೆಯಿಲ್ಲ' ಎನ್ನುವ ಕವಯಿತ್ರಿ ಓದುಗರನ್ನು ಹಲವು ಬಗೆಯಲ್ಲಿ ಗಾಢವಾಗಿ ಚಿಂತಿಸುವತ್ತ ಪ್ರೇರೇಪಿಸಿದ್ದಾರೆ.

– **ಎಸ್. ಮಂಜುನಾಥ,** ಬಳ್ಳಾರಿ




# ಸೈನಿಕನ ಮಗ

ಅವಾಲ್‌ಬೈಕ್‌ಗೆ ಈಗ ತನ್ನ ಜೀವನದಲ್ಲಿ ಮೊದಲ ಬಾರಿಗೆ ಪಿತೃವಿಯೋಗದ ಅರಿವಾಗಿತ್ತು. ಯುದ್ಧದಲ್ಲಿ ನೆಲಕ್ಕುರುಳಿದ ತಂದೆಯನ್ನು ನೆನೆದು, ತಾಳಲು ಅಸಾಧ್ಯವಾದ ವೇದನೆ, ದುಃಖ ಉಮ್ಮಳಿಸಿತು. ಅವನಿಗೆ ತಾಯಿಯನ್ನು ಅಪ್ಪಿಕೊಂಡು ಗಳಗಳ ಅಳಬೇಕೆನ್ನಿಸಿತು. ತಾಯಿಯೂ ತನ್ನ ಜೊತೆ ಅಳಬೇಕೆಂಬ ಬಯಕೆ ಉಂಟಾಯಿತು. ಆದರೆ ಅವಳು ಮೌನವಾಗಿದ್ದಳು. ಆದುದರಿಂದ ಅವನು ಕೂಡ ಮುಷ್ಟಿ ಬಿಗಿಹಿಡಿದು ಕಂಬನಿಯನ್ನು ಕಷ್ಟಪಟ್ಟು ತಡೆದು ಮುನ್ನಡೆದ.

ಮೂಲ : ಜಿಂಗೀಜ್ ಐತ್‌ಮಾತವ್

ಅನುವಾದ : ಕೆ. ಎಸ್. ನಿಸಾರ್ ಅಹಮದ್

ಅವನು ತನ್ನ ತಂದೆಯನ್ನು ಮೊದಲ ಬಾರಿ ನೋಡಿದ್ದು ಸಿನಿಮದಲ್ಲಿ. ಆಗ ಅವನಿಗೆ ಐದು ವರ್ಷ. ಅವನ ಹೆಸರು ಅವಾಲ್‌ಬೈಕ್.

ಇದು ನಡೆದದ್ದು ಆ ಊರಿನ ದೊಡ್ಡ, ಬಿಳಿ ಬಣ್ಣದ ಕುರಿಹಟ್ಟಿಯಲ್ಲಿ. ವರ್ಷಕ್ಕೊಮ್ಮೆ ಕುರಿಮಂದೆಗಳ ಉಣ್ಣೆ ಕತ್ತರಿಸಲು ಉಪಯೋಗಿಸಲಾಗುತ್ತಿದ್ದ ಆ ರೊಪ್ಪದಲ್ಲಿ ಸಿನಿಮ ತೋರಿಸುವ ವಾಡಿಕೆಯಿತ್ತು. ಪದರಕಲ್ಲುಗಳ ಛಾವಣಿಯಿರುವ ವಿಶಾಲವಾದ ಆ ರೊಪ್ಪ ಈಗಲೂ ಇದೆ. ಸರಕಾರೀ ಕೃಷಿಕ್ಷೇತ್ರದ ರೈತರ ವಸತಿಗಳಿಂದ ಆಚೆಗೆ, ಬೆಟ್ಟದಡಿಯ ದಾರಿ ಬದಿಯಲ್ಲಿ ಅದು ನಿಂತಿದೆ.

ಆ ಹುಡುಗನ ತಾಯಿಯ ಹೆಸರು ಜೇಯೆಂಗುಲ್. ಆಕೆ ಸರಕಾರೀ ಕೃಷಿಕ್ಷೇತ್ರದ ಅಂಚೆ ಕಛೇರಿಯಲ್ಲಿ ಟೆಲಿಫೋನ್ ಕಾರ್ಯ ನಿರ್ವಾಹಕಿಯಾಗಿದ್ದಳು. ಪ್ರತಿ ಬೇಸಿಗೆಯಲ್ಲೂ ಉಣ್ಣೆ ಕತ್ತರಿಸುವ ಕಾಲದಲ್ಲಿ ಅವಳು ಈ ರೊಪ್ಪಕ್ಕೆ ಬರುತ್ತಿದ್ದಳು. ತನಗೆ ದಕ್ಕಿದ ರಜೆಗಳನ್ನೂ ಬಿತ್ತನೆಯ ಕಾಲದಲ್ಲಿ ಮತ್ತು ಕುರಿಗಳು ಮರಿಯಿಡುವ ಸಮಯದಲ್ಲಿ ಸ್ವಿಚ್ ಬೋರ್ಡಿನ ಮುಂದೆ ಹಗಲಿರುಳೆನ್ನದೆ ಅಧಿಕ ವೇಳೆ ದುಡಿದದ್ದರಿಂದ ಪಡೆದ ವಿರಾಮ ದಿನಗಳನ್ನೂ ಕೂಡಿಸಿ, ಇಲ್ಲಿಗೆ ಬಂದು ಉಣ್ಣೆ ಕತ್ತರಿಸುವ ಕೊನೆಯ ದಿನದವರೆಗೆ ಸಹಾಯಕಳಾಗಿ ಕೆಲಸಮಾಡಿ ಹಣ ಸಂಪಾದಿಸುತ್ತಿದ್ದಳು. ಇದು ಬಿಡಿ ಕೆಲಸವಾಗಿದ್ದು ಹಣ ಕೈತುಂಬ ಗಿಟ್ಟುತ್ತಿತ್ತು. ಜೇಯೆಂಗುಲ್, ಗಂಡನನ್ನು ಯುದ್ಧದಲ್ಲಿ ಕಳೆದುಕೊಂಡ ವಿಧವೆ. ಮನೆಯಲ್ಲಿ ಅವಳು ಮತ್ತು ಸಣ್ಣವಯಸ್ಸಿನ ಮಗ ಅವಾಲ್‌ಬೈಕ್ ಇಬ್ಬರೇ ಇದ್ದರೂ ಖರ್ಚೇನೂ ಕಡಿಮೆ ಇರುತ್ತಿರಲಿಲ್ಲ. ಸಂಸಾರವೆಂದಮೇಲೆ, ಚಿಕ್ಕದಾಗಿರಲಿ ದೊಡ್ಡದಾಗಿರಲಿ, ಖರ್ಚಿಗೆ ಕೊರತೆಯೇ ? ಚಳಿಗಾಲಕ್ಕೆ ಕಟ್ಟಿಗೆ, ಬೆಲೆ ದುಬಾರಿಯಾಗುವುದಕ್ಕೆ ಮುಂಚೆ ರೊಟ್ಟಿಯ ಹಿಟ್ಟು, ಬಟ್ಟೆಬರೆ, ಪಾದರಕ್ಷೆ – ಹೀಗೆ ಹಲವಾರು ಪದಾರ್ಥಗಳನ್ನು ಕೊಳ್ಳಲೇಬೇಕಷ್ಟೆ ?

ಮನೆಯಲ್ಲಿ ಮಗನನ್ನು ಬಿಟ್ಟು ಬಂದರೆ ಅವನನ್ನು ನೋಡಿಕೊಳ್ಳಲು ಯಾರೂ ಇರುತ್ತಿರಲಿಲ್ಲ. ಆದ್ದರಿಂದ ಅವಳು ಪ್ರತಿದಿವಸ ಬೆಳಿಗ್ಗೆ ಅವಾಲ್‌ಬೈಕ್ ನನ್ನು ತನ್ನ ಸಂಗಡ ರೊಪ್ಪಕ್ಕೆ ಕರೆದುಕೊಂಡು ಬರುತ್ತಿದ್ದಳು. ಅವಳು ಕೆಲಸದಲ್ಲಿ ತೊಡಗಿದ್ದಾಗ, ಮಗ ಬಟ್ಟೆ ಕೊಳಕು ಮಾಡಿಕೊಂಡು, ಉಣ್ಣೆ ಕತ್ತರಿಸುವವರ, ಕುರುಬರ, ಜೂಲುನಾಯಿಗಳ ಜೊತೆ ಓಡಾಡಿಕೊಂಡಿರುತ್ತಿದ್ದ.

ಸಿನಿಮದ ಪ್ರೊಜೆಕ್ಟರ್, ರೀಲು ಇತ್ಯಾದಿಗಳನ್ನು ತಂದಿದ್ದ ವಾಹನವನ್ನು ಮೊತ್ತಮೊದಲು ಗುರುತಿಸಿ ಆ ಸುದ್ದಿಯನ್ನು ಅವಾಲ್‌ಬೈಕ್ ಸುತ್ತ ಸಾರಿದ್ದ : "ಸಿನಿಮ ವಾಹನ ಬಂದಿದೆ ! ಸಿನಿಮ ವಾಹನ ಬಂದಿದೆ !"

ಹಗಲು ಮುಗಿದು ಕತ್ತಲಾವರಿಸುವವರೆಗೂ ಅವನು ಕಾಯುತ್ತ ಚಡಪಡಿಸಿದ್ದ. ಹಾಗವನು ಕಾದದ್ದು ವ್ಯರ್ಥವಾಗಿರಲಿಲ್ಲ. ಏಕೆಂದರೆ ಅವೊತ್ತು ತೋರಿಸಲಿದ್ದುದು ಯುದ್ಧದ ಸಿನಿಮ.

ರೊಪ್ಪದೊಳಗಿನ ಎರಡು ಕಂಬಗಳಿಗೆ ಬಿಳಿಪರದೆ ಕಟ್ಟಲಾಗಿತ್ತು. ಸಿನಿಮ ಶುರುವಾದಾಗ, ಭಯಂಕರವಾಗಿ ನಡೆಯುತ್ತಿದ್ದ ಯುದ್ಧದ ದೃಶ್ಯ ಪರದೆಯ ಮೇಲೆ ಕಾಣಿಸಿತು. ಸಿಡಿಮದ್ದಿನಿಂದ ಹರಿದುಹೋದಂತಿದ್ದ ಕಗ್ಗತ್ತಲೆಯಲ್ಲಿ, ಎಲ್ಲೆಲ್ಲೂ ಜ್ವಾಲೆ, ಗುಂಡಿನ ಸದ್ದು ಕವಿದಿತ್ತು. ಮುಂಚೂಣಿಯಲ್ಲಿದ್ದ ರಕ್ಷಕರು ನೆಲಕಚ್ಚಿ ಒರಗಿದ್ದರು. ಕೋರೈಸುವ ಜ್ವಾಲೆಯ ಬೆಳಕು ತಗ್ಗಿದೊಡನೆ ಅವರೆದ್ದು ಮುನ್ನುಗ್ಗುತ್ತಿದ್ದರು. ಮೆಷಿನ್‌ಗನ್ನುಗಳ ಸತತ ಸದ್ದಿಗೆ ಹುಡುಗನ ಎದೆ ತಲ್ಲಣಿಸಿಹೋಗಿತ್ತು. ಇಂಥ ಭೀಕರ ಯುದ್ಧದ ದೃಶ್ಯವನ್ನು ಅವನು ಕಂಡೇ ಇರಲಿಲ್ಲ.

ತಾಯಿಯ ಜೊತೆ ಅವಾಲ್‌ಬೈಕ್ ರೊಪ್ಪದ ಹಿಂದೆ ಪೇರಿಸಿದ್ದ ಉಣ್ಣೆಯ ಚೀಲಗಳನ್ನೇರಿ ಕೂತಿದ್ದ. ಅಲ್ಲಿಂದ ಪರದೆ ಚೆನ್ನಾಗಿ ಕಾಣಿಸುತ್ತಿತ್ತು. ತೀರಾ ಮುಂದೆ, ನೆಲದ ಮೇಲೆ ಕೂತಿದ್ದ ಕೃಷಿಕ್ಷೇತ್ರದ ಇತರ ಮಕ್ಕಳ ಜೊತೆ ಕೂರಲು ಹುಡುಗನಿಗೆ ಬಹಳ ಆಸೆಯಿತ್ತು. ಆದರೆ ತಾಯಿ ಅವನನ್ನು

ತಡೆದು, ತನ್ನ ತೊಡೆಯ ಮೇಲೆ ಕೂರಿಸಿಕೊಂಡಿದ್ದಳು.

"ನೀನು ಇಡೀ ದಿನ ನನ್ನ ಜೊತೆಗಿರದೆ ಎಲ್ಲೆಲ್ಲೋ ಅಡ್ಡಾಡಿಕೊಂಡಿರ್ತೀಯ. ಈಗಲಾದರೂ ಸ್ವಲ್ಪ ಹೊತ್ತು ನನ್ನ ಹತ್ತಿರ ಇರು" ಎಂದು ಅವಳು ಸಮಾಧಾನ ಹೇಳಿದ್ದಳು.

ಸಿನಿಮ ಪ್ರೊಜೆಕ್ಟರ್ ರಟರಟ ಸದ್ದು ಮಾಡುತ್ತಿತ್ತು. ಯುದ್ಧ ಭೀಕರವಾಗಿ ನಡೆಯುತ್ತಿತ್ತು. ಅಲ್ಲಿ ಕೂತಿದ್ದವರೆಲ್ಲ ಅದರಲ್ಲಿ ತನ್ಮಯರಾಗಿದ್ದರು. ಜೇಯೆಂಗುಲ್ ದೀರ್ಘವಾದ ನಿಟ್ಟುಸಿರುಬಿಟ್ಟಳು. ಆಗೀಗ ಒಂದು ಟ್ಯಾಂಕ್ ನೇರ ಬರುತ್ತಿತ್ತು. ಆಗ ಅವಳು ಮಗನನ್ನು ಇನ್ನೂ ಹತ್ತಿರ ಸೆಳೆದು ತಬ್ಬಿ ಕೂರುತ್ತಿದ್ದಳು. ಅವರ ಪಕ್ಕದಲ್ಲಿ ಕೂತಿದ್ದ ಹೆಂಗಸೊಬ್ಬಳು ಹೆದರಿ, "ಈ ಯುದ್ಧ ಎಷ್ಟು ಘೋರವಪ್ಪ, ದೇವರೆ!" ಎಂದು ಆಗಾಗ ಉದ್ಗರಿಸುತ್ತಿದ್ದಳು.

ಆದರೆ ಅವಾಲ್‌ಬೈಕ್ ಗಾಬರಿಗೊಂಡಿರಲಿಲ್ಲ. ಅಷ್ಟೇ ಅಲ್ಲ, ನಾಜಿ ಸೈನಿಕರು ನೆಲಕ್ಕುರುಳಿದಾಗ ಅವನಿಗೆ ತುಂಬ ಸಂತೋಷವಾಗುತ್ತಿತ್ತು. ನಮ್ಮ ಸಿಪಾಯಿಗಳು ಬಿದ್ದಾಗ, ಅವರು ಮತ್ತೆ ಮೇಲಕ್ಕೆ ಏಳುತ್ತಾರೆಂಬುದರಲ್ಲಿ ಅವನಿಗೆ ಸಂಶಯವೇ ಇರುತ್ತಿರಲಿಲ್ಲ.

ಯುದ್ಧದಲ್ಲಿ ಜನ ನೆಲಕ್ಕುರುಳಿಬೀಳುತ್ತಿದ್ದ ರೀತಿ ಬಹಳ ತಮಾಶೆಯಾಗಿತ್ತು. ತಾವು ಯುದ್ಧದಾಟ ಆಡುತ್ತಿದ್ದಾಗ ಹೇಗೋ ಹಾಗೆಯೇ ಎಂದುಕೊಂಡ ಅವಾಲ್‌ಬೈಕ್. ಯುದ್ಧದಾಟ ಆಡುವಾಗ, ಓಡುತ್ತಿದ್ದ ಹಾಗೆ ಥಟ್ಟನೆ ನೆಲಕ್ಕೆ ಬೀಳುವುದನ್ನು ಅವನು ಚೆನ್ನಾಗಿ ಕಲಿತಿದ್ದ. ಯಾರೋ ಇವನನ್ನು ಕೆಡವಿಸಿರಬೇಕು ಎನ್ನುವಷ್ಟು ಸಹಜವಾಗಿರುತ್ತಿತ್ತು ಅವನ ಬೀಳುವಿಕೆ. ಹೀಗೆ ಬಿದ್ದಾಗ ಮೈಕೈ ತರಚುತ್ತಿತ್ತು ನಿಜ. ಆದರೆ ಅದನ್ನು ಲೆಕ್ಕಿಸದೆ ಅವನು ಮತ್ತೆ ಎದ್ದುನಿಂತು ಶತ್ರುಗಳ ಕಡೆ ನುಗ್ಗುತ್ತಿದ್ದ.

ಆದರೆ ಸಿನಿಮದಲ್ಲಿ ಬಿದ್ದ ಸೈನಿಕರು ಮೇಲೆದ್ದಿರಲಿಲ್ಲ; ಕಪ್ಪನೆಯ ಕಿರು ದಿಬ್ಬಗಳಂತೆ ಬಿದ್ದಲ್ಲೆ ಬಿದ್ದಿದ್ದರು. ಅವಾಲ್‌ಬೈಕ್‌ಗೆ ಹೊಟ್ಟೆಗೆ ಗುಂಡು ತಾಕಿದವರಂತೆ ಇನ್ನೊಂದು ರೀತಿಯಲ್ಲಿ ಬೀಳುವುದೂ ಗೊತ್ತಿತ್ತು. ಹಾಗೆ ಬೀಳುವವರು ಥಟ್ಟನೆ ನೆಲಕ್ಕೆ ಬೀಳುತ್ತಿರಲಿಲ್ಲ. ಹೊಟ್ಟೆಯನ್ನು ಎರಡು ಕೈಗಳಿಂದ ಅವಚಿ ಹಿಡಿದು, ಅಡ್ಡತಿಡ್ಡ ಓಡುತ್ತ ನಿಧಾನವಾಗಿ ನೆಲಕ್ಕೆ ಕುಸಿಯುತ್ತಿದ್ದರು. ಅವರ ಕೈಯಲ್ಲಿದ್ದ ಬಂದೂಕು ಕೂಡ ಜಾರಿ ಬೀಳುತ್ತಿತ್ತು. ಅವಾಲ್‌ಬೈಕ್ ಹಾಗೆ ಬಿದ್ದಾಗ, ತಾನು ಸತ್ತಿಲ್ಲವೆಂದು ಆಟಗಾರರಿಗೆ ತಿಳಿಸಿ, ಎದ್ದುನಿಂತು ಅವರನ್ನು ಕೂಡಿಕೊಂಡು ಮತ್ತೆ ಕಾದಾಟದಲ್ಲಿ ಭಾಗಿಯಾಗುತ್ತಿದ್ದ. ಆದರೆ ಸಿನಿಮಾದಲ್ಲಿ ನೆಲಕ್ಕುರುಳಿದ ಮಂದಿ ಮೇಲಕ್ಕೆ ಎದ್ದೇ ಇರಲಿಲ್ಲ!

ಪ್ರೊಜೆಕ್ಟರ್ ಸದ್ದುಮಾಡಿದಾಗ, ಫಿರಂಗಿ ದಳದ ದೃಶ್ಯ ಕಣ್ಮುಂದೆ ಮೂಡಿತ್ತು. ಯುದ್ಧ ಬಿರುಸಾಗಿ ಸಾಗಿತ್ತು. ಕಣಿವೆಯೊಂದರ ಅಗಲವಾದ ಏರಿಯ ಮೇಲೆ, ಸಿಡಿಮದ್ದು ಬೆಂಕಿ ಹೊಗೆಗಳ ನಡುವೆ, ಏಳು ಜನ ಸೈನಿಕರು ಟ್ಯಾಂಕುಗಳನ್ನುರುಳಿಸುವ ಒಂದು ಫಿರಂಗಿಯನ್ನು ಎಳೆದೊಯ್ಯುತ್ತಿದ್ದರು. ಅವರ ಚಲನೆ ಹಾಗೂ ಚರ್ಯೆಗಳಲ್ಲಿ ಏನೋ ವಿಶೇಷತೆ ಇದ್ದಂತಿತ್ತು. ಅವರನ್ನು ಕಂಡಾಗ ಪ್ರೇಕ್ಷಕರ ಎದೆಬಡಿತ ಹೆಚ್ಚಾಗುತ್ತಿತ್ತು. ಒಂದು ಕಡೆ ಹೆಮ್ಮೆ, ಅಭಿಮಾನ, ಮತ್ತೊಂದು ಕಡೆ ಭಯೋದ್ವೇಗ, ದುಃಖದ ನಿರೀಕ್ಷೆ, ಮನಸ್ಸನ್ನಾವರಿಸುತ್ತಿತ್ತು.

ಆ ಸೈನಿಕರ ಬಟ್ಟೆ ಕೊಳಕಾಗಿದ್ದವು, ಅಲ್ಲಲ್ಲಿ ಹರಿದಿದ್ದವು. ಆ ಏಳು ಜನರಲ್ಲಿ ಒಬ್ಬ ಮಾತ್ರ ರಷ್ಯನ್ ಆಗಿರಲಿಲ್ಲ. ಅವನನ್ನು ತೋರಿಸಿ ತಾಯಿ, "ಅಗೋ ನೋಡು! ಅವರೇ ನಿಮ್ಮಪ್ಪ!" ಎಂದು ಉದ್ಗರಿಸಿರದಿದ್ದರೆ, ಅವಾಲ್‌ಬೈಕ್ ಅವನತ್ತ ಗಮನ ಹರಿಸುತ್ತಿರಲಿಲ್ಲವೇನೊ! ಆ ಕ್ಷಣದಿಂದ ಪರದೆಯ ಮೇಲಿನ ವ್ಯಕ್ತಿ ಅವನ ಪಾಲಿಗೆ ತಂದೆಯಾಗಿ, ಹೃದಯ ಹೊಸ ಅನುಭವಕ್ಕೆ ಪಕ್ಕಾಗಿತ್ತು.

ಆಮೇಲಿನ ಯುದ್ಧದೃಶ್ಯದಲ್ಲಿ ಅವನ ತಂದೆ ಪ್ರಮುಖನಾಗಿದ್ದ. ಕಷ್ಟಪಟ್ಟು ದುಡಿಯುವ ಒಕ್ಕಲು ಮಗನಂತೆ ಅವನು ದೃಢಕಾಯನೂ ತರುಣನೂ ಆಗಿ ಕಂಡಿದ್ದ. ದುಂಡನೆಯ ಮುಖದ, ಕ್ಷಿಪ್ರನೋಟದ ಅವನು ಹೆಚ್ಚು ಎತ್ತರದ ವ್ಯಕ್ತಿಯಾಗಿರಲಿಲ್ಲ. ಅವನ



ಕಾವ್ಯಲೋಕ

# ರಕ್ಕಸಗತ್ತಲೆ

ಈ ಕತ್ತಲೆಗೆ
ಬೆಳಕೆಂದರೆ ಭಯಂಕರ ಹಸಿವು
ಅನಾದಿ ಕಾಲದಿಂದಲೂ ಅದು
ನುಂಗುತ್ತಲೇ ಇದೆ
ನಮ್ಮ ಬೆಳಕನ್ನು
ಆದರೆ ಬೆಳಕು ಮಾತ್ರ ಇನ್ನೂ
ಇನ್ನೂ ಹುಟ್ಟುತ್ತಲೇ ಇದೆ
ಅದೋ ನೋಡಿ ದಿಗ್‌ದಿಗಂತದಿಂದಲೂ
ಫಳಫಳಿಸುತ್ತಲೇ ಇದೆ
ಭೂಮ್ಯಾಕಾಶದಿಂದಲೂ
ಈ ಕಾಳ ಕತ್ತಲೆ-
ಸಂಚು ಮಾಡಬಲ್ಲದು
ಹೊಂಚುಹಾಕಬಲ್ಲದು
ನಿರ್ದಯೆಯಿಂದ ಎರಗಬಲ್ಲದು
ಗುರುತೇ ಸಿಗದಂತೆ ನಾಪತ್ತೆಯಾಗಬಲ್ಲದು !
ಇದಕ್ಕೊಂದೇ ಗುರಿ
ಮೌಢ್ಯದ ಮಳೆ
ಅಜ್ಞಾನದ ಬೆಳೆ
ಹಣ, ಐಷಾರಾಮಿ, ವಗೈರೆ...

ಈ ರಕ್ಕಸಗತ್ತಲೆ-
ನುಂಗುತ್ತಲೇ ಇದೆ
ನಮ್ಮ ಭವ್ಯ ಬೆಳಕನ್ನು
ಬಸವ, ಗಾಂಧಿ, ಹಾಷ್ಮಿ ,
ದಾಭೋಲ್ಕರ್, ಪಾನಸರೆ, ಕಲಬುರ್ಗಿ,
ಗೌರಿ...!
ಪಟ್ಟಿ ಬೆಳೆಯುತ್ತಲೇ ಇದೆ.
ಈ ರಕ್ಕಸ ಹಸಿವಿಗೆ
ಮುಕ್ತಾಯವೆಂಬುದೇ ಇಲ್ಲವೇ ?
ಕೇಳುತ್ತಿದೆ ಬೆಳಕಿನ ಹಂಬಲ !
ಯಾರು ಬೆಳಕನ್ನು ತೋರುತ್ತಾರೋ
ಅವರನ್ನೇ ನುಂಗುತ್ತಿದೆಯಲ್ಲ !
ಸೂರ್ಯನ ಬೆಳಕು
ಚಂದಿರನ ಬೆಳಕು
ದೀಪದ ಬೆಳಕು
ಬೆಳಕು ಬೆಳಕೇ ಅಲ್ಲವೇ ?
ಅಂಥ ಬೆಳಕಿಗೂ ಕೂಡ ಸಾವಿದೆಯೇ ?
ಇಲ್ಲ... ಇಲ್ಲ...!
ಈ ಮಬ್ಬುಗತ್ತಲೆಗೆ ಅದು ತಿಳಿದಿಲ್ಲ
ಬೆಳಕನ್ನು ನುಂಗಿದರೆ
ತಾನು ಆರಾಮಾಗಿರಬಹುದೆಂದು
ಭಾವಿಸುತ್ತಿದೆ ಈ ಕತ್ತಲೆ



**ಹುರುಕಡ್ಲಿ ಶಿವಕುಮಾರ**
ಬಾಚಿಗೊಂಡನಹಳ್ಳಿ ಅಂಚೆ, ಹಗರಿಬೊಮ್ಮನಹಳ್ಳಿ
ತಾಲೂಕು, ಬಳ್ಳಾರಿ ಜಿಲ್ಲೆ – ೫೮೩ ೨೧೨

ಕಣ್ಣುಗಳಲ್ಲಿ ಉಕ್ಕಿನ ಗಡುಸುತನ ಎದ್ದುಕಾಣುತ್ತಿತ್ತು. ಧೂಳು, ಹೊಗೆಯಿಂದ ಮುಖ ಕಪ್ಪಿಟ್ಟಿತ್ತು. ಚಲನೆಯಲ್ಲಿ ಬೆಕ್ಕಿನ ಚುರುಕು ಕಾಣುತ್ತಿತ್ತು. ಫಿರಂಗಿಯ ಚಕ್ರಕ್ಕೆ ಭುಜವಾನಿಸಿ ನಿಂತು ಅವನು ಏರಿಯ ಕೆಳಗಿದ್ದ ಸೈನಿಕನಿಗೆ ಕೂಗಿ ಹೇಳಿದ : "ಬೇಗ ಸಿಡಿಮದ್ದು ತಗೊಂಡು ಬಾ!" ಅವನ ಧ್ವನಿ ಮತ್ತೊಂದು ಸ್ಫೋಟದ ಸದ್ದಿನಲ್ಲಿ ಮುಳುಗಿಹೋಯಿತು.

ಅವಾಲ್‌ಬೈಕ್ ಖಾತ್ರಿಮಾಡಿಕೊಳ್ಳುವವನಂತೆ ತಾಯಿಯನ್ನು ಕೇಳಿದ : "ನನ್ನಪ್ಪ ಅವನೇ ಏನಮ್ಮ ?"

"ಏನಂದೆ ? ಸುಮ್ಮನೆ ಸಿನಿಮ ನೋಡು."

"ಅಲ್ಲಮ್ಮ, ಅವನೇ ನನ್ನಪ್ಪ ಅಂತ ಹೇಳಿದೆಯಲ್ಲ?"

"ಹೌದು, ಖಂಡಿತವಾಗಿಯೂ ಅವನು ನಿನ್ನಪ್ಪ. ಆದರೆ ಈಗ ಸುಮ್ಮಗೆ ಸಿನಿಮ ನೋಡು, ಮಾತಾಡಿ ಬೇರೆಯವರಿಗೆಲ್ಲ ತೊಂದರೆ ಕೊಡ್ಬೇಡ."

ತಾಯಿ ಹೀಗೆ ಅಸಹನೆಯಿಂದ ಹೇಳಲು ಕಾರಣ ಏನು? ಯಾವ ಪೂರ್ವಾಲೋಚನೆಯೂ ಇಲ್ಲದೆ, ಆ ಗಳಿಗೆಗೆ ಅನ್ನಿಸಿದ್ದನ್ನು ಹೇಳಿರಬಹುದೆ ? ಅಥವಾ ತೀರಿಹೋಗಿದ್ದ ತನ್ನ ಗಂಡನ ನೆನಪುಗಳು ಸಿನಿಮ ದಿಂದಾಗಿ ಒಮ್ಮೆಲೇ ಮರುಕಳಿಸಿ ಅವಳ ಮನಸ್ಸು ಕಸಿವಿಸಿಗೊಂಡಿರಬಹುದೆ ? ಏನೇ ಇರಲಿ. ಆ ವ್ಯಕ್ತಿ ತನ್ನ ತಂದೆಯೆಂದು ಅವಾಲ್‌ಬೈಕ್ ನಂಬಿದ. ಇದರಿಂದ ಎಂಥ ಸುಖಾನುಭವವಾಯಿತು ಅವನಿಗೆ ! ತನ್ನ ತಂದೆ ಒಬ್ಬ ಯೋಧನೆಂಬ ಹೆಮ್ಮೆಯಿಂದ ಹಿಂದೆಂದೂ ಅನುಭವಿಸಿರದಿದ್ದಂಥ ಆನಂದೋದ್ವೇಗಕ್ಕೆ ಆತ ಒಳಗಾದ. ತಂದೆಯೆಂದರೆ ಇಂಥ ತಂದೆ ಇರಬೇಕು ! ಅಲ್ಲದೆ ಇವನು ತನ್ನ ಸ್ವಂತ ಅಪ್ಪ ! ತನ್ನ ಜೊತೆಗಾರರು ತನ್ನನ್ನು ತಂದೆಯಿಲ್ಲದ ತಬ್ಬಲಿಯೆಂದು ತಮಾಶೆ ಮಾಡುತ್ತಿರುತ್ತಾರೆ. ಈಗ ಅವರು ತನ್ನ ತಂದೆಯನ್ನು ನೋಡಲಿ ! ಇಲ್ಲಿ ನೆರೆದಿರುವ ಕುರಿಗಾಹಿಗಳೂ ನೋಡಲಿ !

ಅಡವಿ ಬೆಟ್ಟಗಳಲ್ಲಿ ಅಲೆಯುವ ಆ ಕುರಿಗಾಹಿ ಗಳಿಗೆ ಊರಿನ ಹುಡುಗರ ಪರಿಚಯವಿರದಿದ್ದರೆ ಆಶ್ಚರ್ಯವೇನಿಲ್ಲ. ಅವರಿಗೆ ಒಬ್ಬ ಹುಡುಗನನ್ನು ಇನ್ನೊಬ್ಬನಿಂದ ಪ್ರತ್ಯೇಕಿಸಿ ಗುರುತಿಸಲು ಸಾಧ್ಯವಾಗು ತ್ತಿರಲಿಲ್ಲ. ಉಣ್ಣೆ ಕತ್ತರಿಸುವ ರೊಪ್ಪದ ಅಂಗಳಕ್ಕೆ ಅವಾಲ್‌ಬೈಕ್ ಕುರಿಗಳನ್ನು ದೂಡಿ ಅವರಿಗೆ ಸಹಾಯ ಮಾಡುತ್ತಿದ್ದ. ಕಚ್ಚಾಡುವ ನಾಯಿಗಳನ್ನು ಹೊಡೆದಟ್ಟಿ ಗಲಾಟೆ ನಿಲ್ಲಿಸುತ್ತಿದ್ದ. ಹೀಗಿದ್ದರೂ ಆ ಕುರಿಗಾಹಿಗಳು ಅವನನ್ನು ಅಪರಿಚಿತನಂತೆ ಕಾಣುತ್ತಿದ್ದರು. ಹಲವಾರು ಪ್ರಶ್ನೆ ಕೇಳಿ ಬೇಸರ ಬರಿಸುತ್ತಿದ್ದರು. ಪ್ರತಿಯೊಬ್ಬ ಕುರಿಗಾಹಿಯೂ ಕೇಳುತ್ತಿದ್ದ ಪ್ರಶ್ನೆ ಈ ರೀತಿಯದು :

"ಏಯ್ ಹುಡುಗ, ನಿನ್ನ ಹೆಸರೇನೊ ?"

"ಅವಾಲ್‌ಬೈಕ್."

"ನಿಮ್ಮಪ್ಪನ ಹೆಸರೇನೊ ?"

"ತೋಕ್ತಾಸುನ್."

ಆದರೆ ಆ ಕುರಿಗಾಹಿಗಳಿಗೆ ತೋಕ್ತಾಸುನ್ ಯಾರೆಂದು ತಕ್ಷಣ ಜ್ಞಾಪಕಕ್ಕೆ ಬರುತ್ತಿರಲಿಲ್ಲ. ತಾವು ಕುಳಿತಿದ್ದ ಕುದುರೆಗಳ ಮೇಲಿಂದ ಬಾಗಿ ಅವರು ಕೇಳುತ್ತಿದ್ದರು :

"ತೋಕ್ತಾಸುನ್ ? ಯಾವ ತೋಕ್ತಾಸುನ್ ?"

"ನಾನು ತೋಕ್ತಾಸುನ್ನನ ಮಗ" – ಅವನು ಪಟ್ಟುಹಿಡಿದು ಹೇಳುತ್ತಿದ್ದ.

ಯಾರಾದರೂ ತಂದೆಯ ಹೆಸರು ಕೇಳಿದರೆ, ಹೀಗೆ ಹೇಳಬೇಕೆಂದು ತಾಯಿ ಹೇಳಿದ್ದಳು. ತಂದೆ ಹೆಸರನ್ನು ಮರೆಯದಿರುವಂತೆ ಕುರುಡಿಯಾದ ಅಜ್ಜಿ ಕೂಡ ಪದೇ ಪದೇ ಎಚ್ಚರಿಸುತ್ತಿದ್ದಳು. ಆ ಸಿಡುಕಿನ ಅಜ್ಜಿ, ತಂದೆಯ ಹೆಸರನ್ನು ಆತ ಮರೆತಾಗ ಅವನ ಕಿವಿ ಹಿಂಡುತ್ತಿದ್ದಳು.

"ಸರಿ ಸರಿ. ನೀನು ಅಂಚೆಕಛೇರಿಯ ಕಾರ್ಯ ನಿರ್ವಾಹಕಿಯ ಮಗ, ಅಲ್ಲವೆ ?"

"ಅಲ್ಲ, ನಾನು ತೋಕ್ತಾಸುನ್‌ನ ಮಗ !"

ಕುರಿಗಾಹಿಗಳಿಗೆ ಕೊನೆಗೆ ಅರ್ಥವಾಗಲು ಪ್ರಾರಂಭವಾಗುತ್ತಿತ್ತು.

"ತಿಳೀತು ಬಿಡು. ನೀನು ತೋಕ್ತಾಸುನ್ನನ ಮಗ ಅಂತ ಈಗ ಗೊತ್ತಾಯ್ತು. ಬಹಳ ಒಳ್ಳೇದು. ನಿಮ್ಮಪ್ಪನನ್ನು ನೀನು ಕಂಡಿದ್ದೆಯೊ ಇಲ್ಲವೋ ಅಂತ ನಾನು ಹಾಗಂದದ್ದು. ಕೋಪ ಮಾಡಿಕೋಬೇಡಪ್ಪ, ನಾವು ಇಡೀ ವರ್ಷ ಬೆಟ್ಟಗುಡ್ಡಗಳಲ್ಲಿ ಅಲೆಯುತ್ತಿರ್ತೇವೆ. ನೀವು ಹುಡುಗರೋ, ಹೊಲದ ಕಳೆಯಂತೆ ಸರಸರ ಬೆಳೆದುಬಿಡ್ತೀರಿ ! ಹೀಗಾಗಿ ನಿಮ್ಮ ಗುರುತೇ ಸಿಕ್ಕೋದಿಲ್ಲ. ಒಬ್ಬೊಬ್ಬ ಹುಡುಗನ ಹೆಸರನ್ನೂ ನೆನಪಿಟ್ಟುಕೊಂಡಿರೋದು ಕಷ್ಟ."

ಆಮೇಲೆ ಕುರಿಗಾಹಿಗಳು ತಮ್ಮತಮ್ಮಲ್ಲೆ ಮಾತಾಡಿ ಕೊಳ್ಳುತ್ತಿದ್ದರು. ತನ್ನ ತಂದೆ ತಾರುಣ್ಯದಲ್ಲೇ ಯುದ್ಧಕ್ಕೆ ಹೋಗಿದ್ದನ್ನು ಅವರು ನೆನಪಿಸಿಕೊಳ್ಳುತ್ತಿದ್ದರು. ಅವನಿಗೆ ಒಬ್ಬ ಮಗ ಇದ್ದದ್ದು ಬಹಳ ಒಳ್ಳೆಯ ಸಂಗತಿ ಯೆಂದು ಹೇಳುತ್ತಿದ್ದರು. ಯಾಕೆಂದರೆ, ಎಷ್ಟೋ ಮಂದಿ ಯುವಕರು ಹೀಗೆ ಯುದ್ಧಕ್ಕೆ ಹೋಗುವ ಮುನ್ನ ವಿವಾಹವಾಗಿರಲಿಲ್ಲ. ಪರಿಣಾಮವಾಗಿ, ಈಗ ಅವರ ಹೆಸರನ್ನು ಮುಂದುವರಿಸಲು ಯಾರೂ ಇರಲಿಲ್ಲ.

ಹುಡುಗ ಇದನ್ನೆಲ್ಲಾ ಜ್ಞಾಪಿಸಿಕೊಳ್ಳುತ್ತ, ಸಿನಿಮದ ಮೇಲೆ ತನ್ನ ಗಮನವನ್ನು ಕೇಂದ್ರೀಕರಿಸಿದ. "ಅದೋ, ಅಲ್ಲಿ ಕಾಣ್ತಿರೋದು ನಿನ್ನ ತಂದೆ" ಎಂದು ಅವನ ತಾಯಿ ಹೇಳಿದ ಕ್ಷಣದಿಂದ ಸಿನಿಮದಲ್ಲಿನ ಸೈನಿಕ ಅವನ ತಂದೆಯಾಗಿದ್ದ. ಬೇರಾವ ದೃಷ್ಟಿಯಿಂದಲೂ ಅವನನ್ನು ನೋಡುವುದು ಹುಡುಗನಿಗೆ ಸಾಧ್ಯವಿರಲಿಲ್ಲ. ವಾಸ್ತವವಾಗಿ ಅವನ ತಾಯಿ ಮನೆಯ ಗೋಡೆಯಲ್ಲಿ ತೂಗು ಹಾಕಿದ್ದ ಸಮವಸ್ತ್ರಧಾರಿ ಯುವಕ ತೋಕ್ತಾಸುನ್ನನ ಭಾವಚಿತ್ರಕ್ಕೂ ಹುಡುಗನಿಗೂ ರೂಪದಲ್ಲಿ ಸಾಮ್ಯವಿತ್ತು.

ಈಗ ತುಂಬು ಮಮತೆ, ಮಾರ್ದವತೆಗಳಿಂದ ಸಿನಿಮದಲ್ಲಿ ತಂದೆಯನ್ನು ನೋಡುತ್ತ ಅವಾಲ್‌ಬೈಕ್ ಕೂತ. ತಂದೆ ಕೂಡ ತನ್ನ ಕಣ್ಣಿನ ನೋಟವನ್ನು ಸಂಧಿಸುತ್ತಿರುವಂತೆ ಅವನಿಗೆ ತೋರಿತು. ತೆರೆಯ ಮೇಲಿನ ತನ್ನ ಜೀವನದ ಅತ್ಯಲ್ಪ ಸಮಯದೊಳಗೆ, ತನ್ನ ಮಗ ಅವನ ಕೊನೆಗಾಲದವರೆಗೆ ಹೆಮ್ಮೆಯಿಂದ ನೆನಪಿಸಿಕೊಳ್ಳಬಹುದಾದಂಥ ಒಬ್ಬ ವ್ಯಕ್ತಿಯನ್ನು, ಗತಯುದ್ಧದ ಒಬ್ಬ ಸೈನಿಕನನ್ನು, ತೋರಿಸಲು ಆತ ಕಾತರನಾಗಿದ್ದಂತೆ ಹುಡುಗನಿಗೆ ಭಾಸವಾಯಿತು. ಯುದ್ಧದಲ್ಲಿ ಜನ ನೆಲಕ್ಕುರುಳುವ ರೀತಿ ಇನ್ನೆಂದೂ ಅವನಿಗೆ ತಮಾಶೆಯಾಗಿ ಕಾಣಲಾರದು. ಅದನ್ನು ನೋಡಿ ಇನ್ನೆಂದೂ ಆತ ನಗಲಾರ. ಯುದ್ಧ ಅವನ ಪಾಲಿಗೆ ಈಗ ಮಹಾ ಅಪಾಯಕಾರಿಯಾದ, ಘೋರವಾದ ಒಂದು ಸಂಗತಿಯಾಗಿತ್ತು. ಬದುಕಿನಲ್ಲಿ ಮೊಟ್ಟಮೊದಲಿಗೆ ಅವನಿಗೆ, ತಾನು ಕಳೆದುಕೊಂಡು ತಬ್ಬಲಿಯಾಗಿದ್ದ ತಂದೆಯ ಬಗ್ಗೆ ಅಪಾರ ಪ್ರೀತಿಯೂ ಭಯ ಕಾತರಗಳೂ ಮೂಡತೊಡಗಿದವು.

ಯುದ್ಧ ತ್ವರಿತಗತಿಯಲ್ಲಿ ಸಾಗುತ್ತಿತ್ತು. ಟ್ಯಾಂಕುಗಳು ಪರದೆಯ ಮೇಲೆ ಕಾಣಿಸಿಕೊಂಡವು. ಅವು ನೆಲವನ್ನು ಮಥಿಸುತ್ತ ಭಯ ಬರಿಸುವಂತೆ ಮುನ್ನುಗ್ಗಿದವು. ಅವುಗಳ ತೋಪುಗಳು ಗುಂಡಿನ ಮಳೆ ಕರೆದವು. ಏರಿಯ ಮೇಲೆ ಫಿರಂಗಿಯನ್ನು ಸಾಗಿಸುತ್ತಿದ್ದ ನಮ್ಮ ತೋಫಿನ ದಳದವರು ತಮ್ಮೆಲ್ಲ ಶಕ್ತಿಯಿಂದಲೂ ಅದನ್ನು ಜಗ್ಗುತ್ತಿದ್ದರು.

ಅವಾಲ್‌ಬೈಕ್ ಉದ್ವೇಗದಿಂದ, "ಅಪ್ಪ ! ಟ್ಯಾಂಕುಗಳು ಬರ್ತಿವೆ ! ಬೇಗ ಬೇಗ ಹೆಜ್ಜೆಹಾಕು !" ಎಂದು ಉದ್ಗರಿಸಿದ.

ಫಿರಂಗಿಯನ್ನು ಏರಿಯ ಮೇಲ್ಭಾಗಕ್ಕೆ ತಂದು, ಒಂದು ಪೊದೆಯ ಮರೆಗೆ ನಿಲ್ಲಿಸಲಾಯಿತು. ಅಲ್ಲಿಂದ ನಮ್ಮ ಸೈನಿಕರು ಟ್ಯಾಂಕುಗಳ ಮೇಲೆ ಗುಂಡಿನ ದಾಳಿ ಶುರು ಮಾಡಿದರು. ಪ್ರತಿಯಾಗಿ ಟ್ಯಾಂಕುಗಳೂ ಗುಂಡು ಸಿಡಿಸಿದವು. ಪರಿಸ್ಥಿತಿ ತುಂಬ ಭೀಕರವಾಗಿತ್ತು.

ಅವಾಲ್‌ಬೈಕ್‌ನಿಗೆ ತಾನು ಯುದ್ಧದ ಗುಡುಗು ಮಿಂಚುಗಳ ನಡುವೆ ತಂದೆಯ ಪಕ್ಕದಲ್ಲಿ ನಿಂತಂತೆ ಭಾಸವಾಯಿತು. ಟ್ಯಾಂಕೊಂದಕ್ಕೆ ಬೆಂಕಿ ತಗಲಿ, ಅದು ಕರಿ ಹೊಗೆ ಹಬ್ಬಿಸುತ್ತ, ಹುಚ್ಚುಹುಚ್ಚಾಗಿ ಸುತ್ತತೊಡಗಿತು. ಇದನ್ನು ಕಂಡ ಅವಾಲ್‌ಬೈಕ್ ತಾಯಿಯ ಮಡಿಲಿನಲ್ಲಿ ಉದ್ವೇಗದಿಂದ ಚಡಪಡಿಸ ತೊಡಗಿದ. ಮರುಕ್ಷಣದಲ್ಲೇ ನಮ್ಮ ಸಿಪಾಯಿಗಳು ಕೆಳಗುರುಳಿದಾಗ ಆತ ನಿಶ್ಚಲನಾಗಿ ಸೆಟೆದು ಕೂತ. ಕ್ರಮೇಣ ಹೆಚ್ಚು ಹೆಚ್ಚು ಸಿಪಾಯಿಗಳು ಬಿದ್ದರು. ಬದುಕಿ ಉಳಿದವರ ಸಂಖ್ಯೆ ಕ್ರಮೇಣ ಕಡಿಮೆಯಾಗುತ್ತ ಬಂತು. ತಾಯಿಯ ಕಣ್ಣು ಹನಿದು, ಅವಳ ಕಪೋಲಗಳು ತೊಯ್ದುಹೋದವು.

ಪ್ರೊಜೆಕ್ಟರ್ ಮತ್ತೆ ಸದ್ದು ಮಾಡಿತು. ಯುದ್ಧ ಪರಾಕಾಷ್ಠೆಗೆ ಮುಟ್ಟಿತು. ಟ್ಯಾಂಕುಗಳು ಏರಿಯನ್ನೇರಿ ಹತ್ತಿರ ಹತ್ತಿರ ಬರುತ್ತಿದ್ದುವು. ಫಿರಂಗಿಯ ಬಳಿ ನೆಲದ ಮೇಲೆ ಒರಗಿದ್ದ ಅವನ ತಂದೆ ತನ್ನ ಕೈಯಲ್ಲಿದ್ದ ಯುದ್ಧರಂಗದ ಟೆಲಿಫೋನಿನಲ್ಲಿ ಗಟ್ಟಿಯಾಗಿ ಏನನ್ನೋ ಅರಚುತ್ತಿದ್ದ. ಆದರೆ ಗುಂಡುಗಳ ಸದ್ದಿನಲ್ಲಿ ಅವನ ಧ್ವನಿ ಅಡಗಿಹೋಯಿತು. ಅವನ ಪಕ್ಕದಲ್ಲಿ ಮತ್ತೊಬ್ಬ ಸೈನಿಕ ಉರುಳಿ, ಮೇಲೇರಲು ಪ್ರಯತ್ನಿಸಿ ಮತ್ತೆ ನೆಲಕ್ಕೆ ಕುಸಿದ. ರಕ್ತ ಹೆಪ್ಪುಗಟ್ಟಿ ಅವನು ಬಿದ್ದಿದ್ದ ಜಾಗ ಕಪ್ಪಾಯಿತು. ಈಗ ಉಳಿದವರು ತನ್ನ ತಂದೆ ಹಾಗೂ ಇನ್ನೊಬ್ಬ ಸೈನಿಕ ಮಾತ್ರ. ಅವರಿಬ್ಬರೂ ಎಡೆಬಿಡದೆ ಗುಂಡು ಹಾರಿಸುತ್ತಿದ್ದರು. ಆದರೂ ಟ್ಯಾಂಕುಗಳು ಮುನ್ನುಗ್ಗುತ್ತಲೇ ಇದ್ದವು. ಫಿರಂಗಿಯ ಬಳಿ ಮತ್ತೊಂದು ಸಿಡಿಗುಂಡು ಸ್ಫೋಟಿಸಿ, ಉರಿ ಎದ್ದು ಹೊಗೆ

ಆವರಿಸಿತು. ಆಗ ಬದುಕಿ ಉಳಿದವ ಒಬ್ಬ ಮಾತ್ರ. ಹೊಗೆ ತಗ್ಗಿದಾಗ ಅವನು ತನ್ನ ತಂದೆಯೆಂದು ಗೊತ್ತಾಯಿತು. ಆತ ಎದ್ದು ಫಿರಂಗಿ ಕಡೆ ಧಾವಿಸಿ ಗುಂಡು ತುಂಬಿ ಗುರಿಯಿಟ್ಟು ಹಾರಿಸಿದ. ಅದು ಅವನು ಹಾರಿಸಿದ ಕೊನೆಯ ಗುಂಡಾಗಿತ್ತು. ಮತ್ತೆ ಶತ್ರುಗಳ ಕಡೆಯಿಂದ ಸಿಡಿಗುಂಡೊಂದು ಹಾರಿಬಂದು ದಟ್ಟ ಹೊಗೆ ಕವಿಯಿತು. ಜ್ವಾಲೆ ಧಗಧಗ ಉರಿಯಿತು. ಫಿರಂಗಿ ನುಜ್ಜುಗುಜ್ಜಾಗಿ ಕೆಳಗುರುಳಿ ಬಿದ್ದಿತು. ಆದರೂ ತಂದೆ ಸತ್ತಿರಲಿಲ್ಲ. ಅವನು ನಿಧಾನವಾಗಿ ಎದ್ದು ಮುನ್ನಡೆದ. ಅವನ ಮುಖ ಗಾರೊಡೆದಂತೆ ಕಪ್ಪಾಗಿತ್ತು. ಬಟ್ಟೆಗಳು ಹರಿದು ಚಿಂದಿಯಾಗಿದ್ದವು. ಮುನ್ನುಗ್ಗುತ್ತಿದ್ದ ಟ್ಯಾಂಕಿನ ಕಡೆ ಅವನು ನೇರವಾಗಿ ನಡೆಯುತ್ತಿದ್ದ. ಕೈಯಲ್ಲಿ ಗ್ರೇನೇಡ್ ಇತ್ತು. ಅವನಿಗೆ ಸುತ್ತಲಿನ ಪರಿವೆಯೇ ಇರಲಿಲ್ಲ.

"ನಿಲ್ಲಿ ! ಮುಂದೆ ಹೋಗಲು ನಿಮ್ಮನ್ನು ಬಿಡೆವು !" ಎಂದು ಮೈಮೇಲೆ ಬಂದವನಂತೆ ಅರಚುತ್ತ, ಗ್ರೇನೇಡನ್ನು ಎಸೆಯಲು ಆತ ತೋಳೆತ್ತಿದ. ನೋವು, ರೋಷಗಳಿಂದ ಅವನ ಮುಖ ರುದ್ರಭಯಂಕರವಾಗಿತ್ತು.

ಜೇಯೆಂಗುಲ್ ಮಗನ ಕೈಯನ್ನು ಜೋರಾಗಿ ಅದುಮಿದಳು. ಹೀಗಾಗಿ ನೋವಿನಿಂದ ಅವನ ಕಣ್ಣಲ್ಲಿ ನೀರೂರಿತು. ತಂದೆಯ ರಕ್ಷಣೆಗೆ ಓಡಲೇ ಎಂದುಕೊಂಡಾಗ, ಟ್ಯಾಂಕಿನಿಂದ ಹೊರಹೊಮ್ಮಿದ ಮೆಷಿನ್‌ಗನ್ನಿನ ಅವ್ಯಾಹತ ಗುಂಡಿನ ದಾಳಿ ತಂದೆಯನ್ನು ಕೆಡೆದುರುಳಿಸಿತು. ಬಿರುಗಾಳಿಗೆ ಸಿಕ್ಕ ಮರದಂತೆ ಅವನು ಕುಸಿದ. ಆಮೇಲೆ ಉರುಳುತ್ತ ಏಳಲು ಪ್ರಯತ್ನಿಸಿ ಮತ್ತೆ ಧೊಪ್ಪನೆ ಬಿದ್ದ. ಅವನು ಕೈಗಳನ್ನು ಚಾಚಿ ಬಿದ್ದಿದ್ದ ರೀತಿ ರೆಕ್ಕೆ ಹರಡಿದ ಹದ್ದನ್ನು ಹೋಲುತ್ತಿತ್ತು.

ಪ್ರೊಜೆಕ್ಟರಿನ ಸದ್ದು ನಿಂತಿತು. ರೀಲು ಮುಗಿದಿದ್ದ ಕಾರಣ, ಯುದ್ಧದ ದೃಶ್ಯ ಹಠಾತ್ತಾಗಿ ಕೊನೆಗೊಂಡಿತ್ತು. ಪ್ರೊಜೆಕ್ಟರಿನ ಚಾಲಕ ಹೊಸ ರೀಲನ್ನು ಹಾಕಲು, ದೀಪ ಹೊತ್ತಿಸಿದ. ಹಠಾತ್ತನೆ ದೀಪ ಹೊತ್ತಿಕೊಂಡಾಗ, ರೊಪ್ಪದಲ್ಲಿದ್ದವರು ಕಣ್ಣು ಪಿಳಿಪಿಳಿ ಮಾಡುತ್ತ ರಜತ ಪರದೆಯ ರಣಾಂಗಣದ ಲೋಕದಿಂದ ವಾಸ್ತವ ಜಗತ್ತಿಗೆ ಮರಳಿದರು. ಹುಡುಗ ಚೀಲಗಳ ಮೇಲಿನಿಂದ ಕೆಳಗಿಳಿದು ಹುಮ್ಮಸ್ಸಿನಿಂದ ಕಿರಿಚಿದ :

"ಲೋ ಹುಡುಗರಾ ! ಈಗ ಸತ್ತು ಬಿದ್ದನಲ್ಲ. ಅವನೇ ನಮ್ಮಪ್ಪ ! ನೋಡಿದಿರ ?"

ಅವನ ಈ ಉದ್ಗಾರ ಅನಿರೀಕ್ಷಿತವಾಗಿದ್ದು, ಅಲ್ಲಿದ್ದವರಿಗೆ ಅವನು ಹೇಳಿದ್ದುದೇನೆಂದು ಮೊದಲು ಗೊತ್ತಾಗಲಿಲ್ಲ. ಆತ ಹೀಗೇ ಅರಚುತ್ತ ಮುಂದೆ ಕೂತಿದ್ದ ತನ್ನ ಸ್ನೇಹಿತರ ಬಳಿ ನಡೆದ. ಇತರ ಎಲ್ಲರ ಅಭಿಪ್ರಾಯಕ್ಕಿಂತಲೂ ಅವರ ಅಭಿಪ್ರಾಯಕ್ಕೆ ಅವಾಲ್‌ಬೈಕ್ ಹೆಚ್ಚು ಬೆಲೆ ಕೊಡುತ್ತಿದ್ದ.

ಪ್ರೇಕ್ಷಕರ ನಡುವೆ ಒಂದು ವಿಲಕ್ಷಣವಾದ, ಕಸಿವಿಸಿಯ ಮೌನ ಆವರಿಸಿತ್ತು. ಈ ತನಕ ತನ್ನ ತಂದೆಯನ್ನು ನೋಡದಿದ್ದ ಆ ಪುಟ್ಟ ಹುಡುಗನ ಹರ್ಷೋದ್ವೇಗಗಳಲ್ಲಿ ಅಡಗಿದ್ದ ಅಸಮಂಜಸತೆ ಅವರಿಗೆ ಅರ್ಥವಾಗಿರಲಿಲ್ಲ. ಅವರು ಸೋಜಿಗದಿಂದ ಕೇವಲ ಭುಜ ಹಾರಿಸಿದ್ದರು. ಪ್ರೊಜೆಕ್ಟರಿನ ಚಾಲಕ ರೀಲಿನ ಕ್ಯಾನನ್ನು ಕೆಳಗೆ ಹಾಕಿದಾಗ, ಅದು ಠಣ್ಣೆಂದು ಸದ್ದು ಮಾಡಿತು. ಜೊತೆಗೇ ಅದರ ಎರಡು ಭಾಗಗಳು ಬೇರ್ಪಟ್ಟು ಉರುಳತೊಡಗಿದವು. ಆದರೆ ಇದನ್ನು ಯಾರೂ ಲಕ್ಷಿಸಲಿಲ್ಲ. ಚಾಲಕನೂ ಅದನ್ನು ಎತ್ತಿಕೊಳ್ಳಲಿಲ್ಲ.

ಈ ಮಧ್ಯೆ ಆ ಸೈನಿಕನ ಮಗ, ರಣರಂಗದಲ್ಲಿ ಕಾದುತ್ತಿದ್ದಾಗ ಹತನಾಗಿದ್ದ ಸೈನಿಕನ ಮಗ, ತನ್ನ ದೋಸ್ತಿಗಳಿಗೆ ಇನ್ನೂ ಹೇಳುತ್ತಲೇ ಇದ್ದ :

"ನೋಡಿದಿರಿ ತಾನೆ ? ಕೊನೆಯಲ್ಲಿ ಸತ್ತು ಬಿದ್ದನಲ್ಲ ಅವನೇ ನಮ್ಮಪ್ಪ !"

ರೊಪ್ಪದಲ್ಲಿ ಮೌನ ಗಾಢವಾಗುತ್ತಿತ್ತು. ಅವಾಲ್‌ಬೈಕ್‌ನಿಗೆ, ತನ್ನ ಸಂತೋಷದಲ್ಲಿ, ತನ್ನ ತಂದೆ ಬಗೆಗಿನ ಹೆಮ್ಮೆ ಅಭಿಮಾನಗಳಲ್ಲಿ ಇತರರೇಕೆ ಪಾಲ್ಗೊಳ್ಳುತ್ತಿಲ್ಲವೆಂದು ಅರ್ಥವಾಗದೆ, ಆತ ಮತ್ತಷ್ಟು ಉದ್ವಿಗ್ನನಾದ.

"ಶ್ ! ಸುಮ್ಮನಿರು... ಹಾಗೆಲ್ಲ ಅರಚಕೂಡದು !" ಎಂದು ಯಾರೋ ಸ್ವಲ್ಪ ಸಿಡುಕಿನಿಂದ ಹೇಳಿದರು.

ತತ್‌ಕ್ಷಣ ಇನ್ನೊಂದು ಧ್ವನಿ ಅಂದಿತು : "ಯಾಕೆ ಅರಚಕೂಡದು ? ಯುದ್ಧದಲ್ಲಿ ತೀರಿಕೊಂಡ ಅವನ ತಂದೆಯನ್ನ ನೋಡಿ ಅವನಿಗೆ ಉದ್ವೇಗವಾಗಿರೋದು ಸಹಜ."

ಪಕ್ಕದಲ್ಲಿದ್ದ ಶಾಲಾ ಬಾಲಕನೊಬ್ಬ ಸ್ವಲ್ಪ ಧೈರ್ಯ ತಂದುಕೊಂಡು ಅವಾಲ್‌ಬೈಕ್‌ನಿಗೆ ನಿಜಾಂಶ ತಿಳಿಸಿದ : "ಅವನು ನಿಮ್ಮಪ್ಪ ಅಲ್ಲ ಕಣೊ. ಖಂಡಿತಾ ನಿಮ್ಮಪ್ಪ ಅಲ್ಲ. ಅವನ ಪಾತ್ರ ವಹಿಸಿದ ಒಬ್ಬ ನಟ. ಬೇಕಾದರೆ, ಆ ಪ್ರೊಜೆಕ್ಟರಿನ ಚಾಲಕನನ್ನೇ ಕೇಳು."

ಅವಾಲ್‌ಬೈಕ್‌ಗೆ ಈ ಮಾತುಗಳಿಂದ ಸಿಡಿಲು ಬಡಿದಂತಾಯಿತು. ಕಹಿ–ಸಿಹಿ ಭ್ರಮೆಗಳನ್ನು ಕಟ್ಟಿಕೊಂಡಿದ್ದ ಅವನಿಗೆ ನಿಜ ತಿಳಿಸಿ ನೋವುಂಟು ಮಾಡಲು ಅಲ್ಲಿದ್ದ ದೊಡ್ಡವರಿಗೆ ಯಾರಿಗೂ ಮನಸ್ಸು ಬರಲಿಲ್ಲ. ಆದ್ದರಿಂದ ಅವರು ಸುಮ್ಮನಿದ್ದರು. ಈ ಊರಿಗೆ ಹೊಸಬನಾಗಿದ್ದ ಪ್ರೊಜೆಕ್ಟರ್ ಚಾಲಕ ಹುಡುಗನಿಗೆ ನೋವಾಗದ ರೀತಿಯಲ್ಲಿ ಸತ್ಯ ಸಂಗತಿಯನ್ನು ತಿಳಿಸಬಹುದೆಂದು, ಅವರು ಅವನತ್ತ ನೋಡಿದರು. ಅವನು ಮೌನತಾಳಿ, ಪ್ರೊಜೆಕ್ಟರಿನ ಮೇಲೆ ಬಾಗಿ ಕೆಲಸ ಮಾಡುತ್ತಿರುವವನಂತೆ ನಟಿಸಿದ. ಅವಾಲ್‌ಬೈಕ್ ಮತ್ತೆ ಸಾರಿದ :

"ಅವನು ನಮ್ಮಪ್ಪನೆ ! ಖಂಡಿತ ನಮ್ಮಪ್ಪನೇ !"

ಅದಕ್ಕೆ ಹಿಂದೆ ಮಾತಾಡಿದ್ದ ಆ ಹಿರಿಯ ಹುಡುಗ ಕೇಳಿದ :

"ಆ ಸೈನಿಕರಲ್ಲಿ ಯಾರು ? ಹೇಳು."

"ಅಯ್ಯೊ ! ನೀನು ನೋಡಲಿಲ್ಲವ ? ಕೊನೆಯಲ್ಲಿ ಗ್ರೆನೇಡ್ ಹಿಡಿದು ಟ್ಯಾಂಕಿನ ಕಡೆ ಮುನ್ನುಗ್ಗಿದ್ದನಲ್ಲ, ಅವನೇ ! ಆಮೇಲೆ ಗುಂಡು ತಾಕಿ, ಹೀಗೆ ಬಿದ್ದನಲ್ಲ, ಅವನೇ !"

ಹೀಗೆನ್ನುತ್ತ ತನ್ನ ತಂದೆ ಕುಸಿದು ಬಿದ್ದದ್ದನ್ನು ಅವಾಲ್‌ಬೈಕ್ ತದ್ವತ್ತಾಗಿ ಅನುಕರಿಸುತ್ತ ಕೆಳಗುರುಳಿದ. ಅವನು ಪರದೆಯ ಎದುರು ರೆಕ್ಕೆ ಚಾಚಿದ ಹದ್ದಿನಂತೆ ಬಿದ್ದೇ ಇದ್ದ.

ಇದನ್ನು ಕಂಡ ಜನಕ್ಕೆ ನಗು ತಡೆಯಲಾಗಲಿಲ್ಲ. ಆದರೆ ಅವಾಲ್‌ಬೈಕ್ ಅದನ್ನು ಲೆಕ್ಕಿಸದೆ ಸತ್ತಂತೆ ಹಾಗೇ ಬಿದ್ದಿದ್ದ. ಮತ್ತೊಮ್ಮೆ ಕಸಿವಿಸಿಯ ಮೌನ ಪ್ರೇಕ್ಷಕರನ್ನು ಆವರಿಸಿತು.

ಆಗ ಮುದುಕಿಯೊಬ್ಬಳು : "ನಿನಗೇನಾಗಿದೆ ಜೇಯೆಂಗುಲ್ ? ಹೋಗಿ ನಿನ್ನ ಮಗನಿಗೆ ಸ್ವಲ್ಪ ಬುದ್ಧಿ ಹೇಳು" ಅಂದಳು.

ಜೇಯೆಂಗುಲ್ ನಿಧಾನವಾಗಿ ಮಗನ ಕಡೆ ನಡೆದಳು. ಜನ ಅವಳನ್ನೇ ನೋಡುತ್ತಿದ್ದರು. ಶೋಕದಿಂದ ಅವಳ ಮುಖ ಅಂದಗೆಟ್ಟಿತ್ತು. ಕಣ್ಣಲ್ಲಿ ನೀರು ಸುರಿಯುತ್ತಿತ್ತು. ಮಗನನ್ನು ಎತ್ತಿ ನಿಲ್ಲಿಸಿ, ಅಕ್ಕರೆ ತುಂಬಿದ ಮೆಲುದನಿಯಲ್ಲಿ ಅವಳು ಹೇಳಿದಳು : "ಬಾ ಮಗು, ಅವನೇ ನಿನ್ನ ತಂದೆ... ನಡಿ, ಹೋಗೋಣ."

ಇಬ್ಬರೂ ಆಚೆ ನಡೆದರು. ಚಂದ್ರ ನೆತ್ತಿಯ ಮೇಲೆ ಶೋಭಿಸಿದ್ದ. ಕಾರಿರುಳಿನ ಹಿನ್ನೆಲೆಯಲ್ಲಿ ಬೆಟ್ಟಗಳು ಬೆಳ್ಳಿಯ ಲೇಪ ತೊಟ್ಟಿದ್ದವು. ಅವುಗಳ ಕೆಳಗೆ, ಕಾಡು ಕಪ್ಪು ಕೋಳದಂತೆ ಕಾಣುತ್ತಿತ್ತು.

ಅವಾಲ್‌ಬೈಕ್‌ಗೆ ಈಗ ತನ್ನ ಜೀವನದಲ್ಲಿ ಮೊದಲ ಬಾರಿಗೆ ಪಿತೃವಿಯೋಗದ ಅರಿವಾಗಿತ್ತು. ಯುದ್ಧದಲ್ಲಿ ನೆಲಕ್ಕುರುಳಿದ ತಂದೆಯನ್ನು ನೆನೆದು, ತಾಳಲು ಅಸಾಧ್ಯವಾದ ವೇದನೆ, ದುಃಖ ಉಮ್ಮಳಿಸಿತು. ಅವನಿಗೆ ತಾಯಿಯನ್ನು ಅಪ್ಪಿಕೊಂಡು ಗಳಗಳ ಅಳಬೇಕೆನ್ನಿಸಿತು. ತಾಯಿಯೂ ತನ್ನ ಜೊತೆ ಅಳಬೇಕೆಂಬ ಬಯಕೆ ಉಂಟಾಯಿತು. ಆದರೆ ಅವಳು ಮೌನವಾಗಿದ್ದಳು. ಆದುದರಿಂದ ಅವನು ಕೂಡ ಮುಷ್ಟಿ ಬಿಗಿಹಿಡಿದು ಕಂಬನಿಯನ್ನು ಕಷ್ಟಪಟ್ಟು ತಡೆದು ಮುನ್ನಡೆದ.

ಯಾವಾಗಲೋ ಯುದ್ಧದಲ್ಲಿ ಮಡಿದಿದ್ದ ತಂದೆ, ಆ ಕ್ಷಣದಿಂದ ತನ್ನ ಮನಸ್ಸಿನಲ್ಲಿ ಪುನರ್ಜನ್ಮ ಪಡೆದು ತನ್ನ ಹೃದಯದಲ್ಲಿ ಬದುಕಲಾರಂಭಿಸಿದ್ದ ಎನ್ನುವುದು ಮಾತ್ರ ಅವಾಲ್‌ಬೈಕ್‌ನಿಗೆ ತಿಳಿದಿರಲಿಲ್ಲ.

*(ನವಕರ್ನಾಟಕ ಪ್ರಕಾಶನದ ವಿಶ್ವಕಥಾಕೋಶ – ೯ 'ಹೆಜ್ಜೆಗುರುತು'ವಿನಿಂದ ಆಯ್ದದ್ದು)*

ಮೂಲ : **ಚಿಂಗೀಜ್ ಐತ್‌ಮಾತವ್**
ಅನುವಾದ : **ಕೆ. ಎಸ್. ನಿಸಾರ್ ಅಹಮದ್**

## ಅಭಿನಂದನೆಗಳು...

ಕರ್ನಾಟಕ ಸರ್ಕಾರವು ನೀಡುವ ೨೦೧೭ನೇ ಸಾಲಿನ 'ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ'ಯು ಸ್ವಾತಂತ್ರ್ಯ ಹೋರಾಟಗಾರರಾದ ಶ್ರೀಯುತ ಎಚ್. ಎಸ್. ದೊರೆಸ್ವಾಮಿ ಅವರಿಗೆ ದೊರಕಿದೆ. ಇವರಿಗೆ 'ಹೊಸತು' ಹಾಗೂ 'ನವಕರ್ನಾಟಕ ಪ್ರಕಾಶನ'ದ ಅಭಿನಂದನೆಗಳು.






# ಸಂಪ್ರದಾಯದ ಕೋಟೆ ಮುರಿದ ಹೋರಾಟಗಾರ್ತಿ ಕೋಟೇಶ್ವರಮ್ಮ

## ಸಂದರ್ಶಕರು : ಡಾ|| ಎನ್. ಗಾಯತ್ರಿ ಮತ್ತು ಡಾ|| ಜಿ. ರಾಮಕೃಷ್ಣ

**ಹೊಸತು :** ನಮಸ್ಕಾರ. ಕನ್ನಡದಲ್ಲಿ ಪ್ರಕಟವಾಗಿರುವ ನಿಮ್ಮ ಆತ್ಮಕಥೆ 'ಒಂಟಿ ಸೇತುವೆ' ಓದಿದೆವು. ಬಹಳ ಹೃದಯಂಗಮವಾಗಿದೆ. ನಂತರ ನಿಮ್ಮನ್ನು ಭೇಟಿಯಾಗಿ, 'ಹೊಸತು' ಓದುಗರಿಗೆ ನಿಮ್ಮ ಸಂದರ್ಶನ ಮಾಡಬೇಕೆಂದೆನಿಸಿ ಬಂದಿದ್ದೇವೆ.

**ಕೋಟೇಶ್ವರಮ್ಮ:** ನಮಸ್ಕಾರ. ನೀವು ಬಂದದ್ದು ನನಗೂ ಸಂತೋಷ.

**ಹೊಸತು :** ನೀವು ರಾಷ್ಟ್ರೀಯ ಚಳುವಳಿ, ಸುಧಾರಣಾ ಚಳುವಳಿ, ಕಮ್ಯುನಿಸ್ಟ್ ಚಳುವಳಿ ಮತ್ತು ನಕ್ಸಲ್‌ಬಾರಿ ಚಳುವಳಿಗಳೊಂದಿಗೆ ಸಂಬಂಧವಿರಿಸಿಕೊಂಡವರು. ಈ ಒಟ್ಟು ಚಳುವಳಿಯ ಬದುಕಿನಲ್ಲಿ ಯಾವ ನೆನಪು ನಿಮಗೆ ಹೆಚ್ಚು ಪ್ರಿಯವಾದದ್ದು, ಹೆಚ್ಚು ಖುಷಿ ಕೊಡುತ್ತೆ?

**ಕೋಟೇಶ್ವರಮ್ಮ:** ನನಗೆ ಸಮ ಸಮಾಜವನ್ನು ಕಟ್ಟುವುದಕ್ಕಾಗಿ ಮಾಡಿದ ಎಲ್ಲ ಕೆಲಸಗಳೂ ನೆನಪಿಗೆ ಬರುತ್ತವೆ.

**ಹೊಸತು :** ಅದಿರಲಿ, ನೀವು ಇಷ್ಟಪಟ್ಟು ನೆನಪಿಸಿಕೊಳ್ಳುವ ಮತ್ತು ಎಲ್ಲರೊಡನೆ ಹಂಚಿಕೊಳ್ಳಬಯಸುವ ಕಾರ್ಯಗಳ ಕುರಿತು ಹೇಳಿ.

**ಕೋಟೇಶ್ವರಮ್ಮ:** ಆಗ ನಾನಿನ್ನೂ ಐದನೆಯ ತರಗತಿಯಲ್ಲಿದ್ದೆ. ನನಗೆ ಸುಮಾರು ಹತ್ತು ವರ್ಷವಿರಬಹುದು. ಶಾಲೆ ಮುಗಿಸಿ ಮನೆಗೆ ಹೊರಟಿದ್ದೆ. ದಾರಿಯಲ್ಲಿ ನಡೆದುಹೋಗುತ್ತಿರುವಾಗ ನಮ್ಮ ಊರಿನಲ್ಲಿ ಒಂದು ಸಾರ್ವಜನಿಕ ಸಭೆ ನಡೆಯುತ್ತಿತ್ತು. ಮಹಾತ್ಮ ಗಾಂಧಿಯವರು ಬಂದಿದ್ದರು. ಗಾಂಧಿಯನ್ನು ಸ್ವಾಗತಿಸುವುದಕ್ಕೋಸ್ಕರ ಮಹಿಳೆಯರು ಸಾಲುಗಟ್ಟಿ ನಿಂತಿದ್ದರು. ಅವರೆಲ್ಲಾ ತಮ್ಮ ಮೈಮೇಲಿದ್ದ ಆಭರಣಗಳನ್ನು ಗಾಂಧಿಗೆ ಬಿಚ್ಚಿಕೊಡುತ್ತಿದ್ದರು. ಅದನ್ನು ನೋಡಿದ ನಾನೂ ತಕ್ಷಣವೇ ನನ್ನ ಮೈಮೇಲಿದ್ದ ಸುಲಭವಾಗಿ ಕಳಚಬಹುದಾಗಿದ್ದ ಆಭರಣಗಳನ್ನು ತೆಗೆದು ಗಾಂಧಿಗೆ ಕೊಟ್ಟುಬಿಟ್ಟೆ. ಗಾಂಧಿ ನನ್ನನ್ನು ಹರಸಿದರು. ಹೀಗೆ ಚಿಕ್ಕ ವಯಸ್ಸಿನಲ್ಲಿಯೇ ಗಾಂಧೀಜಿಯವರಿಂದ ಆಶೀರ್ವಾದ ಪಡೆದವಳು ನಾನು. ಇದನ್ನು ನೆನಪಿಸಿಕೊಂಡಾಗ ಖುಷಿಯೆನಿಸುತ್ತದೆ.

ಇನ್ನು ಮಹಿಳಾ ಚಳುವಳಿಗಾರರು ಊರಿಗೆ ಬಂದಾಗ ಅವರೊಂದಿಗೆ ಅಸ್ಪೃಶ್ಯತೆಯನ್ನು ವಿರೋಧಿಸುತ್ತಾ, ಹೆಂಡವನ್ನು ವಿರೋಧಿಸುತ್ತಾ, ಖದ್ದರು ಪ್ರಚಾರ, ವಿದೇಶಿ ವಸ್ತು ಬಹಿಷ್ಕಾರದಂತಹ ಕಾರ್ಯಕ್ರಮಗಳಲ್ಲಿ ಭಾಗವಹಿಸಿ



ಹೋರಾಟಗಳ ನಾಡಾದ ಆಂಧ್ರದಲ್ಲಿ ಮಹಿಳೆಯರು ಆ ಹೋರಾಟಗಳಿಗೆ ಸರ್ವಶಕ್ತಿಯನ್ನು ಒದಗಿಸಿದವರು. ಅಂತಹವರಲ್ಲಿ ಕೊಂಡಪಲ್ಲಿ ಕೋಟೇಶ್ವರಮ್ಮ ಒಬ್ಬರು. ಚಳುವಳಿಯೊಂದರಲ್ಲಿ ಭಾಗಿಯಾಗುವ ಹೆಣ್ಣು ಮಾಡುವ ತ್ಯಾಗದ ಪರಾಕಾಷ್ಠೆಗೆ ಸಂಕೇತವಾದ ಕೋಟೇಶ್ವರಮ್ಮ ಈಗ ತಮ್ಮ ತೊಂಭತ್ತೇಳನೇ ವಯಸ್ಸಿನಲ್ಲೂ ಹೋರಾಟದ ಕಿಚ್ಚನ್ನು ನಂದದಂತೆ ತಮ್ಮಲ್ಲಿ ಕಾಯ್ದುಕೊಂಡವರು. ಈ ಧೀರೋದಾತ್ತ ಚೇತನವನ್ನು ವಿಶಾಖಪಟ್ಟಣದ ಅವರ ಮನೆಯಲ್ಲಿ ಇತ್ತೀಚೆಗೆ 'ಹೊಸತು' ಪತ್ರಿಕೆಗೆ ಡಾ|| ಜಿ. ರಾಮಕೃಷ್ಣ ಮತ್ತು ಡಾ|| ಎನ್. ಗಾಯತ್ರಿ ಸಂದರ್ಶಿಸಿದ್ದಾರೆ.

ಹಾಡುಗಳನ್ನು ಹಾಡುತ್ತಿದ್ದೆ. ನನ್ನಿಂದ ದೇಶಭಕ್ತಿಯ ಹಾಡುಗಳನ್ನು ಸಭೆಗಳಲ್ಲಿ ಹಾಡಿಸುತ್ತಿದ್ದರು. ನನ್ನದು ಮಧುರ ಕಂಠವೆಂದು ಎಲ್ಲರೂ ಹೊಗಳುತ್ತಿದ್ದರು.

**ಹೊಸತು :** ನೀವು ಕಮ್ಯುನಿಸ್ಟರಾದದ್ದು ಹೇಗೆ ?

**ಕೋಟೇಶ್ವರಮ್ಮ :** ನನಗೆ ನಾಲ್ಕೋ, ಐದೋ ವರ್ಷವಾಗಿದ್ದಾಗ ಸೋದರ ಮಾವ ವೀರಾರೆಡ್ಡಿಯೊಂದಿಗೆ ಮದುವೆಯಾಗಿತ್ತು. ಮದುವೆಯಾಗಿ ಒಂದೆರಡು ವರ್ಷಗಳಲ್ಲಿ ಪತಿ ಮರಣಿಸಿ ನಾನು ಬಾಲವಿಧವೆಯಾಗಿದ್ದೆ. ಈ ಯಾವ ಸಂಗತಿಯೂ ನನಗೆ ಗೊತ್ತಿರಲಿಲ್ಲ. ನಾನು ಶಾಲೆಯಲ್ಲಿ ಓದುತ್ತಿದ್ದಾಗ ಯಾರೋ ಮಾತನಾಡಿದ್ದು ಕೇಳಿ ಮನೆಗೆ ಬಂದು ನನ್ನ ಅಜ್ಜಿಯನ್ನು ಕೇಳಿ ವಿಷಯ ತಿಳಿದುಕೊಂಡೆ. ನಾನು ದೊಡ್ಡವಳಾದ ಮೇಲೆ ನನಗೆ ಮರುಮದುವೆ ಮಾಡಬೇಕೆಂಬುದು ನನ್ನ ಮನೆಯವರ ಇಂಗಿತವಾಗಿತ್ತು. ಅದಕ್ಕೆ ಪೂರಕವಾದ ಸುಧಾರಣಾ ಮನೋಭಾವ ನನ್ನ ಮನೆಯಲ್ಲಿತ್ತು. ನನ್ನ ಪತಿ ಸತ್ತಾಗ ನನಗೆ ಮತ್ತೆ ಮದುವೆ ಮಾಡಬೇಕೆಂದು ಕೋರಿದ್ದರಂತೆ. ಹೀಗಾಗಿ ನನಗೆ ವರನಿಗಾಗಿ ಶೋಧ ನಡೆಸಿದರು. ನಮ್ಮ ಬಂಧುವಾಗಿದ್ದ ರಾಮಸ್ವಾಮಿಯವರು ಚಂಡ್ರ ರಾಜೇಶ್ವರರಾವ್ ಅವರಲ್ಲಿ ಈ ವಿಷಯ ಪ್ರಸ್ತಾಪಿಸಿದರು. ರಾಜೇಶ್ವರರಾವ್ ಅವರು ಆಗ ರಾಜಕೀಯ ಶಿಬಿರಕ್ಕೆಂದು ಬಂದಿದ್ದ ಸೀತಾರಾಮಯ್ಯ ಎಂಬ ಯುವಕನನ್ನು ಆಯ್ಕೆಮಾಡಿ ಅವನಲ್ಲಿ ನನ್ನ ವಿಷಯ ಪ್ರಸ್ತಾಪಿಸಿ ನನ್ನ ಮದುವೆಗೆ ಕಾರಣರಾದರು. ಹೀಗಾಗಿ ಕಮ್ಯುನಿಸ್ಟ್ ಪಕ್ಷದ ನಿಷ್ಠಾವಂತ ಕಾರ್ಯಕರ್ತರಾಗಿದ್ದ ಕೊಂಡಪಲ್ಲಿ ಸೀತಾರಾಮಯ್ಯನವರನ್ನು ನಾನು ವರಿಸುವಂತಾಯಿತು. ಅವರನ್ನು ಮದುವೆಯಾದ ಮೇಲೆ ಪಕ್ಷದ ಮಹಿಳಾ ಸಂಘಗಳ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಕೊಂಡೆ. ರಾತ್ರಿ ಶಾಲೆಗಳನ್ನು ತೆರೆದು ಶಿಕ್ಷಣ ನೀಡುವುದು, ಅಂತರ್ಜಾತೀಯ ವಿವಾಹ, ವಿಧವಾ ವಿವಾಹಗಳನ್ನು ನಡೆಸುವಲ್ಲಿ ಮುಂದಾದೆವು. ಗುಂಟೂರು ಜಿಲ್ಲೆಯಲ್ಲಿ ಒಮ್ಮೆ ನಾವು ರಾಜ್ಯಮಟ್ಟದ ಮಹಿಳಾ ಸಮಾವೇಶವನ್ನು ಏರ್ಪಡಿಸಿದಾಗ ಅದರಲ್ಲಿ ಹಜರಾ ಬೇಗಂರಂತಹ ಹಿರಿಯ ನಾಯಕಿಯರು ಭಾಗವಹಿಸಿದ್ದರು. ಆಗ ಪಕ್ಷ ಪ್ರಕಟಿಸುತ್ತಿದ್ದ "ಆಂಧ್ರ ಮಹಿಳಾ" ಪತ್ರಿಕೆಗೂ ಕೆಲಸ ಮಾಡುತ್ತಿದ್ದೆ.

**ಹೊಸತು :** ನಿಮ್ಮ ಕ್ರಾಂತಿಕಾರಿ ಭೂಗತ ಜೀವನದ ಬಗ್ಗೆ ಹೇಳಿ.

**ಕೋಟೇಶ್ವರಮ್ಮ :** ರಾಜ್ಯ ಕಮ್ಯುನಿಸ್ಟ್ ನಾಯಕರಿಂದ ಮೊದಲುಗೊಂಡು ತಾಲ್ಲೂಕು ಮಟ್ಟದ ನಾಯಕರವರೆಗೆ ಎಲ್ಲರೂ ಭೂಗತ ಜೀವನಕ್ಕೆ ನಡೆದಿದ್ದರು. ಆಗ ರಹಸ್ಯ ಕಾರ್ಯಾಚರಣೆ ನಡೆಸಲು ನಾಯಕರ ಪತ್ನಿಯರನ್ನು, ಕೆಲವು ಮಹಿಳಾ ಕುಟುಂಬ ಸದಸ್ಯರನ್ನು ಪಕ್ಷವು ಹೋರಾಟಕ್ಕೆ ಇಳಿಸಿತು. ಇಂತಹ ಹೋರಾಟಗಳಲ್ಲಿ ನಾನು ಇತರರೊಡನೆ ಧೈರ್ಯವಾಗಿ ಮುನ್ನುಗ್ಗಿ ನಡೆದೆ, ನಮ್ಮ ತಾಯಿಯೂ ಈ ಹೋರಾಟದಲ್ಲಿ ಧುಮುಕಿದರು. ನಾವು ಅಡಗುತಾಣಗಳಲ್ಲಿ ಸರಿಯಾಗಿ ಊಟ, ನಿದ್ರೆಯಿಲ್ಲದೆ, ನಮ್ಮ ಸಣ್ಣ ಮಕ್ಕಳಿಂದ ದೂರವಿದ್ದು ಪಡಬಾರದ ಪಾಡುಪಟ್ಟೆವು. ಭೂಗತರಾಗಿದ್ದಾಗ, ತಮ್ಮ ಇರವು ಪೊಲೀಸರಿಗೆ ತಿಳಿಯಬಾರದೆಂದು ಬಸಿರಾದ ಮಹಿಳೆಯರು ತಮ್ಮ ಬಸಿರು ಇಳಿಸಿಕೊಳ್ಳುತ್ತಿದ್ದುದು ಸಾಮಾನ್ಯವಾಗಿತ್ತು. ನಾನೂ ಒಮ್ಮೆ ನನ್ನ ಬಸಿರು ಇಳಿಸಿಕೊಂಡು ನಿತ್ರಾಣಳಾಗಿ ಸಾಯುವಂತಾಗಿದ್ದೆ. ಯಾವುದೋ ಗಂಡಸರಿಗೆ ರಕ್ಷಣೆಗಾಗಿ ಅವರ ಹೆಂಡಂದಿರಂತೆ, ಮಗಳಂತೆ, ತಾಯಿಯಂತೆ ಪಾತ್ರವಹಿಸಿ ನಾವು ಪ್ರಯಾಣ ಮಾಡುತ್ತಿದ್ದೆವು. ಇವೆಲ್ಲಾ ಅಂದಿನ ಕ್ರಾಂತಿಕಾರಿ ಹೆಣ್ಣುಮಕ್ಕಳು ತೆಗೆದುಕೊಳ್ಳುತ್ತಿದ್ದ ರಿಸ್ಕ್‌ಗಳಾಗಿದ್ದವು.

**ಹೊಸತು :** ನೀವು ಚಳುವಳಿಗೆ ಕಾಲಿಟ್ಟ ಸಂದರ್ಭದಲ್ಲಿ ರಷ್ಯಾದ ಅಕ್ಟೋಬರ್ ಕ್ರಾಂತಿಯ ಪ್ರಭಾವ ಹೇಗಿತ್ತು?



**ಕೋಟೇಶ್ವರಮ್ಮ ಮತ್ತು ಮೊಮ್ಮಗಳು ಸುಧಾ ಜೊತೆ ಲೇಖಕಿ**

೨೦೦೮ರ ಅಕ್ಟೋಬರ್‌ನಲ್ಲಿ ಡಾ॥ ಜಿ. ರಾಮಕೃಷ್ಣ ಅವರ ಜೊತೆಯಲ್ಲಿ ಹೈದರಾಬಾದ್ ಕೇಂದ್ರೀಯ ವಿಶ್ವವಿದ್ಯಾಲಯದ ಕಾರ್ಯಕ್ರಮದಲ್ಲಿ ಭಾಗವಹಿಸಲು ಹೋಗಿದ್ದೆ. ಆ ಕಾರ್ಯಕ್ರಮಗಳೆಲ್ಲಾ ಮುಗಿದ ನಂತರ ಅಲ್ಲಿನ ಸ್ನೇಹಿತರೊಬ್ಬರು ನಮ್ಮನ್ನು ಹೈದರಾಬಾದಿನಲ್ಲಿದ್ದ ಸಿ. ಪಿ. ಐ. ಮುಖಂಡ ಸಿ. ರಾಜೇಶ್ವರ ರಾವ್ ಅವರ ಹೆಸರಿನಲ್ಲಿರುವ ವೃದ್ಧಾಶ್ರಮವನ್ನು ತೋರಿಸಲು ಕರೆದುಕೊಂಡು ಹೋದರು. ಆಶ್ರಮವನ್ನು ಒಂದು ಸುತ್ತು ಹಾಕಿ ಬರುವಾಗ ಅಲ್ಲಿದ್ದ ಆಶ್ರಮವಾಸಿಗಳನ್ನು ನಮಗೆ ಪರಿಚಯಿಸಿದರು. ಅದರಲ್ಲಿ ಒಬ್ಬಾಕೆ ತೆಳ್ಳಗೆ, ಬೆಳ್ಳಗೆ, ಎತ್ತರದ ನಿಲುವಿನ ಹಾಗೂ ಅತ್ಯಂತ ನೀಟಾಗಿ ಸೀರೆಯುಟ್ಟವರು ನನ್ನ ಗಮನ ಸೆಳೆದರು. ನೋಡಲು ವಯಸ್ಸಾಗಿದ್ದರೂ, ಕೊಂಚವೂ ದಣಿವಿಲ್ಲದೆ ಅಲ್ಲೇ ಅಡ್ಡಾಡುತ್ತಿದ್ದ ಆಕೆಯನ್ನು "ಇವರು ಕೊಂಡಪಲ್ಲಿ ಸೀತಾರಾಮಯ್ಯನವರ ಪತ್ನಿ" ಎಂದು ನಮಗೆ ಪರಿಚಯಿಸಿದರು. ದಿಗ್ಗನೆ ನನ್ನ ಮನಸ್ಸಿನಲ್ಲಿ ಹೊತ್ತಿದ್ದ ಬೆಳಕಿನಲ್ಲಿ ಆಗ ನಾನು ಓದಿ, ತಿಳಿದಿದ್ದ ಕಮ್ಯುನಿಸ್ಟ್ ನಾಯಕ 'ಪೀಪಲ್ಸ್ ವಾರ್ ಗ್ರೂಪ್'ನ ಕೊಂಡಪಲ್ಲಿ ಸೀತಾರಾಮಯ್ಯ ನೆನಪಾದರು. ಆಕೆಯನ್ನು ಮತ್ತೊಮ್ಮೆ ದಿಟ್ಟಿಸಿ ನೋಡಿದೆ. ಒಬ್ಬ ಭೂಗತ ನಕ್ಸಲ್ ನಾಯಕನ ಪತ್ನಿಯಾಗಿ ಈಕೆ ಅದೆಷ್ಟು ಕಷ್ಟ, ನಷ್ಟ ಅನುಭವಿಸಿದ್ದಾರೋ ಎಂಬ ಆಲೋಚನೆಯೊಂದು ಮನಸ್ಸಿನಲ್ಲಿ ಸುಳಿದುಹೋಯಿತು. ಆಗ ಅವರು ನನಗೆ ಕಂಡದ್ದು ಕ್ರಾಂತಿಕಾರಿಯೊಬ್ಬನ ಮಡದಿಯಾಗಿ ಮಾತ್ರ. ಆಕೆಯೇ ಸ್ವತಃ ಏನು ಮಾಡಿರಬಹುದು ಎಂದು ಯೋಚಿಸಲೂ ಇಲ್ಲ, ಸನಿಹದಲ್ಲಿದ್ದವರನ್ನು ಕೇಳಲೂ ಇಲ್ಲ.

ಕಳೆದ ವರ್ಷ ನವಕರ್ನಾಟಕ ಪ್ರಕಾಶನ ಹೊರತಂದ ಶ್ರೀ. ಸ. ರಘುನಾಥ ಅವರು ಕನ್ನಡಕ್ಕೆ ಅನುವಾದಿಸಿರುವ ಕೊಂಡಪಲ್ಲಿ ಕೋಟೇಶ್ವರಮ್ಮ ಅವರ ಆತ್ಮಕಥನ "ಒಂಟಿ ಸೇತುವೆ" ಪುಸ್ತಕವನ್ನು ಓದುತ್ತಿದ್ದಾಗ, ಹೈದರಾಬಾದಿನಲ್ಲಿ ಹಿಂದೆ ನಾನು ಆಕೆಯನ್ನು ಭೇಟಿ ಮಾಡಿದ ಘಟನೆ ನೆನಪಾಯಿತು. ಒಂದೇ ವೇಗದಲ್ಲಿ ನಿಲ್ಲಿಸದೆ ಈ ಪುಸ್ತಕವನ್ನು ಓದಿ ಮುಗಿಸಿದ ಮೇಲೆ ಅದ್ಭುತ ಚೇತನವೊಂದನ್ನು ನಾನು ಮುಖಾಮುಖಿಯಾದ ಅನುಭವವಾಯಿತು. ಹಾಗೆಯೇ ಅವರನ್ನು ಕಣ್ಣೆದುರಿಗೇ ಸಿಕ್ಕಾಗ ಇನ್ನಷ್ಟು ಮಾತನಾಡಿಸಲಿಲ್ಲವಲ್ಲಾ ಎಂದು ಬೇಸರ ಮತ್ತು ನನ್ನ ಬಗ್ಗೆಯೇ ನಾಚಿಕೆ, ಜಿಗುಪ್ಸೆ ಉಂಟಾಯಿತು. ಅಷ್ಟೇ ಅಲ್ಲ, ಹೇಗಾದರೂ ಮಾಡಿ ಅವರನ್ನು ಕೂಡಲೇ ಭೇಟಿಯಾಗಿ ಮಾತನಾಡಿಸಬೇಕು, ಎಂಬ ತೀವ್ರವಾದ ಆಸೆಯೊಂದು ಮನಸ್ಸಿನಲ್ಲಿ ಹುಟ್ಟಿ ಅದು ನನಸಾಗುವುದಕ್ಕೆ ಒಂದು ವರ್ಷ ಕಾಯಬೇಕಾಯಿತು. ವಿಶಾಖಪಟ್ಟಣದಲ್ಲಿ ಮೊಮ್ಮಗಳು ಸುಧಾಳ ಮನೆಯಲ್ಲಿ ವಾಸವಾಗಿರುವ ಅವರನ್ನು ಸಂಪರ್ಕಿಸಿ ಅವರನ್ನು ಭೇಟಿಮಾಡಬೇಕೆಂಬ ನಮ್ಮ ಕೋರಿಕೆ ಮಂಡಿಸಿದೆ. ಅಜ್ಜಿ ಮತ್ತು ಮೊಮ್ಮಗಳು ನಮ್ಮನ್ನು ಸಂತೋಷದಿಂದ ಅವರ ಮನೆಯಲ್ಲಿಯೇ ಉಳಿದುಕೊಳ್ಳುವಂತೆ ನೀಡಿದ ಆಹ್ವಾನವನ್ನು ಮನ್ನಿಸಿ ಕಳೆದ ತಿಂಗಳು ಸೆಪ್ಟೆಂಬರ್‌ನಲ್ಲಿ ಅವರನ್ನು ಭೇಟಿಯಾದೆವು.

**ಕೋಟೇಶ್ವರಮ್ಮ :** ನಮ್ಮ ನಾಯಕರು ನಮಗೆ ಅಧ್ಯಯನ ಶಿಬಿರ ಮತ್ತು ತರಗತಿಗಳಲ್ಲಿ ರಷ್ಯಾ ಜನತೆಯ ಹೋರಾಟದ ಕತೆಯನ್ನು ಹೇಳುತ್ತಿದ್ದರು. ಅಷ್ಟೇ ಅಲ್ಲ, ಅವರೂ ತಮ್ಮ ಹೋರಾಟದ ಕಾರ್ಯತಂತ್ರ ರೂಪಿಸಿಕೊಳ್ಳಲು ರಷ್ಯಾದ ಅನುಭವದತ್ತ ನೋಡುತ್ತಿದ್ದರು. ಇನ್ನು ಮಹಿಳೆಯರ ತ್ಯಾಗ, ಬಲಿದಾನಗಳನ್ನು ನೆನಪಿಸಿಕೊಳ್ಳುವಾಗಲೆಲ್ಲಾ ಗೋರ್ಕಿಯ ತಾಯಿಯ ವ್ಯಕ್ತಿತ್ವವನ್ನು ನಮಗೆ ನೆನಪಿಸಿಕೊಡುತ್ತಿದ್ದರು. ನಮಗೆಲ್ಲರಿಗೂ ಗೋರ್ಕಿಯ ತಾಯಿಯ ಕಥೆ ಚೈತನ್ಯ, ಉತ್ಸಾಹ ತುಂಬುವ ಸಂಜೀವಿನಿಯಾಗಿತ್ತು.

**ಹೊಸತು :** ನಿಮ್ಮ ಹೋರಾಟದ ಬದುಕಿನಲ್ಲಿ ಕಲೆಯ ಪಾತ್ರವೂ ಮುಖ್ಯವಾಗಿದ್ದಂತೆ ಕಾಣುತ್ತದೆ, ಅಲ್ವಾ ?

**ಕೋಟೇಶ್ವರಮ್ಮ :** ಹೌದು, ನಾನು ತುಂಬ ಚಿಕ್ಕವಳಿದ್ದಾಗಲೇ ಸಾರ್ವಜನಿಕ ಸಭೆಗಳಲ್ಲಿ ದೇಶಭಕ್ತಿ ಗೀತೆಗಳನ್ನು ಹಾಡುತ್ತಿದ್ದೆ. ನಾನು ರಾಜಕೀಯ ರಂಗ ಪ್ರವೇಶಿಸಿದ ಮೇಲೆ ಕ್ರಾಂತಿಕಾರಕ ಗೀತೆಗಳನ್ನು ಒಬ್ಬಳೇ, ಕೆಲವೊಮ್ಮೆ ಇತರರೊಡನೆ ಸೇರಿ ಹಾಡುತ್ತಿದ್ದೆ. ನನ್ನ ಮತ್ತೊಂದು ಕ್ರಿಯಾಶೀಲತೆಯೆಂದರೆ, ೧೯೪೩ರಲ್ಲಿ ಅಭ್ಯುದಯ ರಚಯಿತುಲ ಸಂಘಂ (ಪ್ರಗತಿಶೀಲ ಲೇಖಕರ ಸಂಘ) ಹುಟ್ಟಿ ಕಾರ್ಯ ನಿರ್ವಹಿಸ ತೊಡಗಿದಾಗ ಮೊದಲಿಗೆ ಗುರುಜಾಡ ಅಪ್ಪಾರಾವ್ ಅವರ ಗೌರವಾರ್ಥ "ಕನ್ಯಾಶುಲ್ಕ" ನಾಟಕದಲ್ಲಿ ಅಭಿನಯಿಸಿದೆ. ಅನಂತರ "ಪ್ರಜಾನಾಟ್ಯ ಮಂಡಲಿ" ಹುಟ್ಟಿಕೊಂಡಾಗ ಅದು ಪ್ರದರ್ಶಿಸಿದ 'ಮುಂದಡಗು', 'ಮಾ ಭೂಮಿ', ನಾಟಕಗಳಲ್ಲೂ ನಾನು ಅಭಿನಯಿಸಿದ್ದೆ. ಬರಗಾಲದ ದೃಶ್ಯಗಳನ್ನು ಕಣ್ಣಿಗೆ ಕಟ್ಟುವಂತಹ 'ಇದೇ ಲೋಕ' ನಾಟಕದಲ್ಲಿನ ನನ್ನ ಅಭಿನಯಕ್ಕೆ ಅಪಾರ ಮೆಚ್ಚುಗೆ ವ್ಯಕ್ತವಾಯಿತಲ್ಲದೆ, ಸೋವಿಯತ್ ದೇಶದ ಪ್ರತಿನಿಧಿಗಳು ನನಗೆ ಬಹುಮಾನ ಕೊಟ್ಟು ಸನ್ಮಾನಿಸಿದರು. ದುರ್ಗಾಬಾಯಿ ದೇಶಮುಖ್ ಅವರನ್ನು ಕುರಿತೇ ಒಂದು ಬುರ್ರಕಥೆ ರಚಿಸಿ ಅದನ್ನು ಹಾಡಿ ಅಭಿನಯಿಸಿದ್ದೆವು. ಆಕಾಶವಾಣಿಯ ನಾಟಕಗಳಲ್ಲಿ ಅಭಿನಯಿಸುತ್ತಿದ್ದೆ.

**ಹೊಸತು :** ನೀವು ಬರಹಗಾರರಾಗಿಯೂ ಹೆಸರಾದವರು. ನಿಮ್ಮ ಬರಹದ ಮೂಲ ಪ್ರೇರಣೆ ಮತ್ತು ವಸ್ತು ಯಾವುದು ?

**ಕೋಟೇಶ್ವರಮ್ಮ :** ನಾನು ಬೇರೆಯವರು ರಚಿಸಿದ ಹಾಡುಗಳನ್ನು ಹಾಡುತ್ತಿದ್ದೆನಾದರೂ ಕೆಲವೊಮ್ಮೆ ನಾನೇ ಸಂದರ್ಭಕ್ಕೆ ತಕ್ಕಂತೆ ಹಾಡುಗಳನ್ನು ರಚಿಸುತ್ತಿದ್ದೆ. ಹೀಗೆ ನಾನು ಬರೆದ "ತೆಲಗು ದೇಶವಮ್ಮ ನಮ್ಮದು" ಕವನ ಅಪಾರ ಜನಪ್ರಿಯತೆಯನ್ನು ಗಳಿಸಿದ್ದಲ್ಲದೆ, ಅದು ಹೋರಾಟದ ಜನರ ಬಾಯಲ್ಲಿ ಸದಾ ಗುಣುಗುಣಿಸತೊಡಗಿತ್ತು.

ನನ್ನಿಂದ ದೂರ ಸರಿದ ಪತಿ ಸೀತಾರಾಮಯ್ಯ, ಹೋಗುವಾಗ ಮಕ್ಕಳನ್ನು ತನ್ನೊಡನೆ ಕರೆದುಕೊಂಡು ಹೋಗಿ ನನ್ನನ್ನು ತಬ್ಬಲಿ ಮಾಡಿದರು. ಆ ಸಂದರ್ಭದಲ್ಲಿ ಎಷ್ಟೇ ದುಃಖ ತುಂಬಿದ್ದರೂ ಜೀವನ ನಿರ್ವಹಣೆಗೆ, ಬದುಕಿಗೊಂದು ಅರ್ಥ ಕಂಡುಕೊಳ್ಳಲು ಅರ್ಧದಲ್ಲೇ ಬಿಟ್ಟುಹೋಗಿದ್ದ ನನ್ನ ಶಿಕ್ಷಣವನ್ನು




ಮುಂದುವರಿಸಲು ಹೈದರಾಬಾದ್‌ನಲ್ಲಿದ್ದ ದುರ್ಗಾಬಾಯಿ ದೇಶಮುಖ್ ಕಟ್ಟಿದ ಆಂಧ್ರ ಮಹಿಳಾ ಸಭಾದ ಹಾಸ್ಟೆಲ್‌ನಲ್ಲಿದ್ದು ಓದಿ ಮೆಟ್ರಿಕ್‌ನಲ್ಲಿ ತೇರ್ಗಡೆ ಹೊಂದಿದೆ. ನಂತರ ಕಾಕಿನಾಡ ಪಾಲಿಟೆಕ್ನಿಕ್ ಹಾಸ್ಟೆಲ್‌ನಲ್ಲಿ ಮೇಟ್ರನ್ ಆಗಿ ಕೆಲಸ ಮಾಡುತ್ತಿದ್ದಾಗ ನನ್ನ ದುಃಖ ಮರೆಯಲು ಸಾಹಿತ್ಯ ರಚನೆಯಲ್ಲಿ ತೊಡಗಿಕೊಂಡೆ. ಆರಂಭದಲ್ಲಿ ನಾನು ಬರೆದ 'ಅಮ್ಮ ಹೇಳಿದ ಕತೆ' ಆಂಧ್ರಪ್ರಭ ಪತ್ರಿಕೆಯಲ್ಲಿ ಪ್ರಕಟವಾಯಿತು. ನಂತರ 'ಏನೆಂದು ಬರೆಯಲಿ' ಕತೆಯು ಅಭ್ಯುದಯ ಪತ್ರಿಕೆಯಲ್ಲಿ ಪ್ರಕಟವಾಯಿತು. ನಿಜವಾಗಿಯೂ ನನ್ನನ್ನು ಸಾಹಿತಿಯಾಗಿಸಿದ್ದು ಕಾಕಿನಾಡ. ಮೆಟ್ರಿಕ್ ಪಾಸಾದ ಮೇಲೆ ಕಾಕಿನಾಡ ಬಾಲಕಿಯರ ಪಾಲಿಟೆಕ್ನಿಕ್ ಹಾಸ್ಟೆಲ್‌ನಲ್ಲಿ ಮೇಟ್ರನ್ ಕೆಲಸಕ್ಕೆ ಸೇರಿದೆ. ಅಲ್ಲಿ ನಡೆಯುತ್ತಿದ್ದ 'ಸಾಹಿತ್ಯ ಲಹರಿ' ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದೆ. ಕವಿ ಸಮ್ಮೇಳನಗಳಲ್ಲಿ ನನ್ನ ಕವನಗಳನ್ನು ಓದುವ ಅವಕಾಶ ಸಿಕ್ಕುತ್ತಿತ್ತು. 'ಅಶ್ರು ಸಮೀಕ್ಷಣಂ' ನನ್ನ ಕವನ ಸಂಕಲನ. 'ಅಮ್ಮ ಚೆಪ್ಪಿನ ಕಥಲು' ಎಂಬ ಕಥನಗೀತೆಗಳನ್ನು ಬರೆಯುತ್ತಿದ್ದೆ. ಅದು ಸಂಕಲನವಾಗಿ ಹೊರಬಂದಿತು. ಅಭ್ಯುದಯ ರಚಯಿತುಲ ಸಂಘಂನಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದೆ.

**ಹೊಸತು :** ನಿಮ್ಮ ಹೋರಾಟದ ಸಂದರ್ಭದಲ್ಲಿ, ಚರಿತ್ರೆಯಲ್ಲಿ ಪ್ರಖ್ಯಾತರಾದ ಹಲವಾರು ಮಹನೀಯರನ್ನು ನೀವು ಭೇಟಿಯಾಗುವ ಸದವಕಾಶ ಒದಗಿಬಂದಿರಬಹುದು. ಅವರ ನೆನಪನ್ನು ಸ್ವಲ್ಪ ಹೇಳುತ್ತೀರಾ ?

**ಕೋಟೇಶ್ವರಮ್ಮ :** ನಾನು ಚಿಕ್ಕವಳಿದ್ದಾಗ ಆಗಲೇ ಹೇಳಿದಂತೆ ಗಾಂಧಿಯವರನ್ನು ನೋಡಿದ್ದೆ. ಅವರಿಗೆ ನನ್ನ ಒಡವೆಗಳನ್ನು ದಾನವಾಗಿ ಕೊಟ್ಟಿದ್ದೆ. ಹಾಗೆಯೇ, ಸರೋಜಿನಿ ನಾಯ್ಡು ನಮ್ಮ ಊರಿಗೆ ಬಂದಿದ್ದಾಗ ಅವರಿಗೆ ನನ್ನ ಕೈಯಲ್ಲಿಯೇ ನೂಲಿನ ಹಾರವನ್ನು ಹಾಕಿಸಿದ್ದರು. ಒಮ್ಮೆ ಕಾಮ್ರೇಡ್ ಪಾರ್ವತಿ ಕೃಷ್ಣನ್ ಅವರ ಜೊತೆಗೂಡಿ ಚುನಾವಣಾ ಪ್ರಚಾರ ಕೈಗೊಂಡಿದ್ದೆ. ದುರ್ಗಾಬಾಯಿ ದೇಶಮುಖ್


ಬೀಚಿನಲ್ಲಿ ಜಿ. ಆರ್. ರವರೊಂದಿಗೆ

ವಿಶಾಖಪಟ್ಟಣದ ರೈಲ್ವೇ ನಿಲ್ದಾಣದಲ್ಲಿ ನಮ್ಮನ್ನು ಬರಮಾಡಿಕೊಂಡ ಕಾಮ್ರೇಡರು ನಮ್ಮನ್ನು ನೇರವಾಗಿ ಕೋಟೇಶ್ವರಮ್ಮ ಅವರಿದ್ದ ಅಪಾರ್ಟ್‌ಮೆಂಟಿಗೆ ಕರೆದೊಯ್ದರು. ಮನೆಯೊಳಗೆ ಕಾಲಿಡುತ್ತಿದ್ದಂತೆ ಅಲ್ಲಿಯೇ ಹಾಸಿಗೆಯ ಮೇಲೆ ಒರಗಿಕೊಂಡು ನ್ಯೂಸ್ ಪೇಪರ್ ಓದುತ್ತಿದ್ದ ತೊಂಭತ್ತೇಳರ ಅಜ್ಜಿ ಧಡಕ್ಕನೆ ಎದ್ದು ಕೂತು ನಮ್ಮನ್ನು ಸ್ವಾಗತಿಸಲು ಸಿದ್ಧರಾದರು. ಆತ್ಮೀಯವಾಗಿ ನಮ್ಮನ್ನು ಸ್ವಾಗತಿಸಿದೊಡನೆ ಕೇಳಿದ ಮೊದಲ ಪ್ರಶ್ನೆ, "ನಿಮಗೆ ಗೌರಿ ಲಂಕೇಶ್ ಗೊತ್ತಾ ?" ಹೌದೆಂದು, ಪಕ್ಕದಲ್ಲಿ ನಿಂತಿದ್ದ ಜಿ. ಆರ್. ಅವರನ್ನು ತೋರಿಸಿ, "ಗೌರಿ ಇವರ ಶಿಷ್ಯೆ" ಎಂದು ಪರಿಚಯಿಸಿದ್ದೇ, ಸ್ವಲ್ಪ ಕಾಲ ನಾವು ಆಡಿದ ಮಾತೆಲ್ಲಾ 'ಗೌರಿ ಹತ್ಯಾ ಪ್ರಕರಣ'ವನ್ನು ಕುರಿತಾಗಿತ್ತು. ದಿನಕ್ಕೆ ಆರು ಪತ್ರಿಕೆಗಳನ್ನು ಕೂಲಂಕಷವಾಗಿ ಓದುವ ಈ ಅಜ್ಜಿಯ ಜೀವನೋತ್ಸಾಹ ಕಂಡು ನಿಬ್ಬೆರಗಾದೆ. ಮನೆಯಲ್ಲೆಲ್ಲಾ ವಾಕರ್ ಹಿಡಿದು ಓಡಾಡುವ ಈ ಅಜ್ಜಿ ಸಂಜೆ ನಾವು ಸಮುದ್ರ ತೀರ ನೋಡಲು ಹೊರಟರೆ, ನಮ್ಮೊಂದಿಗೆ ಅವರೂ ಸಿದ್ಧವಾಗಿ ನಿಂತರು. ಅವರ ಮನೆಯಲ್ಲಿದ್ದ ಎರಡೂ ದಿನ ಸಂಪೂರ್ಣವಾಗಿ ನಮ್ಮೊಡನೆ ಮಾತುಕತೆ, ತಿರುಗಾಟ, ಎಲ್ಲದರಲ್ಲೂ ಸಮಭಾಗಿಯಾಗಿದ್ದರು. ಅವರು ನಿರರ್ಗಳವಾಗಿ ಮಾತನಾಡಲು ತೊಡಗಿದರೆಂದರೆ ಅವರ ಅಸಾಧ್ಯ ನೆನಪಿನ ಶಕ್ತಿ ನಮಗೆ ಅಚ್ಚರಿಯನ್ನು ಹುಟ್ಟಿಸುತ್ತಿತ್ತು.



ಮೇಟ್ರನ್ ಕೋಟೇಶ್ವರಮ್ಮ

ಹೋರಾಟಗಳ ನಾಡಾದ ಆಂಧ್ರದ ಕೃಷ್ಣ ಜಿಲ್ಲೆಯ ಪಾಮರುವಿನಲ್ಲಿ ಅನುಕೂಲಸ್ಥ ಮಧ್ಯಮ ವರ್ಗದ ರೆಡ್ಡಿ ಕುಟುಂಬದಲ್ಲಿ ೧೯೨೦ರಲ್ಲಿ ಹುಟ್ಟಿದ ಕೋಟೇಶ್ವರಮ್ಮನವರಿಗೆ, ಮನೆಯಲ್ಲಿ ಅವರು ಹುಟ್ಟಿದಂದಿನಿಂದಲೇ ರಾಷ್ಟ್ರೀಯತಾವಾದದ ಪರಿಸರ ದೊರಕಿತ್ತು. ಬಾಲ್ಯದಲ್ಲಿ ಅವರು ಕಂಡ ಸದಾ ಚರಕದಿಂದ ನೂಲು ತೆಗೆಯುತ್ತಾ ಕುಳಿತಿರುತ್ತಿದ್ದ ತಾಯಿ, ಅವರ ಬದುಕಿನ ಕೊನೆಯವರೆಗೂ ಇವರ ಎಲ್ಲ ಹೋರಾಟದ ಚಟುವಟಿಕೆಗಳಿಗೆ ಬೆಂಬಲವಾಗಿ ನಿಂತವರು. ಚಿಕ್ಕವಳಿರುವಾಗ ಸುಶ್ರಾವ್ಯವಾಗಿ ಹಾಡುತ್ತಿದ್ದ ಕೋಟೇಶ್ವರಮ್ಮನ ಸುಮಧುರ ಕಂಠಕ್ಕೆ ತಂದೆ ಹೆಮ್ಮೆ ಪಡುತ್ತಿದ್ದರು. ಅವರಿಗೆ ನಾಲ್ಕೈದು ವರ್ಷವಿದ್ದಾಗಲೇ ಸೋದರ ಮಾವ ವೀರಾರೆಡ್ಡಿಯೊಂದಿಗೆ ಅವರ ಮದುವೆ ನಡೆದುಹೋಗಿತ್ತು. ಮದುವೆಯಾದ ಎರಡು ವರ್ಷಕ್ಕೆ ಅವರ ಗಂಡ ಕ್ಷಯ ರೋಗದಿಂದ ತೀರಿಹೋಗಿದ್ದರು. ಒಟ್ಟಿನಲ್ಲಿ ಅವರಿಗೆ ಆರೇಳು ವರ್ಷ ವಯಸ್ಸಾಗಿದ್ದಾಗಲೇ ವಿಧವೆಯ ಪಟ್ಟ ಬಂದಿತ್ತು. ಬುದ್ಧಿ ಬರುವುದಕ್ಕಿಂತ ಮುಂಚೆಯೇ ವಿಧವೆಯಾಗಿದ್ದ ಕೋಟೇಶ್ವರಮ್ಮ ಕಮ್ಯುನಿಸ್ಟ್ ಕಾರ್ಯಕರ್ತರಾಗಿದ್ದ ಕೊಂಡಪಲ್ಲಿ ಸೀತಾರಾಮಯ್ಯನವರನ್ನು ಮದುವೆಯಾದದ್ದು ಕ್ರಾಂತಿಕಾರಿಗಳಲ್ಲಿ ಉತ್ಸಾಹವನ್ನು, ನೆಂಟರಲ್ಲಿ ದ್ವೇಷವನ್ನು ಒಟ್ಟಿಗೆ ಹುಟ್ಟಿಸಿತು. ಮದುವೆಯ ನಂತರ ಆಕೆಯೂ ಕಮ್ಯುನಿಸ್ಟ್ ಪಕ್ಷ ಸೇರಿ, ಎರಡು ಬಾರಿ ಪಕ್ಷ ನಿಷೇಧಿಸಲ್ಪಟ್ಟಾಗ ಭೂಗತಳಾಗಿ ಪಡಬಾರದ ಪಾಡು ಪಟ್ಟ ಕೋಟೇಶ್ವರಮ್ಮನ ರೋಮಾಂಚಕಾರಿ ಜೀವನಗಾಥೆ ಅವರ ಆತ್ಮಕಥೆ 'ಒಂಟಿ ಸೇತುವೆ'ಯಲ್ಲಿ ಬಿಚ್ಚಿಕೊಳ್ಳುತ್ತದೆ.

ಹೋರಾಟದ ಅಜ್ಞಾತವಾಸವೆಲ್ಲಾ ಮುಗಿದ ಮೇಲೆ ಪಕ್ಷ ಬಹಿರಂಗವಾಗಿ ಚಟುವಟಿಕೆ ಆರಂಭಿಸಿದಾಗ ಕೋಟೇಶ್ವರಮ್ಮ ಕ್ರಿಯಾಶೀಲವಾಗಿ ತಮ್ಮನ್ನು ತೊಡಗಿಸಿಕೊಂಡರು. ೧೯೫೨ರ ಚುನಾವಣೆಯಲ್ಲಿ ನಡೆದ ಬಿರುಸಿನ ಚುನಾವಣಾ ಪ್ರಚಾರ ಕಾರ್ಯದಲ್ಲಿ ಇತರ ಮಹಿಳಾ ನಾಯಕರೊಂದಿಗೆ ಕೋಟೇಶ್ವರಮ್ಮ ಕೂಡ ಭಾಗಿಯಾದರು. ಭೂಗತ ಹೋರಾಟದಲ್ಲಿದ್ದಾಗ ಮೃತನಾದ ಒಬ್ಬ ವೀರಯೋಧನ ಪತ್ನಿಯೊಂದಿಗೆ ಸಂಬಂಧ ಬೆಳೆದು ಪತ್ನಿ ಕೋಟೇಶ್ವರಮ್ಮನಿಂದ ದೂರ ಸರಿದ ಸೀತಾರಾಮಯ್ಯ ಹೋಗುವಾಗ ಮಕ್ಕಳನ್ನು ತನ್ನೊಡನೆ ಕರೆದುಕೊಂಡು ಹೋಗಿ ಪತ್ನಿಯನ್ನು ತಬ್ಬಲಿ ಮಾಡಿದರು. ಆ ಸಂದರ್ಭದಲ್ಲಿ ಎಷ್ಟೇ ದುಃಖ ತುಂಬಿದ್ದರೂ ಜೀವನ ನಿರ್ವಹಣೆಗೆ, ಬದುಕಿಗೊಂದು ಅರ್ಥ ಕಂಡುಕೊಳ್ಳಲು ಬಿಟ್ಟುಹೋಗಿದ್ದ ಶಿಕ್ಷಣವನ್ನು ಮುಂದುವರಿಸಲು, ದುರ್ಗಾಬಾಯಿ ದೇಶಮುಖ್ ಕಟ್ಟಿದ ಆಂಧ್ರ ಮಹಿಳಾ ಸಭಾದ ಹಾಸ್ಟೆಲ್‌ನಲ್ಲಿದ್ದು ಓದಿ ಮೆಟ್ರಿಕ್‌ನಲ್ಲಿ ತೇರ್ಗಡೆ ಹೊಂದಿದರು. ನಂತರ ಕಾಕಿನಾಡ ಪಾಲಿಟೆಕ್ನಿಕ್ ಹಾಸ್ಟೆಲ್‌ನಲ್ಲಿ ಮೇಟ್ರನ್ ಆಗಿ ಕೆಲಸ ಮಾಡಿ ತಮ್ಮ ಜೀವನ ನಿರ್ವಹಣೆ ಮಾಡಿಕೊಂಡರು. ಅವರ ಮಕ್ಕಳು ಚಂದು ಮತ್ತು ಕರುಣ ಕೂಡ ಕ್ರಾಂತಿಕಾರಿ ಹೋರಾಟದ ಚೈತನ್ಯವನ್ನು ತಮ್ಮಲ್ಲಿ ಬೆಳೆಸಿಕೊಂಡು ತಾಯಿಯ ಕಣ್ಣ ಮುಂದೆಯೇ ತೀರಿಹೋದದ್ದು ಅವರಿಗೆ ಜೀವನದಲ್ಲಿ ಭಾರಿ ಪೆಟ್ಟನ್ನು ನೀಡಿತು. ಮಕ್ಕಳ ಸಾವಿನ ನಂತರ, ಮೇಟ್ರನ್ ಹುದ್ದೆಯಿಂದ ನಿವೃತ್ತರಾದ ಮೇಲೆ ಹತ್ತು ವರ್ಷಗಳ ಕಾಲ ಹೈದರಾಬಾದ್‌ನಲ್ಲಿ ರಾಜೇಶ್ವರರಾವ್ ಅವರ ಹೆಸರಿನ ವೃದ್ಧಾಶ್ರಮದಲ್ಲಿ ಕಾಲ ಕಳೆದರು. ಒಳ್ಳೆಯ ಹಾಡುಗಾರ್ತಿ ಮತ್ತು ನಟಿಯಾಗಿದ್ದ ಕೋಟೇಶ್ವರಮ್ಮ ಸ್ವತಃ ಕವಿ ಮತ್ತು ಕತೆಗಾರ್ತಿ. ಈಗ ಜೀವನ ಸಂಧ್ಯೆಯಲ್ಲಿ ವಿಶಾಖ ಪಟ್ಟಣದಲ್ಲಿರುವ ಅವರ ಇಬ್ಬರು ಮೊಮ್ಮಕ್ಕಳು ಸುಧಾ ಮತ್ತು ಅನುರಾಧ ಅವರ ಒಂಟಿತನವನ್ನು ಮರೆಸುವ ಸಂಜೀವಿನಿಯಾಗಿದ್ದಾರೆ.

ಅವರನ್ನು ಹತ್ತಿರದಿಂದ ಕಂಡಿದ್ದೆ. ಅವರು ಆರಂಭಿಸಿದ 'ಆಂಧ್ರ ಮಹಿಳಾ ಸಭೆ'ಯಲ್ಲಿದ್ದುಕೊಂಡು ನನ್ನ ಓದನ್ನು ಪೂರೈಸಿದ್ದೆ. ಭಾರತದ ಕಮ್ಯುನಿಸ್ಟ್ ಚಳುವಳಿಯಲ್ಲಿ ಅಮರಾಂಕಿತರಾದ ಸುಂದರಯ್ಯ ಮತ್ತು ಸಿ. ರಾಜೇಶ್ವರ ರಾವ್ ಅವರುಗಳು ನನಗೆ ಪರಮಾಪ್ತರಾಗಿದ್ದರು. ಅಂತೆಯೇ ಎನ್. ರಾಜಶೇಖರ ರೆಡ್ಡಿ ನನಗೆ ಅಣ್ಣನಂತೆ ಇರುತ್ತಿದ್ದ.

**ಹೊಸತು :** ನೀವು ಭಾರತದಲ್ಲಿ ಕಮ್ಯುನಿಸ್ಟ್ ಚಳುವಳಿ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ಹೋರಾಡಿದವರು. ಇವತ್ತಿನ ಕಮ್ಯುನಿಸ್ಟ್ ಚಳುವಳಿಯ ಸಂದರ್ಭ ನೋಡಿದಾಗ ನಿಮಗೆ ಏನನ್ನಿಸುತ್ತೆ ?

**ಕೋಟೇಶ್ವರಮ್ಮ :** ನನಗೆ ತುಂಬ ನೋವಾಗುತ್ತದೆ. ನನ್ನ ದೃಷ್ಟಿಯಲ್ಲಿ ಪಾರ್ಟಿಯೆಂದರೆ ಒಂದೇ ಕಮ್ಯುನಿಸ್ಟ್ ಪಾರ್ಟಿ. ಸಿ.ಪಿ.ಐ., ಸಿ.ಪಿ.ಎಂ. ಎಂದು ಇಬ್ಭಾಗವಾದರೂ ನಾನು ಕಾಕಿನಾಡಾದಿಂದ ಎರಡು ಪಕ್ಷಗಳಿಗೂ ತಲಾ ಹತ್ತು ರೂಪಾಯಿ ಸದಸ್ಯತ್ವ ಶುಲ್ಕವನ್ನು ಕಳಿಸುತ್ತಿದ್ದೆ. ನಂತರ ಸುಂದರಯ್ಯನವರೇ ಕಳುಹಿಸಬೇಡವೆಂದರು. ನೀನು ಪಕ್ಷದವಳಾಗಿ ನಾಲ್ಕು ಜನಕ್ಕೆ ಉಪಯುಕ್ತಳಾದರೆ ಸಾಕೆಂದರು. ನನ್ನ ಬಳಿಗೆ ಇತ್ತಂಡದವರೂ ಬರುತ್ತಿದ್ದರು. ಆದರೆ ಒಂದು ಪಕ್ಷದವರ ಮನೆಗೆ ಹೋದರೆ, ಇನ್ನೊಂದು ಪಕ್ಷದವರಿಗೆ ಕೋಪ ಬರುತ್ತಿದ್ದ ಅದೆಷ್ಟೋ ಸಂದರ್ಭಗಳನ್ನು ಕಂಡೆ. ಆ ಧೋರಣೆ ನನಗಿಷ್ಟವಾಗುತ್ತಿರಲಿಲ್ಲ. ಹೀಗೆ ಮತ್ತೆ ಮತ್ತೆ ಒಡೆಯುತ್ತ ಹೆಚ್ಚೆಚ್ಚು ಪಕ್ಷಗಳಾದರೆ ನಮ್ಮ ಆಶಯಗಳೆಂದೂ ಈಡೇರವು ಅನಿಸುತ್ತಿತ್ತು. ಈಗಲೂ ಹೇಳುತ್ತೇನೆ, ಎಡಪಕ್ಷಗಳು ಅಷ್ಟೇ ಅಲ್ಲ, ಎಲ್ಲ ಪ್ರಗತಿಪರ ಪಕ್ಷಗಳೂ ಒಂದಾಗಿ ಹೋರಾಡಿ ನಮ್ಮ ಶತ್ರುವನ್ನು ಹಿಮ್ಮೆಟ್ಟಿಸಬೇಕು.

ಕೋಟೇಶ್ವರಮ್ಮನವರ ಮನೆಯಲ್ಲಿದ್ದು ಅವರೊಡನೆ ಮಾತನಾಡಿ ನಮ್ಮ ಊರಿಗೆ ಹಿಂತಿರುಗುವಾಗ ಮನಸ್ಸು ತುಂಬಿಬಂತು. ಎರಡು ದಿನಗಳ ಕಾಲ ನಾವು ಒಡನಾಡಿದ್ದು ಬರೀ ಒಂದು ವ್ಯಕ್ತಿಯ ಜೊತೆಯಲ್ಲ, ನಮ್ಮ ದೇಶದ ಕಮ್ಯುನಿಸ್ಟ್ ಚಳುವಳಿಯ ಸ್ಮೃತಿ ಸಂಚಯವನ್ನು ತನ್ನಲ್ಲಿ ಹೊತ್ತ ಜ್ಞಾನ ಭಂಡಾರದ ಜೊತೆಗೆ ಎಂದೆನಿಸಿತು. ಕಣ್ಣೆದುರಿಗೇ ಮಕ್ಕಳು, ಗಂಡ ಎಲ್ಲರನ್ನೂ ಕಳೆದುಕೊಂಡರೂ ನಿರಾಶೆಯ ಕೂಪದಲ್ಲಿ ಮುಳುಗದೆ ಮೇಲೆದ್ದು ಪ್ರಜ್ವಲಿಸುವ ಬೆಳಕೊಂದನ್ನು ಕಂಡ ಅನುಭವವಾಯಿತು. ಅವರ ಆತ್ಮಕಥೆ 'ಒಂಟಿ ಸೇತುವೆ'ಯ ಕೊನೆಯ ಸಾಲುಗಳು ಅವರ ಈಗಿನ ಸ್ಥಿತಿಯನ್ನು ಬಿಂಬಿಸುವ ಸಾಲುಗಳೂ ಆಗಿವೆ :

"ಒಂಟಿತನ, ಒಬ್ಬಂಟಿಯೆಂದು ಮುದುಡಿ ಕೂರುವುದಿಲ್ಲ.  
ಅಮಾನುಷ ಘಟನೆಗಳ ಕಂಡು ಕಣ್ಣೀರ ಗೋದಾವರಿಯಾಗುತ್ತಲಿರುವಳು  
ತಾರಕಕ್ಕೇರಿದ ಅಂದಿನ ಹೋರಾಟ ಸಂಸ್ಕೃತಿಯ ನೆನೆದು ಸಾಗರವಾಗುತ್ತಲಿರುವಳು  
ಅದರಲಿ ಹುಟ್ಟಿದ ಆದರ್ಶದ ಮುತ್ತುಗಳನು  
ಭವಿಷ್ಯತ್ತಿಗಾಗಿ ಭದ್ರಪಡಿಸಬೇಕೆಂದು ತಪಿಸುತ್ತಲೇ ಇರುವವಳು  
ವಯಸ್ಸಾಗಿಯೂ ಆ ಮುತ್ತುಗಳ ಅಕ್ಷರಗಳಲ್ಲಿ ಕೋದು ತೃಪ್ತಳಾಗುವವಳು."

**ಲೇಖನ ಸಿದ್ಧಪಡಿಸಿದವರು : ಡಾ॥ ಎನ್. ಗಾಯತ್ರಿ**  
ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್', ಛತ್ರಂ ಬ್ಲಾಕ್  
ಕೆಂಪೇಗೌಡ ನಗರ, ಗವೀಪುರಂ, ಬೆಂಗಳೂರು – ೫೬೦ ೦೧೯

✳ ✳ ✳

# ರಷ್ಯದ ಕ್ರಾಂತಿಗೆ ೧೦೦ ವರ್ಷಗಳು




ಕೃತಿ : **ರಷ್ಯ ಕ್ರಾಂತಿ**
ಲೇಖಕರು : **ಲಲಿತ**
ಪುಟ : xxvi+೨೨೨ = ೩೧೬
ಬೆಲೆ : ₹ ೨೭೫/-
ಪ್ರಕಾಶಕರು : **ಸಿಂಚನ ಪ್ರಕಾಶನ**
೫/೧೫, ೩ನೇ 'ಡಿ', ಮುಖ್ಯರಸ್ತೆ
ಹೆಲ್ತ್ ಲೇಔಟ್, ಅನ್ನಪೂರ್ಣೇಶ್ವರಿ ನಗರ
ಬೆಂಗಳೂರು-೫೬೦ ೦೯೧

ರಶಿಯಾದ ಸುಪ್ರಸಿದ್ಧ ಅಕ್ಟೋಬರ್ ಕ್ರಾಂತಿಗೆ ಇದೀಗ ೧೦೦ ವರ್ಷ ತುಂಬಿದೆ. ಈ ಸಂದರ್ಭದಲ್ಲಿ ಲಲಿತ ಅವರು ಕ್ರಾಂತಿಯ ನೆನಪುಗಳನ್ನು ಪ್ರಸ್ತುತ ಪುಸ್ತಕದಲ್ಲಿ ಸುಲಲಿತವಾಗಿ ತೆರೆದಿಟ್ಟಿದ್ದಾರೆ.

ಕ್ರಾಂತಿಯನಂತರದ ನೂರು ವರ್ಷಗಳಲ್ಲಿ ಜಗತ್ತು ಸಾಕಷ್ಟು ಬದಲಾವಣೆಗಳನ್ನು ಕಂಡಿದೆ. ಅದು ಎರಡನೇ ಮಹಾಯುದ್ಧದ ವಿನಾಶಕಾರೀ ಬೆಳವಣಿಗೆಗಳಿಗೆ ಸಾಕ್ಷಿಯಾಗಿದೆ. ಅನೇಕ ದೇಶಗಳು ವಸಾಹತು ಆಡಳಿತದಿಂದ ಬಿಡುಗಡೆಗೊಂಡಿವೆ. ದುಡಿಯುವ ಜನ ತಮ್ಮದೇ ಆದ ರೀತಿಯಲ್ಲಿ ತಮ್ಮ ಅಸಮಾಧಾನಗಳನ್ನು ಹೊರ ಹಾಕಿದ್ದಾರೆ. ಮಹಿಳೆಯರು, ಮಕ್ಕಳು ಮತ್ತು ಬಡವರು ಆಧುನಿಕತೆಯ ಅಸಾಮಾನ್ಯ ಕ್ರೌರ್ಯಕ್ಕೆ ಬಲಿಯಾಗುತ್ತಲೇ ಹೋಗಿದ್ದಾರೆ. ಇವುಗಳ ಜೊತೆಗೆ ಹೊಸ ಬಗೆಯ ಹೋರಾಟಗಳು ಹುಟ್ಟಿಕೊಂಡಿವೆ. ಬಂಡವಾಳಶಾಹಿಗಳು ತಮ್ಮದೇ ಆದ ಶೋಷಣೆಯ ಹೊಸ ಕ್ರಮಗಳನ್ನು ನಾಜೂಕಿನಿಂದ ಕಂಡುಕೊಂಡಿದ್ದಾರೆ. ಸ್ವತಃ ರಶಿಯಾದಲ್ಲಿಯೇ ಬಹುದೊಡ್ಡ ಬದಲಾವಣೆಗಳಾಗಿವೆ. ಇವೆಲ್ಲಕ್ಕಿಂತ ಮಿಗಿಲಾಗಿ ಜಗತ್ತಿನಾದ್ಯಂತ ಮಾರ್ಕ್ಸ್‌ವಾದವು ಒಂದು ಪ್ರಬಲ ಚಿಂತನಾ ಕ್ರಮವಾಗಿ ಎಲ್ಲ ಜ್ಞಾನ ಕ್ಷೇತ್ರಗಳನ್ನು ಆವರಿಸಿಕೊಂಡು ಬೌದ್ಧಿಕವಾಗಿ ತುಂಬ ಎತ್ತರಕ್ಕೆ ಬೆಳೆದಿದೆ. ಇವತ್ತು ಸಾಹಿತ್ಯ ವಿಮರ್ಶೆ, ರಾಜಕೀಯ ಚಿಂತನೆ, ಚರಿತ್ರೆ, ಅರ್ಥಶಾಸ್ತ್ರ ಮೊದಲಾದ ಕ್ಷೇತ್ರಗಳಲ್ಲಿ ಮಾರ್ಕ್ಸ್‌ವಾದ ಮಾಡಿದ ಸಾಧನೆ ಅಸಾಧಾರಣವಾದುದು. ಚಳುವಳಿಗಳನ್ನು ಕೇವಲ ರಾಜಕೀಯವಾಗಿ ನೋಡುವವರಿಗೆ ರಶಿಯಾ ಕ್ರಾಂತಿಯ ಇತರ ಅನೇಕ ಸಾಧನೆಗಳು ಗಮನಕ್ಕೆ ಬಾರದೇಹೋಗುವುದುಂಟು. ಕಾರಣ ಯಾವುದೇ ಚಳುವಳಿಯ ಕಾರಣ ಮತ್ತು ಪರಿಣಾಮಗಳನ್ನು ಹೆಚ್ಚು ವಿಸ್ತಾರವಾಗಿ ಮತ್ತು ಗಂಭೀರವಾಗಿ ಪರಿಶೀಲಿಸುವ ಅಗತ್ಯ ಇವತ್ತು ಎಂದಿಗಿಂತ ಹೆಚ್ಚಾಗಿದೆ.




ಇಂಥದ್ದೊಂದು ಅಗತ್ಯವನ್ನು ಪೂರೈಸಲೋ ಎಂಬಂತೆ ಈ ಕೃತಿ ಪ್ರಕಟವಾಗಿದೆ. ಕೃತಿಯು ರಶಿಯಾ ಕ್ರಾಂತಿಯ ಹಿನ್ನೆಲೆ ಮತ್ತು ಮುನ್ನೆಲೆಗಳನ್ನು ಕೂಲಂಕಷವಾಗಿ ತಾಳ್ಮೆಯಿಂದ ಪರಿಶೀಲಿಸುತ್ತದೆ. ಆರಂಭದಲ್ಲಿ ೧೯ನೇ ಶತಮಾನದ ಉತ್ತರಾರ್ಧದಲ್ಲಿ ರಶಿಯಾದಲ್ಲಾದ ಆರ್ಥಿಕ ಬದಲಾವಣೆಗಳನ್ನು ಲೇಖಕಿಯರು ವಿವರಿಸುತ್ತಾರೆ. ನಗರಗಳಲ್ಲಿ ಮತ್ತು ಗ್ರಾಮೀಣ ಪರಿಸರದಲ್ಲಿ ಕಾಣಿಸಿಕೊಂಡ ಉದೀಯಮಾನ ಮಧ್ಯಮವರ್ಗದ ಕಾರ್ಮಿಕ ವರ್ಗವು ೧೮೭೫ರಷ್ಟರ ಹೊತ್ತಿಗೆ ಸಂಘಟಿತರಾದರು. ಮುಂದಿನ ಮೂರು ವರ್ಷಗಳಲ್ಲಿ, ಅಂದರೆ ೧೮೭೮ರ ಹೊತ್ತಿಗೆ ಕಾರ್ಮಿಕರು 'ಅಸಮಾನತೆಯ ತಳಹದಿಯ ಮೇಲೆ ನಿಂತಿರುವ ರಾಜಕೀಯ ಮತ್ತು ಆರ್ಥಿಕ ವ್ಯವಸ್ಥೆ'ಯನ್ನೇ ಬದಲಾಯಿಸುವ ಮಾತಾಡುತ್ತಾ ಇನ್ನಷ್ಟು ಸಂಘಟಿತರಾದರು. ಈ ಸಂಘಟನಾತ್ಮಕ ಹೋರಾಟವು ವಾಕ್ ಸ್ವಾತಂತ್ರ್ಯ, ಬೇರೆ ಬೇರೆ ವಿಧದ ಅಭಿವ್ಯಕ್ತಿ ಸ್ವಾತಂತ್ರ್ಯ ಮತ್ತು ಹೋರಾಟದ ಸ್ವಾತಂತ್ರ್ಯವನ್ನೂ ಒಳಗೊಂಡು ಪ್ರೌಢವಾಗಿ ಬೆಳೆದದ್ದನ್ನು ಲೇಖಕಿ ಮರೆಯದೇ ದಾಖಲಿಸಿದ್ದಾರೆ. ೧೮೮೧-೧೮೮೬ರ ನಡುವಣ ಐದು ವರ್ಷಗಳಲ್ಲಿ ಸುಮಾರು ೮೪ ಮುಷ್ಕರಗಳು ನಡೆದು ಅದರಲ್ಲಿ ೮೦ ಸಾವಿರಕ್ಕೂ ಹೆಚ್ಚು ಕಾರ್ಮಿಕರು ಭಾಗವಹಿಸಿದ್ದು ರಶಿಯಾ ಕ್ರಾಂತಿಯ ಹಿನ್ನೆಲೆಯನ್ನು ಸಮರ್ಪಕವಾಗಿ ವಿವರಿಸುತ್ತದೆ. ಜೊತೆಗೆ, ಹೋರಾಟಗಳು ಸಿದ್ಧಾಂತದ ಕೊರತೆಯಿಂದ ಸೊರಗಿಹೋಗದಿರುವಲ್ಲಿ ಪ್ಲೆಖನೋವ್ ಅವರಂಥವರು ನೀಡಿದ ಕೊಡುಗೆಯನ್ನೂ ಈ ಕೃತಿಯು ಎಚ್ಚರದಿಂದ ಪರಿಶೀಲಿಸುತ್ತದೆ. ಪ್ರಖಾಂಡ ಪಂಡಿತನೂ, ಪ್ರಖರ ಬುದ್ಧಿಜೀವಿಯೂ, ಅಸಾಧಾರಣ ಸಂಘಟಕನೂ, ಸಕ್ರಿಯ ರಾಜಕಾರಣದಲ್ಲಿ ಅತೀವ ಆಸಕ್ತನೂ ಆಗಿದ್ದ ಲೆನಿನ್ ಅವರು ಹಂತ ಹಂತವಾಗಿ ಕ್ರಾಂತಿಯ ಹೆಜ್ಜೆಗಳನ್ನು ಮುಂದಕ್ಕೊಯ್ದ ಪರಿಯನ್ನೂ ಇಲ್ಲಿ ಗಮನಿಸಲಾಗಿದೆ. ಬದಲಾದ ಇಂದಿನ ಸಂದರ್ಭದಲ್ಲಿ ಈ ಬಗೆಯ ಚಟುವಟಿಕೆಗಳನ್ನು ನೇತ್ಯಾತ್ಮಕವಾಗಿ ಮಾಧ್ಯಮಗಳು ಚಿತ್ರಿಸುವುದುಂಟು. ಅಮೆರಿಕನ್ ಬಂಡವಾಳಶಾಹೀ ಶಕ್ತಿಗಳು ಕ್ರಾಂತಿಯ ಕಥನಗಳನ್ನು ಜನಪ್ರಿಯವಾಗದಂತೆ ತಡೆಯುವುದೂ ಉಂಟು. ಪರಿಣಾಮವಾಗಿ ಇಂದಿನ ಹೊಸ ತಲೆಮಾರಿನ ಓದುಗರಿಗೆ ಕ್ರಾಂತಿಯ ಹೆಜ್ಜೆಗಳ ಪರಿ ತಿಳಿಯುತ್ತಿಲ್ಲ. ಈ ಕೊರತೆಯನ್ನು ಪ್ರಸ್ತುತ ಕೃತಿ ತುಂಬಿಕೊಡುತ್ತದೆ.

ರಶಿಯಾ ಕ್ರಾಂತಿಗೆ ಪೂರ್ವಭಾವಿಯಾಗಿ ೧೯೦೧ರಿಂದ ೧೯೦೪ರವರೆಗೆ ನಡೆದ ಕೆಲವು ಘಟನೆಗಳು ಕುತೂಹಲಕರವಾಗಿದ್ದು ಲೇಖಕಿ ಅವನ್ನಿಲ್ಲಿ ಸಂಗ್ರಹರೂಪದಲ್ಲಿ ಕೊಟ್ಟಿದ್ದಾರೆ. ಇದರಲ್ಲಿ ೧೯೦೨ರಲ್ಲಿ ನಡೆದ ಕಾರ್ಮಿಕರ ಪ್ರತಿಭಟನೆ ಹಾಗೂ ಲೆನಿನ್ ಅವರ ಮಾರ್ಕ್ಸ್‌ವಾದೀ ಪಕ್ಷರಚನೆಯ ಯೋಜನೆಗಳು ಮುಖ್ಯವಾದುವು. ಮುಂದೆ ಹಂತ ಹಂತವಾಗಿ ಕಾರ್ಮಿಕರ ಕ್ರಾಂತಿಕಾರೀ ಚಟುವಟಿಕೆಗಳು ಬೆಳೆದು ಬಂದ ಬಗೆಯನ್ನು ಈ ಕೃತಿಯಲ್ಲಿ ರೋಚಕವಾಗಿ ಚಿತ್ರಿಸಲಾಗಿದೆ. ವಿಫಲವಾದ ೧೯೦೫ರ ದಂಗೆ, ಗ್ರಾಮೀಣ ಪ್ರದೇಶಗಳಲ್ಲಿ ಕಾಣಿಸಿಕೊಂಡ ಶ್ರೀಮಂತ ರೈತರ ಚಟುವಟಿಕೆಗಳು, ಹೋರಾಟದಿಂದ ನಿರಂತರವಾಗಿ ಕಲಿಯುತ್ತಾಹೋದ ಪಾಠಗಳು, ಬೋಲ್ಶೆವಿಕ್ ಅವರ ಹೋರಾಟಗಳು ಮತ್ತು ಅವರು ಅನುಭವಿಸಿದ ಕಷ್ಟಗಳು, ೧೯೧೨-೧೪ರ ಅವಧಿಯಲ್ಲಿ ಕಾರ್ಮಿಕ ಚಳುವಳಿಗಳು ಅನುಭವಿಸಿದ ಬಿಕ್ಕಟ್ಟುಗಳು ಹಾಗೂ ಮೊದಲನೇ ಮಹಾಯುದ್ಧದ ಅನಾಹುತಗಳನ್ನು ಇಲ್ಲಿ ಸಂಕ್ಷೇಪವಾಗಿ, ಆದರೆ ಗೊಂದಲಕ್ಕೆಡೆಯಿಲ್ಲದಂತೆ ಮಂಡಿಸಲಾಗಿದೆ.

ತಿಳಿದವರ ನಡುವೆ ಫೆಬ್ರವರಿ ಕ್ರಾಂತಿ ಎಂದೇ ಪ್ರಸಿದ್ಧವಾದ ಮಹಿಳೆಯರ ಮುಷ್ಕರದಿಂದ ನಾವೆಲ್ಲ ಇವತ್ತು ಕಲಿಯುವುದು ತುಂಬ ಇದೆ. ಅತ್ಯಂತ ಹೆಚ್ಚು ಶೋಷಿತರಾದವರೇ ಚಳುವಳಿಯ ಮುಂಚೂಣಿಯಲ್ಲಿ ನಿಲ್ಲಬೇಕೆಂಬ ಸತ್ಯವನ್ನು ಫೆಬ್ರವರಿ ಕ್ರಾಂತಿ ಪ್ರಸ್ತುತಪಡಿಸಿತು. ಈ ಕ್ರಾಂತಿಯು ತನ್ನ ಪಾಡಿಗೆ ತಾನು ಯಶಸ್ವಿಯಾಗದೇ ಹೋದರೂ ಮುಂದಿನ ಯಶಸ್ವೀ ಕ್ರಾಂತಿಗೆ ಹೇಗೆ ಹಿನ್ನೆಲೆಯಾಗಿ ಕೆಲಸ ಮಾಡಿತು ಎಂಬುದನ್ನು ಲಲಿತ ಅವರು ತುಂಬ ಹೃದಯಂಗಮವಾಗಿ ಇಲ್ಲಿ ವಿವರಿಸಿದ್ದಾರೆ. ಬಹುಶಃ ಈ ಪುಸ್ತಕದ ಬಹಳ ಮುಖ್ಯ ಭಾಗವೂ ಇದೆಂದೇ ತೋರುತ್ತದೆ. ಬದಲಾವಣೆಯ ಮುಂಚೂಣಿಯಲ್ಲಿ ಮಹಿಳೆಯರೇ ಇರುತ್ತಾರೆ ಎಂಬ ಅಂಶ ಬಹಳ ಮಹತ್ತರವಾದುದು.

ಪುಸ್ತಕದ ಎಂಟನೇ ಮತ್ತು ಒಂಬತ್ತನೇ ಆಶ್ವಾಸಗಳು ಅಕ್ಟೋಬರ್ ಕ್ರಾಂತಿಯ ವಿವಿಧ ಬೆಳವಣಿಗೆಗಳನ್ನು ಎಳೆ ಎಳೆಯಾಗಿ ತೆರೆದು ತೋರಿಸುತ್ತದೆ. ರೈತ ಕಾರ್ಮಿಕರ ಹೋರಾಟದ ಫಲವಾಗಿ ಮೂಡಿದ ತಾತ್ಕಾಲಿಕ ಸರಕಾರ, ಅದರ ಮೂಲಭೂತ ಸಮಸ್ಯೆಗಳು, ಲೆನಿನ್ ಅವರ ಸಮರ್ಥ ನಾಯಕತ್ವ ಮತ್ತು ದೂರದರ್ಶಿತ್ವ, ಬೋಲ್ಶೆವಿಕ್ ಪಾರ್ಟಿಯ ಏಪ್ರಿಲ್ ಸಮಾವೇಶ, ಮೊದಲಾದ ವಿವರಗಳು ಇಲ್ಲಿವೆ. ಈ ಘಟನೆಗಳ ವಿವರಗಳನ್ನು ಲೇಖಕಿಯರು ಬರೇ ಯಾಂತ್ರಿಕವಾಗಿ ನೀಡದೆ, ಒಂದು ಬಗೆಯ ವಿಶ್ವಾಸ ಮತ್ತು ಆರ್ತತೆಯಿಂದ

ಕೊಡುತ್ತಾರೆ. ಕಾರಣ ಇವುಗಳನ್ನು ಬಹಳ ಆಸಕ್ತಿಯಿಂದ ಓದಲು ಸಾಧ್ಯವಾಗುತ್ತದೆ.

ನಮಗೆಲ್ಲಾ ತಿಳಿದಿರುವಂತೆ ಕೊನೆಗೂ ಅಕ್ಟೋಬರ್ ಕ್ರಾಂತಿ ಯಶಸ್ವಿಯಾಯಿತು. ಪ್ರಸ್ತುತ ಕೃತಿಯ ೧೪ನೇ ಅಧ್ಯಾಯವು ಶ್ರಮಿಕರ ವಿಜಯವನ್ನು ಬಹಳ ರೋಚಕವಾಗಿ ವರ್ಣಿಸುತ್ತದೆ. ಪೆಟ್ರೋಗ್ರಾಡ್ ಬದಲಾವಣೆಗಳಿಗೆ ಮೂಕ ಸಾಕ್ಷಿಯಾಯಿತು. ಶ್ರಮಿಕರ ವಿಜಯವನ್ನು ಹೀಗೆ ದಾಖಲಿಸುವ ಈ ಪುಸ್ತಕವು ೧೭ನೇ ಅಧ್ಯಾಯ ಅದರ ಮಹತ್ವವನ್ನು ದಾಖಲಿಸಿ, ಮುಂದಿನ ದಿನಗಳಿಗೆ ಅದರ ಔಚಿತ್ಯದ ಕುರಿತು ಕೆಲವು ಮಾತುಗಳನ್ನು ಹೇಳುತ್ತದೆ.

ಹೀಗೆ ಈ ಮಹತ್ವದ ಕೃತಿಯು ರಶಿಯಾ ಕ್ರಾಂತಿಯ ಎಲ್ಲ ಸೂಕ್ಷ್ಮಗಳನ್ನು ತಾಳ್ಮೆಯಿಂದ ಸಂಗ್ರಹಿಸಿಕೊಡುತ್ತದೆ. ಪುಸ್ತಕದ ಭಾಷೆಯು ಬಹಳ ಆಪ್ತವಾಗಿದ್ದು, ಕ್ರಾಂತಿಯ ಕನಸುಗಳನ್ನು ಕಟ್ಟಿಕೊಡುವಲ್ಲಿ ಸಂಪೂರ್ಣವಾಗಿ ಯಶಸ್ವಿಯಾಗಿದೆ. ಅಕ್ಟೋಬರ್ ಕ್ರಾಂತಿಯ ಕುರಿತು ಇಷ್ಟೊಂದು ಸೊಗಸಾಗಿ ಕಥನ ಕನ್ನಡದಲ್ಲಿ ಇದುವರೆಗೆ ಬಂದಿಲ್ಲ. ಲೇಖಕಿಗೆ ಅಭಿನಂದನೆಗಳು.

ಇದ್ದಕ್ಕಿದ್ದಂತೆ ನಾವು ಇತಿಹಾಸವನ್ನು ಮರೆತವರಂತೆ ಮಾತಾಡುತ್ತೇವೆ. ಎಷ್ಟೋ ಜನ ಇತಿಹಾಸವನ್ನು ಓದುವುದೂ ಇಲ್ಲ, ಅದರಿಂದ ಪಾಠವನ್ನು ಕಲಿಯುವುದೂ ಇಲ್ಲ. ಪ್ರಸ್ತುತ ಭಾರತದಲ್ಲಿ ಸಮತಾವಾದಿಗಳನ್ನು ದೇಶದ್ರೋಹಿಗಳೆಂಬಂತೆ ಭಾವಿಸಲಾಗುತ್ತಿದೆ. ಇದು ನೂತನ ಬಂಡವಾಳಶಾಹಿಗಳ ಕುತಂತ್ರ. ಇದನ್ನು ಮೀರಿ ನಿಲ್ಲಲು ನಮಗಿಂದು ಇತಿಹಾಸದ ಗಾಢವಾದ ಅಭ್ಯಾಸ ಬೇಕು. ಈ ಪುಸ್ತಕವು ಅಂಥದ್ದೊಂದು ಕೊರತೆಯನ್ನು ಸಮರ್ಥವಾಗಿ ತುಂಬಿಕೊಡುತ್ತದೆ.

**ಪುರುಷೋತ್ತಮ ಬಿಳಿಮಲೆ**
ನಂ. ೬೯೮/೮, ಬಿ–೬, ವಸಂತ ಕುಂಜ್
ನವದೆಹಲಿ

# ಮಕ್ಕಳ ವಿಭಿನ್ನ ಕಥನ ಕವಿತೆಗಳು




ಕೃತಿ : **ಹಕ್ಕಿಗಳ ಸ್ವಾತಂತ್ರ್ಯೋತ್ಸವ**
ಲೇಖಕರು : **ವಿಜಯಕಾಂತ ಪಾಟೀಲ**
ಪುಟ : ೯೬ ಬೆಲೆ : ₹ ೯೬/–
ಪ್ರಕಾಶಕರು : **ಅಭಿನವ**
ವಿಜಯನಗರ, ಬೆಂಗಳೂರು–೪೦

ಮಕ್ಕಳಿಗಾಗಿಯೇ ಬರೆದ, 'ಹಕ್ಕಿಗಳ ಸ್ವಾತಂತ್ರ್ಯೋತ್ಸವ' ಕೃತಿಯು ಲೇಖಕ ವಿಜಯಕಾಂತ ಪಾಟೀಲರ ಕಥನ ಕವಿತೆಗಳ ಸಂಕಲನ. ಮನುಷ್ಯೇತರ ಜೀವಿಗಳಾದ ಪ್ರಾಣಿ, ಪಕ್ಷಿಗಳಲ್ಲಿ ಮನುಷ್ಯ ಸ್ವಭಾವವಿರುವಂತೆ ಗ್ರಹಿಸಿ, ನಿತ್ಯದ ಬದುಕಿನಲ್ಲಿ ಸಂಭವಿಸಬಹುದಾದ ವಿದ್ಯಮಾನಗಳನ್ನೇ ಇಲ್ಲಿನ ಕಥನ ಕವಿತೆಗಳ ವಸ್ತುವಾಗಿಸಿಕೊಂಡು ನಿಜದಲ್ಲಿ ಮನುಷ್ಯ, ತನ್ನ ಬದುಕಿನಲ್ಲಿ ಅಳವಡಿಸಿಕೊಂಡಿರಬಹುದಾದ ವರ್ತನೆ, ದುರಾಶೆ, ದ್ವೇಷ, ಅಸೂಯೆ ಮತ್ತು ಅಧಿಕಾರದ ಲಾಲಸೆಗಳಂಥ ಗುಣಗಳನ್ನು ಓದುಗನ ಅರಿವಿಗೆ ತರುವಂತೆ ಇಲ್ಲಿ ಕವಿತೆಗಳನ್ನು ರಚಿಸಲಾಗಿದೆ. ಇದು ವಿಜಯಕಾಂತರ ಆಲೋಚನಾಕ್ರಮಕ್ಕೆ ಹಿಡಿದ ಕನ್ನಡಿಯಾಗಿದೆ. ಪ್ರಸ್ತುತ ಈ ಸಂಕಲನದಲ್ಲಿ ಹತ್ತು ಕಥನ ಕವಿತೆಗಳಿದ್ದು, ಮನುಷ್ಯ ಸ್ವಭಾವವನ್ನು ಅನಾವರಣಗೊಳಿಸುತ್ತವೆ.

ಇಲ್ಲಿ 'ನರಿಗೆ ಮೃಗರಾಜ ಪಟ್ಟ' ಎಂಬ ಕಥನ ಕವಿತೆ, ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪ್ರಜಾಪ್ರತಿನಿಧಿಗಳ ದುಂಡಾವರ್ತನೆಯ ಮೇಲೆ ಬೆಳಕು ಚೆಲ್ಲುತ್ತದೆ. ಅಧಿಕಾರದ ಮೋಹ ಮತ್ತು ವಾಮಮಾರ್ಗದಲ್ಲಿ ಹಣ ಮಾಡಬೇಕೆಂಬ ಅವರ ದುರಾಶೆಯ ದೆಸೆಯಿಂದಾಗಿ ನಾಡಿನ ಸರ್ವತೋಮುಖ ಅಭಿವೃದ್ಧಿ ಹೇಗೆ ಕುಂಠಿತವಾಗುತ್ತದೆ ಹಾಗೂ ಅದೇ ಹೇಗೆ ಪ್ರಜೆಗಳ ಅಸಮಾಧಾನಕ್ಕೆ ಕಾರಣವಾಗುತ್ತದೆ ಎಂಬುದನ್ನು ಪ್ರಾಣಿಗಳ ಸ್ವಭಾವದೊಂದಿಗೆ ಸಮೀಕರಿಸಿ ವಿಡಂಬನಾತ್ಮಕವಾಗಿ ಶೋಧಿಸುತ್ತ ಹೋಗುತ್ತದೆ. ಇಡಿಯಾಗಿ ಕವಿತೆ ಒಂದು ಕಡೆ ನರಿ ಬುದ್ಧಿಯ ರಾಜಕಾರಣಿಗಳ ಬಣ್ಣ ಬಯಲುಮಾಡಿದರೆ, ಇನ್ನೊಂದು ನೆಲೆಯಲ್ಲಿ ಸಮೂಹ ನಾಯಕತ್ವದ ಮಹತ್ವದ ಬಗ್ಗೆ ಅರಿವು ಮೂಡಿಸುತ್ತದೆ. ಇಂಥ ವಿಚಾರಗಳನ್ನು ಕವಿತೆಯಲ್ಲಿ ಮಕ್ಕಳಿಗೆ ತಿಳಿಯುವಂತೆ ಸರಳವಾಗಿ ಅಳವಡಿಸಿರುವುದು ಅದರ ಯಶಸ್ಸಿಗೆ ಕಾರಣವಾಗಿದೆ.

ಇನ್ನು, 'ಕುಲ ಕುಲ ಕುಲವೆಂದು' ಕಥನ ಕವಿತೆ, ಕಾಗೆ ಮತ್ತು ಕೋಗಿಲೆಗಳ ನಡುವೆ ನಡೆಯುವ ಮಾತುಕತೆಯ ಮೂಲಕ ತೆರೆದುಕೊಳ್ಳುತ್ತ ಹೋಗುತ್ತದೆ. ಸಹಜವಾಗಿಯೇ ನಮ್ಮಲ್ಲಿ ರೂಪುಗೊಂಡಿರುವ ರಾಗ, ದ್ವೇಷ ಮತ್ತು ಅಸೂಯೆಗಳನ್ನು ತೊರೆದು ಬಾಳಬೇಕು ಮತ್ತು ಕುಲವನ್ನು ಮೀರಿ ಮನುಕುಲವನ್ನು ಒಳಗೊಂಡ ಸಕಲ ಜೀವಕುಲದ ಒಳಿತಿಗಾಗಿ ನಾವೆಲ್ಲ ನಮ್ಮನ್ನು ನಾವೇ ಅರ್ಪಿಸಿಕೊಳ್ಳಬೇಕು ಎಂದು ಕವಿತೆ ಹೇಳುತ್ತದೆ. ಇಡಿಯಾಗಿ ಕವಿತೆಯನ್ನು ಓದಿದಾಗ ಮನುಷ್ಯ ಕುಲ ಒಂದೇ ಎಂಬ ಭಾವ ಮೂಡುತ್ತದೆ.

ಮತ್ತು ಈ ಸಂಕಲನದ ಶೀರ್ಷಿಕೆಯೂ ಆಗಿರುವ 'ಹಕ್ಕಿಗಳ ಸ್ವಾತಂತ್ರ್ಯೋತ್ಸವ' ಕಥನ ಕವಿತೆ, ಸ್ವಾತಂತ್ರ್ಯದ ಹೆಸರಿನಲ್ಲಿ ಸ್ವೇಚ್ಛಾಚಾರ ನಡೆಸುವ ಮಾನವನು ಕಚ್ಚಾಟದ ಮನೋಧೋರಣೆಯನ್ನು ಬೆಳೆಸಿಕೊಂಡಿರುವುದರ ಹಿಂದಿನ ಕಾರಣಗಳನ್ನು ಗುರುತಿಸುತ್ತದೆ. ಪ್ರಾಣಿ, ಪಕ್ಷಿಗಳಲ್ಲಿರುವ ಹೊಂದಾಣಿಕೆಯ ಮನೋಭಾವ ಮತ್ತು ಸ್ವಾತಂತ್ರ್ಯದ ಕುರಿತಾದ ಸ್ಪಷ್ಟವಾದ ಅರಿವು ಮನುಷ್ಯನಲ್ಲಿರದಕ್ಕಾಗಿಯೇ ಪ್ರಜಾಪ್ರಭುತ್ವ ವ್ಯವಸ್ಥೆಯ ಆಶೋತ್ತರಗಳಿಗೆ ಬೆಲೆಯೇ ಇಲ್ಲವಾಗಿದೆ ಎಂಬುದನ್ನು ಮನದಟ್ಟುಮಾಡುತ್ತದೆ.

ಕವಿ ವಿಜಯಕಾಂತರಿಗೆ 'ತಾಯಿ'ಯ ಕುರಿತಾಗಿ ವಿಶೇಷ ಕಾಳಜಿ. ಆ ಕಾಳಜಿಯನ್ನು 'ಅಮ್ಮಾ, ನೀನೇ ಮಗನಾಗು...!' ಕಥನ ಕವಿತೆಯಲ್ಲಿ ಮಾರ್ಮಿಕವಾಗಿ ವ್ಯಕ್ತಪಡಿಸಿದ್ದಾರೆ. ತಾಯಿಯಾಗಿ ಸಂಸಾರ ಸಾಗಿಸುವುದರ ಹಿಂದಿನ ಕಷ್ಟ ಎಂಥದ್ದು ಎಂಬುದನ್ನು ಈ ಕವಿತೆ ಅರಿವಿಗೆ ತರುತ್ತದೆ. ಜೊತೆಗೆ, ಸುಸಂಸ್ಕೃತ ಕುಟುಂಬವೊಂದರಲ್ಲಿನ ತಾಯಿ ಮತ್ತು ಮಗನ ನಡುವಿನ ಒಡನಾಟದ ಮಧುರ ಅನುಭವಗಳನ್ನು ಸಹ ಈ ಕವಿತೆ ಓದುಗನ ಎದೆಗೆ ಆರ್ದ್ರವಾಗಿ ದಾಟಿಸುತ್ತದೆ.

'ಪಂಪ ಮತ್ತು ರನ್ನ...?!' ಈ ಸಂಕಲನದಲ್ಲಿರುವ ಮತ್ತೊಂದು ಬಹುಮುಖ್ಯ ಕವಿತೆ. ಇದು ನಿರಂತರ ಒಡನಾಟದಿಂದಾಗಿ ಪರಸ್ಪರ ಮನುಷ್ಯ ಮತ್ತು ಪ್ರಾಣಿಗಳ ನಡುವೆ ಬೆಸೆದುಕೊಳ್ಳಬಹುದಾದ ಸಂಬಂಧದ ತೀವ್ರತೆಯ ಬಗ್ಗೆ ಹೇಳುತ್ತದೆ.

ಅಲ್ಲದೆ, ಈ ಸಂಕಲನದಲ್ಲಿ ಇನ್ನಷ್ಟು ಇಂಥ ಕಥನ ಕವಿತೆಗಳಿದ್ದು ಓದುಗನನ್ನು ತೀವ್ರವಾಗಿ ಕಾಡುತ್ತವೆ. ಕವಿ ವಿಜಯಕಾಂತರು ಬರೆದ ಈ ಕವಿತೆಗಳಲ್ಲಿ ತಾವು ಹೇಳಲೇಬೇಕಾದ ವಿಚಾರಗಳನ್ನು ಮಕ್ಕಳಿಗೆ ಹೇಳುವಲ್ಲಿ ಯಶಸ್ವಿಯಾಗಿದ್ದಾರೆ. ತಮ್ಮ ಆಲೋಚನೆಗಳ ನೆಲೆಯಲ್ಲಿ ಮಕ್ಕಳ ಜಗತ್ತನ್ನು ಸುಂದರವಾಗಿ ಕಟ್ಟಿಕೊಟ್ಟಿದ್ದಾರೆ.

**ಕಲ್ಲೇಶ್ ಕುಂಬಾರ್**
ಮಲ್ಲಿಕಾರ್ಜುನ ಹೋಟೆಲ್, ಅಂಚೆ : ಹಾರೂಗೇರಿ – ೫೯೧ ೨೨೦
ರಾಯಭಾಗ ತಾಲೂಕು, ಬೆಳಗಾವಿ ಜಿಲ್ಲೆ

# ರೋಹಿಂಗ್ಯಾ ಉತ್ಪಾತಕ್ಕೆ ಪರಿಹಾರವುಂಟೆ?





**ಸಮಾನತೆ ಮತ್ತು ಪ್ರಜಾಪ್ರಭುತ್ವವಾದಿ ಕ್ರಮಗಳು ಕಾರ್ಯಸಾಧುವಲ್ಲದ ಒತ್ತಡಗಳಿಂದಲೂ ಹೆಚ್ಚು ಪರಿಣಾಮಕಾರಿಯಾಗಬಹುದು. ಭಾವನಾತ್ಮಕವಾಗಿ ರೋಹಿಂಗ್ಯಾಗಳ ವೇದನೆಯನ್ನು ಅನುಭವಿಸುವ ದೃಷ್ಟಿ ಮತ್ತು ಶಕ್ತಿ ಬೇಕು, ಅಷ್ಟೆ. ಬಿಕ್ಕಟ್ಟಿಗೆ ಕಾರಣವಾದ ಎರಡೂ ಪಕ್ಷಗಳು ಪರಸ್ಪರ ಮಾತುಕತೆಗೆ ಮುಂದಾಗುವುದು ಸಮಸ್ಯೆಯ ಪರಿಹಾರಕ್ಕಿರುವ ಒಂದು ಸರಿಯಾದ ಹಾದಿ. ರೋಹಿಂಗ್ಯಾಗಳ ಸಮಸ್ಯೆಯನ್ನು ಪರಿಹರಿಸುವುದು ನಿಜವಾದ ಆಕಾಂಕ್ಷೆಯಾಗಿದ್ದರೆ, ಪರಿಹಾರವು ನಿರ್ಬಂಧ, ಶಕ್ತಿಪ್ರಯೋಗ, ಹಕ್ಕುಗಳನ್ನಾಧರಿಸಿದ ಆಪಾದನೆ ಮತ್ತು ಬೈಗುಳ ಇವುಗಳಿಂದ ದೊರೆಯುವುದಿಲ್ಲ. ಮಾಯನ್ಮಾರಿನ ಬಹುಸಂಖ್ಯಾತರು ಮತ್ತು ರೋಹಿಂಗ್ಯಾಗಳ ನಡುವೆ ಸಾಮರಸ್ಯದ ಒಪ್ಪಿತ ಸಂಬಂಧಗಳಿಗಾಗಿ ಶ್ರಮಿಸುವುದು ಅಗತ್ಯ ಮತ್ತು ಸೂಕ್ತ.**

**ರೋ**ಹಿಂಗ್ಯಾಗಳ ಬಗ್ಗೆ ನಮಗೆ ತಿಳಿದಿರುವುದೆಷ್ಟು ? ಅವರ ದೇಶ ಅವರನ್ನು ಉಳಿಸಿಕೊಳ್ಳಲು ಸಿದ್ಧವಿಲ್ಲ. ನೆರೆರಾಷ್ಟ್ರಗಳಾದ ಬಂಗ್ಲಾದೇಶ, ಭಾರತ ಮತ್ತು ಚೀಣಾ ಕೂಡ ಅವರನ್ನು ಇಷ್ಟಪಡುವುದಿಲ್ಲ. ಅವರ ಪರಿಸ್ಥಿತಿ ಹೀನಾಯವಾಗಿದೆ, ಎಲ್ಲಿಯಾದರೂ ಅವರಿಗೆ ನೆಲೆ ಮತ್ತು ಸೂರು ಬೇಕು, ಸುರಕ್ಷಿತವಾಗಿರಲು ಆಸರೆ ಬೇಕು.

ಎರಡು ಪ್ರಶ್ನೆಗಳು ಉದ್ಭವಿಸುತ್ತವೆ. ರೋಹಿಂಗ್ಯಾಗಳು ಏಕೆ ಯಾರಿಗೂ ಬೇಡದವರಾಗಿದ್ದಾರೆ ಮತ್ತು ಅಂತಹ ಸನ್ನಿವೇಶ ಹೇಗೆ ಉದ್ಭವಿಸಿತು ? ವಿಶ್ವದ ರಾಷ್ಟ್ರಗಳಿಗೆ ಉತ್ತರಗಳಲ್ಲಿ ಆಸಕ್ತಿ ಇಲ್ಲ. ಅವರೇನಿದ್ದರೂ ಉದ್ದುದ್ದದ ನೈತಿಕ ಭಾಷಣಗಳನ್ನು ಕುಟ್ಟುತ್ತಾರೆ, ಅಷ್ಟೆ. ಅವರಲ್ಲಿ ಅನೇಕರ ಅಭಿಪ್ರಾಯ ಬಹುಮಟ್ಟಿಗೆ ಇದು : ರೋಹಿಂಗ್ಯಾಗಳು ಕಷ್ಟಕ್ಕೆ ಸಿಲುಕಿದ್ದಾರೆ, ಅವರು 'ಪೀಡನೆಗೆ' ಗುರಿಯಾಗಿದ್ದಾರೆ. ಅಂತರರಾಷ್ಟ್ರೀಯ ಕಾನೂನು ಮತ್ತು ನೈತಿಕತೆ ಅವರಿಗೆ ನೆಲೆ ಕಲ್ಪಿಸಿಕೊಡಬೇಕು. ಮಾಯನ್ಮಾರ್‌ಗೆ ಶಿಕ್ಷೆ ವಿಧಿಸಬೇಕು, ಏಕೆಂದರೆ ಆ ದೇಶ ಅವರ ಪೋಷಣೆಯನ್ನು ಕೈಬಿಟ್ಟಿದೆ. ಭಾರತದಂತಹ ದೇಶಗಳೂ ದಂಡನೆಗೆ ಅರ್ಹ, ಏಕೆಂದರೆ ಮಾನವೀಯತೆಯ ಭಾವನೆಯನ್ನೇ ಅವು ಗಾಳಿಗೆ ತೂರಿವೆ.

ಹೀಗೆ ನೈತಿಕ ಉಪದೇಶ ನೀಡುವುದು ನಿರರ್ಥಕ. ಮಾಯನ್ಮಾರ್ ಈ ಉಪದೇಶವನ್ನು ಕೇಳಿಸಿಕೊಳ್ಳುವುದಿಲ್ಲ. ಭಾರತ ಮತ್ತು ಚೀಣಾ ಸಹ ಜಾಣಕಿವುಡರೇ. ಹಾಗಿದ್ದರೆ ವಿಶ್ವ ಮತ್ತು ವಿಶ್ವಸಂಸ್ಥೆ ಏನು ಮಾಡಬೇಕು ? ಮಾಯನ್ಮಾರ್ ಮೇಲೆ ಆರ್ಥಿಕ ದಿಗ್ಬಂಧನ ಹೇರಬೇಕೆ ? ಶಸ್ತ್ರಾಸ್ತ್ರ, ಆಹಾರ, ದಿನನಿತ್ಯದ ಬಳಕೆಯ ಸರಕುಗಳು, ತಂತ್ರಜ್ಞಾನ, ಇವನ್ನೆಲ್ಲಾ ಕೊಡುವುದಿಲ್ಲವೆಂದು ಘೋಷಿಸಬೇಕೆ ? ಅದರಿಂದ ಸಮಸ್ಯೆ ಮತ್ತು ಸಂಘರ್ಷ ದ್ವಿಗುಣವಾಗುತ್ತದೆ, ರೋಹಿಂಗ್ಯಾಗಳ ದಮನ ಇನ್ನೂ ಹೆಚ್ಚುತ್ತದೆ. ಬಹುಶಃ ಮಾಯನ್ಮಾರಿನ ಇತರರೂ ದಮನಕ್ಕೆ ಸಿಲುಕುತ್ತಾರೆ; ಅಂದರೆ ಭಯೋತ್ಪಾದನೆ ಮತ್ತು ಹಾನಿ ಇನ್ನೂ ಹೆಚ್ಚುತ್ತವೆ.

ಸಮಾನತೆ ಮತ್ತು ಪ್ರಜಾಪ್ರಭುತ್ವವಾದಿ ಕ್ರಮಗಳು ಇವಕ್ಕಿಂತಲೂ ಹೆಚ್ಚು ಪರಿಣಾಮಕಾರಿಯಾಗಬಹುದು. ಭಾವನಾತ್ಮಕವಾಗಿ ರೋಹಿಂಗ್ಯಾಗಳ ವೇದನೆಯನ್ನು ಅನುಭವಿಸುವ ದೃಷ್ಟಿ ಮತ್ತು ಶಕ್ತಿ ಬೇಕು, ಅಷ್ಟೆ. ಬಿಕ್ಕಟ್ಟಿಗೆ ಕಾರಣವಾದ ಎರಡೂ ಪಕ್ಷಗಳು ಪರಸ್ಪರ ಮಾತುಕತೆಗೆ ಮುಂದಾಗುವುದು ಸಮಸ್ಯೆಯ ಪರಿಹಾರಕ್ಕಿರುವ ಒಂದು ಸರಿಯಾದ ಹಾದಿ.

ರೋಹಿಂಗ್ಯಾಗಳ ಸಮಸ್ಯೆಯನ್ನು ಪರಿಹರಿಸುವುದು ನಿಜವಾದ ಆಕಾಂಕ್ಷೆಯಾಗಿದ್ದರೆ, ಪರಿಹಾರವು ನಿರ್ಬಂಧ, ಶಕ್ತಿಪ್ರಯೋಗ, ಹಕ್ಕುಗಳನ್ನಾಧರಿಸಿದ ಆಪಾದನೆ ಮತ್ತು ಬೈಗುಳ ಇವುಗಳಿಂದ ದೊರೆಯುವುದಿಲ್ಲ. ಮಾಯನ್ಮಾರಿನ ಬಹುಸಂಖ್ಯಾತರು ಮತ್ತು ರೋಹಿಂಗ್ಯಾಗಳ ನಡುವೆ ಸಾಮರಸ್ಯದ ಒಪ್ಪಿತ ಸಂಬಂಧಗಳಿಗಾಗಿ ಶ್ರಮಿಸುವುದು ಅಗತ್ಯ ಮತ್ತು ಸೂಕ್ತ.

ರೋಹಿಂಗ್ಯಾ ಮತ್ತು ಮಾಯನ್ಮಾರಿನ ಇತರರ ನಡುವಣ ದ್ವೇಷದ ಸನ್ನಿವೇಶವನ್ನು ಚರ್ಚಿಸುವಾಗ ಒಂದು ಸ್ವಾರಸ್ಯಕರ ಸಂಗತಿಯ ಮೇಲೆ ಒತ್ತು ಬಿದ್ದಿದೆ. ರೋಹಿಂಗ್ಯಾಗಳು ಹಿಂದೊಮ್ಮೆ ತಮ್ಮ ಪ್ರದೇಶವನ್ನು ಪಾಕಿಸ್ತಾನಕ್ಕೆ ಸೇರಿಸಿ ಬಿಡಬೇಕೆಂದು ಆಗ್ರಹಿಸಿದರು. ಭಾರತದ ವಿಭಜನೆಯ ಸಮಯದಲ್ಲಿ ಈ ಒತ್ತಾಯ ಬಂದಿತ್ತು; ಅದಕ್ಕೆ ನೀಡಲಾಗಿದ್ದ ಕಾರಣ, ತಾವು ಮುಸಲ್ಮಾನರು ಎಂಬುದು. ಬ್ರಿಟಿಷರು ಅದನ್ನು ನಿರಾಕರಿಸಿದ್ದರು; ಅಂದಿನ ಬರ್ಮೀಯರೂ ಹಾಗೆಯೇ ಮಾಡಿದ್ದರು. ಅಂದಿನಿಂದಲೂ ಅಪ್ರಕಟಿತ ಅಸಮಾಧಾನವೊಂದು ಇದ್ದೇ ಇದೆ : ರೋಹಿಂಗ್ಯಾಗಳು ಪ್ರತ್ಯೇಕತೆಗೆ ಚಳುವಳಿ ಮಾಡುತ್ತಾರೆ, ಅದಕ್ಕೆ ಇಸ್ಲಾಂ ಪರವಾಗಿರುವ ಪಾಕಿಸ್ತಾನ ಮತ್ತು ತೈಲ ಸಂಪತ್ತಿರುವ ಇಸ್ಲಾಂ ಹಿನ್ನೆಲೆಯ ದೇಶಗಳು ಬೆಂಬಲ ನೀಡುತ್ತವೆ, ಎಂದು. ಮಾಯನ್ಮಾರ್ ಸರ್ಕಾರವು ಇದರಿಂದ ಅಸಂತುಷ್ಟಗೊಂಡಿದೆ.

ಬೇರೊಂದು ಆತಂಕದ ಸೂಚನೆಯೂ ಹೊರಬಿದ್ದಿದೆ : ರೋಹಿಂಗ್ಯಾಗಳ ಪೈಕಿ ತೀವ್ರ ಭಾವನೆಯುಳ್ಳವರು ಮುಕ್ತವಾಗಿ ಮತ್ತು ಸ್ವ–ಇಚ್ಛೆಯಿಂದ ಇಸ್ಲಾಮಿ ತೀವ್ರವಾದಿಗಳ ನಾಯಕತ್ವವನ್ನು ಮನ್ನಿಸುತ್ತಿದ್ದಾರೆ, ಎಂದು. ರೋಹಿಂಗ್ಯಾಗಳಿಗೆ ನೆಲೆ ನೀಡಬಹುದಾದ ದೇಶಗಳಿಗೆ ಈ "ಮುಕ್ತತೆಯು" ಪೇಚಾಟ ಉಂಟುಮಾಡುತ್ತದೆ. ಬಂಗ್ಲಾದೇಶ ಸಹ ಇದನ್ನು ಪರಿಗಣನೆಗೆ ತೆಗೆದುಕೊಂಡಿದೆ, ಇನ್ನು ಭಾರತ ಮತ್ತು ಚೀಣಾದ ಮಾತೇಕೆ !

**ತನು ಮೆಹ್ತಾ**

ಕಾನೂನಿನ ಪರಿಧಿಯಲ್ಲಿ ನ್ಯಾಯಾಲಯದಲ್ಲಿ ವಾದ ಮಂಡಿಸುವಾಗ ಸಾಮಾನ್ಯವಾಗಿ ಇಂತಹ ಬೇರೆ ಹಿಂದಿನ ಘಟನೆಗಳು ಮತ್ತು ತೀರ್ಮಾನಗಳನ್ನು ಉಲ್ಲೇಖಿಸುವುದು ರೂಢಿಯಲ್ಲಿದೆ. ಪ್ರಸ್ತುತ

## ದುರಂತ

ನನ್ನಲ್ಲಿ ಸುಂದರ
ಕಣ್ಣುಗಳಿದ್ದಾಗ
ಕನಸುಗಳಿರಲಿಲ್ಲ
ಮನಮಂಚದಲ್ಲೀಗ
ಸ್ವಪ್ನ ಶೃಂಗಾರ.
ನನ್ನಲ್ಲೀಗ ಕಣ್ಣೇ ಉಳಿದಿಲ್ಲ !

**ಶೋಭಾ ಪ್ರಮೋದ್**
ರಾಯಘಡ, ಮಹಾರಾಷ್ಟ್ರ

---

ವಿಷಯದಲ್ಲಿ ಅಂಥದೇನಾದರೂ ಉಂಟೆ ? ವಲಸೆ ಬಂದು, ಆಶ್ರಯ ಕೋರಿ, ಅದನ್ನು ಪಡೆದ ನಂತರ ಹೊಸ ಸನ್ನಿವೇಶಕ್ಕೆ ಪೂರ್ತಿಯಾಗಿ ಒಗ್ಗಿಕೊಂಡ ನಿದರ್ಶನಗಳುಂಟೆ ? ಬಹಳ ಫಲಪ್ರದವಾದ ರೀತಿಯಲ್ಲಿ ಇದು ನಡೆದಿರುವುದಕ್ಕೆ ಪುರಾವೆಯುಂಟು. ನಿರಾಶ್ರಿತರಾಗಿ ಬಂದು ಸೇರಿಕೊಂಡವರು ಶತಮಾನಗಳ ಕಾಲ ಯಾವ ದೊಡ್ಡ ಸಮಸ್ಯೆಗೂ ಎಡೆ ಮಾಡಿಕೊಡದೆ ಜೀವಿಸಿರುವುದುಂಟು. ಉದಾಹರಣೆಗೆ, ಭಾರತಕ್ಕೆ ಶತಮಾನಗಳ ಹಿಂದೆ ಬಂದು ನೆಲೆಸಿದ ಪಾರ್ಸಿಗಳು. ಅವರು ಇಸ್ಲಾಂ ಮತಧರ್ಮಕ್ಕೆ ಪರಿವರ್ತನೆಗೊಂಡ ಪರ್ಷಿಯಾದಿಂದ ಬಂದವರು. ಇಲ್ಲಿಯ ಸ್ಥಳೀಯ ದೊರೆಯು ಅವರಿಗೆ ಆಶ್ರಯ ನೀಡಲು ನಾಲ್ಕು ಷರತ್ತುಗಳನ್ನು ವಿಧಿಸಿದ್ದನೆಂದು ಹೇಳಲಾಗಿದೆ : (ಅ) ಸ್ಥಳೀಯರ ಮತಾಂತರ ಕೂಡದು, (ಆ) ಆಶ್ರಯ ಪಡೆದವರ ಮತಧರ್ಮದ ಪ್ರಚಾರ ಕೂಡದು, (ಇ) ಆಯುಧಗಳನ್ನು ಇರಿಸಿಕೊಳ್ಳಕೂಡದು ಮತ್ತು ಒಂದು ಸ್ಥಳದಿಂದ ಇನ್ನೊಂದಕ್ಕೆ ಕಳಿಸಕೂಡದು, ಮತ್ತು (ಈ) ಸ್ಥಳೀಯ ಭಾಷೆ ಮತ್ತು ಉಡುಪನ್ನು ಅಂಗೀಕರಿಸಿ ಸ್ವೀಕರಿಸಬೇಕು. ಅಂದರೆ, ಸ್ಥಳೀಯರ ನಡುವೆ ಪರಕೀಯರಂತೆ ಉಳಿಯಬಾರದು ಮತ್ತು ವ್ಯವಹರಿಸಬಾರದು, ಎಂದರ್ಥ. ಈ ಷರತ್ತುಗಳನ್ನು ಮಾನ್ಯ ಮಾಡುವುದಾದರೆ ರಾಜನು ಆ ಪರ್ಷಿಯನ್ನರಿಗೆ ಕೆಲವು ಅನುಕೂಲಗಳನ್ನು ನೀಡಲು ಸಿದ್ಧನಿದ್ದ : ಅವರ ಮತಧರ್ಮದಲ್ಲಿ ನಂಬಿಕೆ ಮತ್ತು ಆಚರಣೆ, ಮನೆ ಮತ್ತು ಗುಡಿ ಕಟ್ಟಿಕೊಳ್ಳಲು ಜಾಗ, ತನ್ನ ರಾಜ್ಯದಲ್ಲಿದ್ದುಕೊಂಡು ಉದ್ಯೋಗ ಮತ್ತು ವ್ಯಾಪಾರಗಳಲ್ಲಿ ತೊಡಗಲು ಪರವಾನಗಿ.

ನಿರ್ವಸಿತರಾಗಿ ಬಂದ ಪಾರ್ಸಿಗಳು ಭಾರತದೊಡನೆ ಸಮ್ಮಿಳಿತರಾಗುವುದರಲ್ಲಿ ಯಶಸ್ಸು ಪಡೆದಿದ್ದು ಒಂದೆರಡು ಕಾರಣಗಳಿಂದ : (ಅ) ಆತಿಥೇಯ ರಾಷ್ಟ್ರವು ವಿಧಿಸಿದ್ದ ಷರತ್ತುಗಳನ್ನು ಅಕ್ಷರಶಃ ಪಾಲಿಸಿದ್ದು, ಮತ್ತು (ಆ) ಆ ಸಮುದಾಯದಲ್ಲಿ ಕಂಡುಬಂದ ಒಳ್ಳೆಯ ನಾಯಕತ್ವ. ಇದರಿಂದಾಗಿ, ಆ ಸಮುದಾಯವು ಯಾವ ಸಂಕಟಕ್ಕೂ ಎಡೆಕೊಡದೆ ಭಾರತದಲ್ಲಿ ಸುಲಭವಾಗಿ ನೆಲೆಸಿತು.

ರೋಹಿಂಗ್ಯಾಗಳಿಗೆ ಅಂತಹ ನಾಯಕತ್ವ ಉಂಟೆ ? ಅವರಿಗೆ ಬೇಕಾದ್ದಾದರೂ ಏನು ? ತಮ್ಮದೇ ದೇಶದಲ್ಲಿ ಉಳಿಯುವ ಆಶಯವನ್ನು ಹೊಂದಿದ್ದಾರೆಯೆ ? ಹಾಗಿದ್ದರೆ, ಮಾಯನ್ಮಾರ್‌ನ ತಮ್ಮ ಸಹ–ದೇಶವಾಸಿಗಳೊಂದಿಗೆ ಬೆರೆತು ಅವರ ನಿರೀಕ್ಷೆಗಳನ್ನು ಮತ್ತು ಅಗತ್ಯಗಳನ್ನು ಪೂರೈಸಬೇಕು. ಅಥವಾ ಅವರ ಆಶಯವು "ಇಸ್ಲಾಮಿನ ಉಮ್ಮ" ಎಂದು ಯಾವುದನ್ನು ಹೆಸರಿಸುತ್ತಾರೋ ಅದರೊಡನೆ ಏಕೀಭವಿಸಿಕೊಳ್ಳಬೇಕೆಂದೋ ? ತಮ್ಮ ಮತಧರ್ಮವನ್ನು ಅಡ್ಡಿಯಿಲ್ಲದೆ ಅನುಸರಿಸುವುದು ಬೇರೆ, "ಉಮ್ಮ" ಎಂಬುದರ ಅವಿಭಾಜ್ಯ ಅಂಗವಾಗಲು ತಾವು ನೆಲೆಸಿರುವ ದೇಶದೊಡನೆ ಸಮ್ಮಿಳಿತವಾಗದಿರುವ ಆಕಾಂಕ್ಷೆಯೇ ಬೇರೆ. ಅಂತಹ ಆಕಾಂಕ್ಷೆ ಇದ್ದರೆ ರೋಹಿಂಗ್ಯಾಗಳು ಮಾಯನ್ಮಾರನ್ನು ತೊರೆದು ಹೊರಹೋಗುವುದು ಅಗತ್ಯ. ಎಲ್ಲಿಗೆ ಹೋಗುತ್ತಾರೆಂಬುದು ಅವರ ತೊರೆಯಲಿಚ್ಛಿಸುವ ಮಾಯನ್ಮಾರ್‌ಗೆ ಸಂಬಂಧಿಸುವ ವಿಷಯವಲ್ಲ. ತೈಲೋತ್ಪಾದಕ ಇಸ್ಲಾಮಿ ದೇಶಗಳಿಗೆ ಹೋಗಲು ಅಲ್ಲಿ ಅವರಿಗೆ ಸ್ವಾಗತವು ಕಾದಿದೆಯೆ ? ಅವರನ್ನು ಸೇರಿಸಿಕೊಳ್ಳಲು ಸಿದ್ಧವಿರುವ ದೇಶಕ್ಕೆ ಹೋಗಲು ಅಡ್ಡಿಯಿಲ್ಲ, ಆದರೆ ಸೇರಿಸಿಕೊಳ್ಳುವವರ ನಿರ್ಣಯವನ್ನು ಮೊದಲೇ ಪಡೆದುಕೊಳ್ಳಬೇಕು.

ರೋಹಿಂಗ್ಯಾಗಳ ಮತಧರ್ಮದ ಪಾಲನೆಗೆ ಅಡ್ಡಿ–ಆತಂಕಗಳನ್ನು ಮಾಯನ್ಮಾರ್ ಉಂಟುಮಾಡಕೂಡದೆಂಬುದು ಸಹಜವಾದ ನಿರೀಕ್ಷೆ. ಅಂತೆಯೇ ಅವರಿಗೆ ರಕ್ಷಣೆ ಒದಗಿಸುವುದು ಸಹ ಆ ದೇಶದ ಜವಾಬ್ದಾರಿ. ಸರ್ಕಾರಿ ಯಂತ್ರವೇ ಅವರ ವಿರುದ್ಧ ನಿಂತು, ಬೇರೆ ಧರ್ಮದವರು ರೋಹಿಂಗ್ಯಾಗಳಿಗೆ ಕಿರುಕುಳ ನೀಡುತ್ತಿದ್ದರೆ ಏನೂ ಘಟಿಸಿಲ್ಲವೆಂಬಂತೆ ಎತ್ತಲೋ ಮುಖ ತಿರುಗಿಸುವುದು ಅಕ್ಷಮ್ಯವೆಂಬುದು ಸರಿ. ಆದರೆ ಯಾವುದೇ ದೇಶದ ನಿಗದಿತ ಸಾಂವಿಧಾನಿಕ ನಿಯಮಗಳನ್ನು ಅಲಕ್ಷಿಸಿ ಒಂದು ಸಮುದಾಯವು ಆ ದೇಶದಲ್ಲಿ ಉಳಿಯಲು ಇಲ್ಲವೇ ನೆಲೆಸಲು ಸಾಧ್ಯವಾಗದು. ಅಂತಹ ನಿಯಮಗಳಿಗೆ ಬದ್ಧರಾಗಿರಲು ಒಪ್ಪದಿದ್ದ ಪಕ್ಷದಲ್ಲಿ ಬೇರೆಲ್ಲೋ ಹೋಗಿ ಹೊಸ ಜೀವನ, ಹೊಸ ಸಂಘರ್ಷ, ಹೊಸ ಸಮಾಜ, ಇವುಗಳನ್ನು ಅರಸಿಕೊಳ್ಳಬೇಕಾಗುತ್ತದೆ. ಯಾವ ನಿರಾಶ್ರಿತರಿಗೂ ಇಂತಹ ಕಟ್ಟಳೆಯು ಅನಿವಾರ್ಯ. ಹೊಸ ಸಮಾಜದಲ್ಲಿ ವಿಲೀನರಾಗಬೇಕಾದರೂ ಕೂಡ ಅಲ್ಲಿಯ ಸಾಂವಿಧಾನಿಕ ನಿಯಮಗಳ ಅನುಸರಣೆಯು ಒಪ್ಪಿತವಾಗಬೇಕು. "ಉಮ್ಮ"ದಲ್ಲಿ ಮಾತ್ರವೇ ಶ್ರದ್ಧೆ ಇದ್ದರೆ ರೋಹಿಂಗ್ಯಾಗಳು ತಮ್ಮ ಸಮಸ್ಯೆಯಿಂದ ಪಾರಾಗುವುದು ದುಷ್ಕರ. ಮಾಯನ್ಮಾರ್‌ನಲ್ಲಿ ಉಳಿಯಲು ಅವರು ಬೌದ್ಧಮತಕ್ಕೆ ಪರಿವರ್ತಿತರಾಗ ಬೇಕಾಗಿಲ್ಲ, ಆದರೆ ಅದರೊಂದಿಗೆ ಸಹಬಾಳ್ವೆಗೆ ಅಗತ್ಯವಾದ ಮನೋಭೂಮಿಕೆಯನ್ನು ರಚಿಸಿಕೊಳ್ಳಬೇಕು. ತಮ್ಮ ಮತಧಾರ್ಮಿಕ ಸ್ವಂತಿಕೆಯನ್ನು ರಕ್ಷಿಸಿಕೊಳ್ಳಲು ದೇಶವನ್ನು ಒಡೆಯಬೇಕೆಂದು ಆಗ್ರಹಿಸುವುದು ಸುತರಾಂ ಪ್ರಾಯೋಗಿಕವಲ್ಲ. ಬೌದ್ಧರು ಸಹ ವೈಮನಸ್ಯವನ್ನು ಬಿಟ್ಟು ನೇರನುಡಿಯವ ರಾಗಬೇಕಾದ್ದು ಅವಶ್ಯಕ.

ಮತಧರ್ಮ ಮತ್ತು ಸ್ವಂತದ ತಾಯ್ನಾಡು, ಇವೆರಡರ ನಡುವೆ ದ್ವಂದ್ವ ಅಥವಾ ಸಂಘರ್ಷ ಅನಗತ್ಯ. ಮತಧರ್ಮಗಳ ಪಾಲಕರು ಮತ್ತು ಆಯಾ ದೇಶಗಳ ಪ್ರಭುತ್ವ, ಹೀಗೆ ಎರಡು ಘಟಕಗಳೂ ಒಡಂಬಡಿಕೆಯೊಂದನ್ನು ಮಾಡಿಕೊಳ್ಳಬೇಕಾಗುತ್ತದೆ. ಅದಕ್ಕೆ ಸೂಕ್ತ ನಾಯಕತ್ವವು ಬೇಕಿದೆ. ರೋಹಿಂಗ್ಯಾಗಳಿಗೆ ಆಶ್ರಯ ನೀಡಲು ಸಿದ್ಧವಿರುವ ದೇಶಗಳಿದ್ದರೆ ಅವು ಹೊಸ ಕಾನೂನು, ಹೊಸ ಉಪದೇಶ ಮತ್ತು ಹೊಸ ಷರತ್ತುಗಳನ್ನು ವಿಧಿಸಹೋಗುವುದಿಲ್ಲ. ಆಶ್ರಯ ಪಡೆಯುವವರ ನಾಯಕತ್ವವೊಂದಿದ್ದರೆ ಅದರ ಜೊತೆ ಆಯಾದೇಶಗಳ ಪ್ರಭುತ್ವಗಳು ಮಾತುಕತೆ ನಡೆಸಬಲ್ಲವು.

ಬ್ರಿಟನ್ನಿನ ವಸಾಹತುಶಾಹಿಯು ತಾನು ಹೋದಲ್ಲೆಲ್ಲಾ ದೇಶಗಳನ್ನು ಇಬ್ಭಾಗ ಮಾಡಿಬಂದಿದೆ. ಪಶ್ಚಿಮ ಏಷ್ಯಾ, ದಕ್ಷಿಣ ಏಷ್ಯಾ, ಆಫ್ರಿಕ, ಇಲ್ಲೆಲ್ಲಾ ಇದಕ್ಕೆ ನಿದರ್ಶನಗಳಿವೆ. ವಸಾಹತು ಆಳ್ವಿಕೆಗೆ ತುತ್ತಾಗಿದ್ದವರು ಇಂದಿಗೂ ವಿಭಜನೆಗಳ ವಿಷಫಲವನ್ನು ಉಣ್ಣುತ್ತಿರುವುದು ವಾಸ್ತವ. ಪರಸ್ಪರ ದ್ವೇಷ, ಕೋಪ, ಅಸಹನೆ, ಇವೆಲ್ಲಾ ದೇಶಗಳ ವಿಭಜನೆಯ ಹೊಲಸು ಪರಿಣಾಮಗಳು. ಆದರೆ ಆ ವಿಭಜನೆಗಳು ಪರಸ್ಪರ ಸಹಬಾಳ್ವೆಯನ್ನೂ ತಕ್ಕಮಟ್ಟಿಗೆ ಕಲಿಸಿವೆ. ಸಹಬಾಳ್ವೆಯಲ್ಲಿ ಕೊಡು–ಕೊಳೆಗಳು ಇದ್ದೇ ತೀರುತ್ತವೆ. ಶಾಂತಿಯುತ ಸಹಬಾಳ್ವೆಗೆ ಒಂದು ಒಪ್ಪಿತ ಸೂತ್ರ ಇರಲೇಬೇಕು. ರೋಹಿಂಗ್ಯಾಗಳಿಗೆ ಸಹಬಾಳ್ವೆ ಬೇಕೋ, ವಿಭಜನೆ ಬೇಕೋ ? ವಿಭಜನೆ ಬೇಕೆಂದರೆ ಮಾಯನ್ಮಾರ್ ಅದನ್ನು ಒಪ್ಪಲೇಬೇಕೆಂದು ವಿಧಿಸಲು ಹೇಗೆ ಸಾಧ್ಯ ? ಯಹೂದಿಗಳು, ಟಿಬೆಟನ್ನರು, ಪಾರ್ಸಿಗಳು, ಬಹಾಯಿಗಳು, ಮುಂತಾದವರು ನಿರಾಶ್ರಿತರಾಗಿ ಬೇರೆಡೆಗೆ ಹೋದಾಗ ಹೊಸ ಸನ್ನಿವೇಶಗಳಿಗೆ ಒಗ್ಗಿಕೊಂಡರಲ್ಲವೆ ? ರೋಹಿಂಗ್ಯಾಗಳು ಇಷ್ಟು ಶತಮಾನಗಳ ಕಾಲ ಮಾಯನ್ಮಾರ್‌ನಲ್ಲಿದ್ದು ಈಗ ಅಲ್ಲಿಂದ ಉಧ್ವಸ್ಥರಾಗಬೇಕೆಂದರೆ ಅದು ಕಠಿಣವಾದ ಸಂದರ್ಭವೇ ಸರಿ. ಅಮೆರಿಕಾಕ್ಕೆ ಹೋಗಿ ನೆಲೆಸಿರುವ ಭಾರತೀಯರು ಅಲ್ಲಿಂದ ಈ ಕೂಡಲೆ ಉಧ್ವಸ್ಥರಾಗಬೇಕಾಗಿ ಬಂದರೆ ಏನರ್ಥ ? ಅದು ಅನರ್ಥದ ಹಾದಿ. ಮಾಯನ್ಮಾರ್‌ನ ಪ್ರಭುತ್ವ ಮತ್ತು ರೋಹಿಂಗ್ಯಾಗಳ ನಾಯಕತ್ವ ಮಾತುಕತೆ ನಡೆಸಿ ಪರಸ್ಪರರಿಗೆ ಒಪ್ಪಿಗೆಯಾಗುವ ಸೂತ್ರವೊಂದನ್ನು ಹೆಣೆಯಬೇಕು. ರೋಹಿಂಗ್ಯಾಗಳಿಗೆ ಮೊದಲು ನಾಯಕತ್ವವೊಂದು ರೂಪುಗೊಳ್ಳಬೇಕು, ಆಮೇಲೆ ತಮ್ಮ ಮುಂದಿರುವ ಆಯ್ಕೆಗಳನ್ನು ನಿರ್ಧರಿಸಬಹುದು. ವಿಶ್ವವೆಲ್ಲಾ ಅಲ್ಲಿ ಮೂಗುತೂರಿಸಿ ಪರಿಹಾರ ಒದಗಿಸಲಾರದು. ಹೆಚ್ಚೆಂದರೆ, ವಿಶ್ವಸಂಸ್ಥೆಯು ಮಾತುಕತೆಗಳಿಗೆ ಹಾದಿ ಮಾಡಿಕೊಡಲು ಮಧ್ಯಪ್ರವೇಶ ಮಾಡಬಹುದು, ಅಷ್ಟೆ. ವಿಶ್ವಸಂಸ್ಥೆ ಸಹ ನ್ಯಾಯಾಧೀಶನಂತೆ ವರ್ತಿಸಿ ತೀರ್ಪು ಕೊಡಲಾರದು. ರೋಹಿಂಗ್ಯಾಗಳಿಗೆ ಉತ್ತಮ ಸಹಾಯ ನೀಡಬಯಸುವವರು ಮೊದಲು ಅವರ ನಡುವಿನಿಂದಲೇ ಒಂದು ನಾಯಕತ್ವವು ಆವಿರ್ಭವಿಸುವಂತೆ ಸಹಾಯಹಸ್ತವನ್ನು ಚಾಚಬೇಕು.

**ತನು ಮೆಹ್ತಾ**
ವಕೀಲರು, ಎಸ್.ಎಫ್.ಬಿ. ತ್ಯಾಬ್ಜಿ ಅಂಡ್ ಕೊ.,
ನಂ. ೧೦/೧೧, ೪ನೇ ಮಹಡಿ
ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯ ಕಟ್ಟಡ ೫೫, ಮಹಾತ್ಮ ಗಾಂಧಿ ರಸ್ತೆ
ಮುಂಬಯಿ – ೪೦೦ ೦೦೧

ಬೀನಾದಾಸ್ ನಮ್ಮ ದೇಶದ ಸ್ವಾತಂತ್ರ್ಯ ಹೋರಾಟದ ದಿಗಂತದಲ್ಲಿ ಪ್ರಜ್ವಲಿಸುತ್ತಿರುವ ಮಿನುಗುತಾರೆ. ಕ್ರಾಂತಿಕಾರಿ ಹೋರಾಟದ ಮೂಲಕ ತನ್ನ ಜೀವನವನ್ನು ಆರಂಭಿಸಿದ ಬೀನಾದಾಸ್ ೧೯೩೨ರಲ್ಲಿ ಬಂಗಾಲದ ಗವರ್ನರ್ ಆಗಿದ್ದ ಸ್ಟಾನ್ಲೇ ಜಾಕ್‌ಸನ್ ಕಲ್ಕತ್ತಾ ವಿಶ್ವವಿದ್ಯಾಲಯದ ಘಟಿಕೋತ್ಸವ ಭಾಷಣ ಮಾಡಲು ಬಂದಾಗ ಅವರತ್ತ ಐದು ಗುಂಡುಗಳನ್ನು ಹಾರಿಸಿ ವಸಾಹತುಶಾಹಿಯ ವಿರುದ್ಧ ತನ್ನ ಪ್ರತಿಭಟನೆಯನ್ನು ತೋರಿಸಿದಳು ಮತ್ತು ಪೊಲೀಸರ ಕೈಗೆ ಸಿಕ್ಕಿ ಏಳು ವರ್ಷಗಳ ಸೆರೆಮನೆ ವಾಸ ಅನುಭವಿಸಿದಳು. ಅವಳು ತನ್ನ ಸೆರೆಮನೆವಾಸದ ಅನುಭವವನ್ನು "ಶೃಂಖಲ್ ಝೇಂಕಾರ್" ಎಂಬ ಆತ್ಮಕತೆಯಲ್ಲಿ ನಿವೇದಿಸಿಕೊಂಡಿದ್ದಾಳೆ. ಆತ್ಮಚರಿತ್ರೆಯ ಒಂದು ಪುಟವನ್ನು ಓದುಗರಿಗಾಗಿ ಇಲ್ಲಿ ಕೊಟ್ಟಿದೆ.

# ಲೆನಿನ್‌ರೊಡನೆ ಮುಖಾಮುಖಿ

ನಾವು ಪ್ರೆಸಿಡೆನ್ಸಿ ಜೈಲಿನಲ್ಲಿದ್ದಾಗ ಹಲವಾರು ಕಾರ್ಯಕ್ರಮಗಳನ್ನು, ನಾಟಕ ಪ್ರದರ್ಶನಗಳನ್ನು ವ್ಯವಸ್ಥೆಗೊಳಿಸುತ್ತಿದ್ದೆವು. ಈ ಬಾರಿ ನಿರ್ಬಂಧಗಳು ಕಡಿಮೆ ಯಿದ್ದವು. ಜೈಲು ಅಧಿಕಾರಿಗಳು ನಮಗೆ ರಂಗವನ್ನು ನಿರ್ಮಿಸಲು ಸಹಾಯ ಮಾಡುತ್ತಿದ್ದರು. ನಾವು ವೇಷಭೂಷಣಗಳನ್ನು ಹೊರಗಡೆಯಿಂದ ಬಾಡಿಗೆಗೆ ತರುತ್ತಿದ್ದೆವು. ಇದರ ಪರಿಣಾಮವಾಗಿ ನಮ್ಮ ಪ್ರದರ್ಶನದ ಗುಣಮಟ್ಟ ಅತ್ಯಂತ ಮೇಲು ಮಟ್ಟದ್ದಾಗಿರುತ್ತಿತ್ತು.

ಇದರ ಜೊತೆಗೆ, ರಾಜಕೀಯ ಖೈದಿಗಳು ಹೊರಗಡೆ ಪಕ್ಷವು ನಡೆಸುತ್ತಿದ್ದ ಎಲ್ಲ ರಾಜಕೀಯ ಕಾರ್ಯಕ್ರಮಗಳನ್ನು ಜೈಲಿನಲ್ಲೂ ಆಚರಿಸತೊಡಗಿದರು. ಇದು ಹೊರಗಿನ ರಾಜಕೀಯ ಜಗತ್ತಿನೊಂದಿಗೆ ನಮಗೆ ಸಂಪರ್ಕವಿಟ್ಟುಕೊಳ್ಳಲು ನೆರವಾಯಿತು. ಸಾಮಾನ್ಯ ಖೈದಿಗಳಿಗೂ ಇದು ನಿರ್ದೇಶನ ನೀಡುವಂತಿತ್ತು. ಇಷ್ಟಾದರೂ ಕೆಲವೊಮ್ಮೆ ನಮಗೆ ಇವೆಲ್ಲಾ ಬೇಸರದಿಂದಲೇ ಕೂಡಿದ್ದವು. ಒಂದು ಸಂಜೆ ನನಗೆ ಭ್ರಮೆ ಮತ್ತು ವಾಸ್ತವಗಳ ಸನಿಹದ್ದೆಂದು ತೋರುವ ವಿಲಕ್ಷಣ ಅನುಭವವಾಯಿತು. ಸ್ನೇಹಿತರೆಲ್ಲಾ ಸೇರಿ ಲೆನಿನ್ ದಿನಾಚರಣೆಯನ್ನು ಆಚರಿಸುವವರಿದ್ದರು. ಅಂತಹ ಸಂದರ್ಭಗಳಲ್ಲೆಲ್ಲಾ ನಾನು ಮೂಕ ಪ್ರೇಕ್ಷಕಳಾಗಿ ಮಾತ್ರ ಕುಳಿತಿರುತ್ತಿದ್ದೆ. ಆದರೆ ಈ ಬಾರಿ ನಾನು ಭಾಗವಹಿಸೋಣವೆಂದುಕೊಂಡು ಆ ವಿಷಯವನ್ನು ಕುರಿತು ಪ್ರಬಂಧವನ್ನು ಸಿದ್ಧಗೊಳಿಸಲು ಕುಳಿತೆ. ಒಂದು ಸಂಜೆ ನಾನು ನನ್ನ ಕೊಠಡಿಯನ್ನು ಮುಚ್ಚಿಕೊಂಡು, ಕಾಲಿನ ಮೇಲೆ ಹೊದಿಕೆಯೊಂದನ್ನು ಎಳೆದುಕೊಂಡೆ. ಪಕ್ಕದಲ್ಲಿ ಒಂದು ಲಾಟೀನು. ಕೈಯಲ್ಲಿ ಒಂದು ಹಾಳೆ ಮತ್ತು ಪೆನ್ ಹಿಡಿದು ಆರಾಮಾಗಿ ಕುಳಿತೆ.

ಗಾಳಿ ಕೊರೆಯುತ್ತಿತ್ತು; ನನಗೆ ನಿದ್ದೆ ಬರುವಂತಾಯಿತು. ಗಟ್ಟಿ ನಿರ್ಧಾರ ಮಾಡಿ ಲೆನಿನ್‌ಗೆ ಗೌರವ ಸೂಚಿಸುವ ಲೇಖನ ಬರೆಯಲು ಕುಳಿತೆ. ನಾನು ಕೆಲವು ಸಾಲುಗಳನ್ನಷ್ಟೇ ಬರೆದಿದ್ದೆ. ಆಗ ಗಂಡು ಧ್ವನಿಯೊಂದು ನಗುತ್ತಾ ನನ್ನನ್ನು ಕೇಳಿತು, 'ಏನು ಬರೆಯುತ್ತಿರುವೆ ?' ಎಂದು.

ನಾನು ಆಶ್ಚರ್ಯದಿಂದ ತಲೆಯೆತ್ತಿ ನೋಡಿದೆ, ಅಲ್ಲಿ ನನ್ನ ಹಾಸಿಗೆಯ ಪಕ್ಕದಲ್ಲಿ ಲೆನಿನ್‌ನನ್ನು ಕಂಡೆ. ನನ್ನ ದೇಹ ನಿಸ್ತೇಜವಾದಂತಾಯಿತು. ನಾನು ಕನಸು ಕಾಣುತ್ತಿದ್ದೇನೆಯೆ ? ಆದರೆ ಅದು ನನ್ನ ಕನಸಿಗಿಂತ ಹೆಚ್ಚು ವಾಸ್ತವದಂತಿತ್ತು. ಕುರ್ಚಿಯ ಮೇಲಿದ್ದ ಪುಸ್ತಕದ ರಾಶಿಯನ್ನು ಸರಿಸಿ ಅತಿಥಿಗೆ ಕುಳಿತುಕೊಳ್ಳಲು ಹೇಳಿದೆ. ನನ್ನ ಮೇಜಿನ ಮೇಲಿದ್ದ ಪುಸ್ತಕದ ಹಾಳೆಗಳನ್ನು ತಿರುವಿ ಹಾಕುತ್ತಾ, ಅವನು ಮತ್ತೆ ಹೇಳಿದ, 'ನೀನು ಏನು ಬರೆಯುತ್ತಿರುವೆ ಎಂದು ಹೇಳಲೇ ಇಲ್ಲವಲ್ಲಾ.' ಅಳುಕಿನಿಂದಲೇ ನಾನು ಕೈಯಲ್ಲಿದ್ದ ಕಾಗದವನ್ನು ಅವನಿಗೆ ಕೊಟ್ಟೆ. ಅದನ್ನು ಓದಿದ ನಂತರ ಮುಗುಳ್ನಗುತ್ತಾ ಆ ಕಾಗದವನ್ನು ನನಗೇ ಹಿಂತಿರುಗಿಸಿದ.

ಕಟ್ಟಿದ ಬಾಯನ್ನು ಸಡಿಲಿಸಿಕೊಂಡು ನಾನು ಕೇಳಿದೆ, 'ಇದು ತುಂಬ ಕೆಟ್ಟದಾಗಿದೆಯಾ ?'

'ಇಲ್ಲ. ಅದೇಕೆ ಕೆಟ್ಟದಾಗಿರಬೇಕು ? ನೀವು ಬಂಗಾಲಿಗಳು ಬರಹದಲ್ಲಿ ಎಂದೂ ಎಡವುವವರಲ್ಲ. ಅರ್ಥವಿಲ್ಲದ ಪದಗಳನ್ನು ಬಳಸಿ ಸುಂದರ ಶೂನ್ಯವನ್ನು ಸೃಷ್ಟಿಸುವುದರಲ್ಲಿ ನೀವು ಜಗತ್ತಿನಲ್ಲೇ ಶ್ರೇಷ್ಠರು. ನಿಮ್ಮ ವಿರೋಧಿಗಳೂ ಕೂಡ ಇದನ್ನು ಒಪ್ಪುತ್ತಾರೆ.'

ನನ್ನ ಜನರ ಮೇಲೆ ನಡೆದ ಈ ಅನಿರೀಕ್ಷಿತ ದಾಳಿಯಿಂದ ನನಗೆ ಕೋಪ ಬಂತು. ಕೋಪದ ಮಾತುಗಳಿಂದಲೇ ನಾನು ತಿರುಗಿ ಕೇಳಿದೆ, 'ಓ, ನಿನಗೆ ಬಂಗಾಲಿಗಳ ಬಗ್ಗೆ ಗೊತ್ತಿರುವುದೆಲ್ಲಾ ಇಷ್ಟೇ ಏನು?'

ಲೆನಿನ್‌ನ ಮುಗುಳ್ನಗೆ ಕ್ರಮೇಣ ಮೃದುವಾಯಿತು. 'ಇಲ್ಲ, ನಾನು ನಿನ್ನನ್ನು ನೋಯಿಸಲೆಂದು ಹಾಗೆ ಹೇಳಲಿಲ್ಲ. ನೀನು ಧ್ಯೇಯಕ್ಕಾಗಿ ತೀವ್ರವಾದ ನಿಷ್ಠೆಯನ್ನಿಟ್ಟುಕೊಂಡವಳು, ಎಂದು ನನಗೆ ಗೊತ್ತು.

**ಬೀನಾದಾಸ್**



ಬೀನಾದಾಸ್

ಆದರೆ ಅದಷ್ಟೇ ಸಾಲದು.' ಸ್ವಲ್ಪ ಸಮಯ ಸುಮ್ಮನಿದ್ದು ನಂತರ ಮುಂದುವರಿಸಿದ, 'ಅದೇನೋ ನಿಜ, ನೀನು ಯಾವಾಗಲೂ ತತ್‌ಕ್ಷಣದ ಆವೇಶದಿಂದ ಎಲ್ಲವನ್ನೂ ತ್ಯಾಗಮಾಡಲು ಸಿದ್ಧವಿರುವೆ; ಆದರೆ, ಸಾಯುತ್ತಿರುವ ದೇಶವನ್ನು ಮೇಲೆತ್ತಲು ಬೇಕಾದ ಬೆನ್ನು ಮುರಿಯುವಂತಹ ಶ್ರಮದ ಕೆಲಸಕ್ಕೆ ತಕ್ಕವಳಲ್ಲ. ಎಲ್ಲಿಯವರೆಗೆ ಬಡತನದಿಂದ ಸಂಕಷ್ಟದಲ್ಲಿ ಮುಳುಗಿರುವ ಲಕ್ಷಾಂತರ ಮಂದಿಯೊಂದಿಗೆ ನೀನು ನಿನ್ನನ್ನು ಗುರುತಿಸಿಕೊಳ್ಳುವುದಿಲ್ಲವೋ...'

ನಾನು ನಗುತ್ತಾ ಹೇಳಿದೆ, 'ಓಹೋ ನಿನಗೆ ಗೊತ್ತಿಲ್ಲವಾ? ನಾವು ಆ ದಿಕ್ಕಿನಲ್ಲೇ ಚಿಂತಿಸಲು ತೊಡಗಿದ್ದೇವೆ.'

'ಈ 'ನಾವು' ಅಂದರೆ ಯಾರು ?'

"ಅದಾ, ನಾವು ಅಂದರೆ, ಕಾರ್ಮಿಕರು. ಇಂದು ಬಹುಪಾಲು ಎಲ್ಲ ಪಕ್ಷಗಳೂ ಸಾಮೂಹಿಕ ಜಾಗೃತಿ, ಸಾಮೂಹಿಕ ಚಳುವಳಿ ಎಂದೆಲ್ಲಾ ಯೋಚಿಸುತ್ತಿವೆ."

ನನ್ನ ಮಾತನ್ನು ಮಧ್ಯದಲ್ಲಿ ತಡೆದು, 'ನೀನು ಕೂಡ ಅದೇ ರೀತಿ ಯೋಚಿಸುತ್ತಿರುವೆಯಾ ?' ಎಂದ.

ರೇಗುತ್ತಾ ನಾನು ಉತ್ತರಿಸಿದೆ, 'ಹೌದೇ ಹೌದು. ನನ್ನನ್ನು ಈ ರೀತಿ ಹೇಗೆ ತಾನೆ ಪ್ರಶ್ನಿಸಬಲ್ಲೆ ?'

"ಸರಿ. ನಿನ್ನ ಯೋಚನೆ ಮತ್ತು ಕ್ರಿಯೆಗಳಲ್ಲಿ

ಅಗಾಧ ವ್ಯತ್ಯಾಸವಿದೆ. ನನ್ನ ರಷ್ಯನ್ ಬುದ್ಧಿವಂತಿಕೆ ನಿನ್ನನ್ನು ಅರ್ಥಮಾಡಿಕೊಳ್ಳುವಲ್ಲಿ ಸೋತುಹೋಗಿದೆ."

'ನಿನಗೆ ಏನು ಅಂತಹ ವ್ಯತ್ಯಾಸ ಕಂಡುಬಂತು ?' ಎಂದು ಕೇಳಿದೆ.

'ನಿನ್ನ ನಂಬಿಕೆಗಳು ಸರಿಯಿರಬಹುದು. ಆದರೆ ಕಾರ್ಯಕರ್ತಳಾಗಿ ನಿನ್ನದು ಸಂಪೂರ್ಣ ಸೋಲು.'

ಗಲಿಬಿಲಿಗೊಂಡು ನಾನು ತಡವರಿಸಿದೆ : 'ಅದು ಸರಿ. ನಾನು ಹೊರಗಿದ್ದಾಗ ಹೆಚ್ಚಿನದನ್ನೇನೂ ಮಾಡಲಿಲ್ಲ. ಆದರೆ ಪ್ರಯತ್ನಿಸಿದೆ. ಚಿಕ್ಕ ಚಿಕ್ಕ ಗಿರಣಿಗಳಲ್ಲಿ ಕಾರ್ಮಿಕರ ಸಂಘಟನೆಗಳನ್ನು ಕಟ್ಟಿದೆ. ನನ್ನ ನೇತೃತ್ವದಲ್ಲಿ ಕಾರ್ಮಿಕರ ಒಂದು ಮುಷ್ಕರ ಯಶಸ್ವಿಯಾಯಿತು. ನಾನು ಕೆಲವು ಹಳ್ಳಿಗಳಿಗೆ ಭೇಟಿ ಕೊಟ್ಟೆ. ಇದರಿಂದ ಬಹಳ ಸಾಧಿಸಲಿಲ್ಲವೆಂದು ನನಗೆ ಗೊತ್ತು. ಆದರೆ ಇಂತಹ ಕೆಲಸ ಎಷ್ಟು ಕಷ್ಟ ಎಂದು ನಿನಗೆ ಗೊತ್ತಿರಬೇಕಲ್ಲಾ ?'

ಮೆದುವಾದ ನಗುವಿನೊಂದಿಗೆ ಅವನು ಹೇಳಿದ, "ನೀನೇನೂ ಎದೆಗುಂದಬೇಡ. ಮನಸ್ಸಿಗೆ ಬೇಸರ ಬೇಡ. ನಾನು ನಿನ್ನ ಯಶಸ್ಸುಗಳಿಂದ ನಿನ್ನ ಯೋಗ್ಯತೆಯನ್ನು ಅಳೆಯುತ್ತಿಲ್ಲ. ನಿನಗೆ ಕೆಲಸದ ಸ್ವರೂಪ ಅರ್ಥವಾಗಿಲ್ಲವೆಂದು ನನಗೆ ಅನ್ನಿಸುತ್ತದೆ. ಅಥವಾ ಕೆಲಸದ ಕಷ್ಟ ಗೊತ್ತಿದ್ದೂ ನೀನು ನಿನ್ನನ್ನು ಮೋಸಪಡಿಸಿಕೊಳ್ಳುತ್ತಿದ್ದೀಯ. ಅಂತಹ ಆತ್ಮಾರ್ಪಣೆಗೆ ಬೇಕಾದ ಧಾರಣಾಶಕ್ತಿ ನಿನಗಿಲ್ಲ."

'ಅದು ಹೇಗೆ ಹೇಳುತ್ತೀಯ ?'

'ತುಳಿತಕ್ಕೊಳಗಾದವರ, ಬಡತನದ ಬೇಗೆಗೆ ಸಿಲುಕಿದ ನಿನ್ನ ದೇಶದ ಜನರ ಜೊತೆ ಜೊತೆಗೆ ನೀನು ಜೈಲಿನಲ್ಲಿ ವರ್ಷಗಟ್ಟಲೆ ಕಳೆದಿದ್ದೀಯ. ಆದರೆ ಅವರಿಗೆ ನೀನು ಎಷ್ಟು ಹತ್ತಿರವಾಗಿರುವಿ ? ಅವರ ಮನಸ್ಸಿನ ಮೇಲೆ ನೀನು ಯಾವ ರೀತಿ ಪರಿಣಾಮ ಬೀರಿರುವಿ ? ಅವರಿಗೆ ಏನನ್ನಾದರೂ ನೀನು ಕಲಿಸಲು ಪ್ರಯತ್ನಿಸಿರುವೆಯಾ ?'

'ಜೈಲಿನಲ್ಲಿ ಅವರನ್ನು ತಲುಪುವುದು ಎಷ್ಟೊಂದು ಕಷ್ಟ ಎಂದು ನಿನಗೆ ಗೊತ್ತಿಲ್ಲವಾ ?'

'ಕಷ್ಟ' ಕಣ್ಣುಗಳನ್ನು ಹೊಳೆಸುತ್ತಾ ಅವನು ಗುಡುಗಿದ. 'ಬಂಡುಕೋರರ ನಿಘಂಟುವಿನಲ್ಲಿ ಕಷ್ಟ ಎಂಬ ಪದ ಇರಲು ಸಾಧ್ಯವಿಲ್ಲ. ನಾನು ನಿನ್ನ ಸ್ಥಳದಲ್ಲಿದ್ದರೆ...'

'ಏನಾಗುತ್ತಿತ್ತು ?'

'ನಾನು ಎಲ್ಲ ಅಡೆತಡೆಗಳನ್ನು ಮುರಿದು ಜನರನ್ನು ಬೇರೆ ಬೇರೆಯಾಗಿಡುವುದು ಎಷ್ಟು ಅಸಂಗತ ಎಂದು ಅವರಿಗೆ ತೋರಿಸಿಕೊಡುತ್ತಿದ್ದೆ.'

ಅದರಿಂದ ಸಂತುಷ್ಟಳಾಗದೆ, ನಾನು ಹೇಳಿದೆ, 'ಹಾಗೆ ಮಾಡಿದ್ದರೆ ಅವರು ನಿನ್ನನ್ನು ಹೊರಕ್ಕೆಳೆದು ಒಂಟಿಯಾದ ಸೆಲ್‌ನಲ್ಲಿ ಬಂಧಿಸಿ ಇಡಬಹುದಿತ್ತು.'

'ಹೌದಾ, ಹಾಗೆ ಮಾಡಿದ್ದರೆ ಅದು ಸೋಲಿನ ಮರ್ಯಾದೆಯನ್ನಾದರೂ ನನಗೆ ತಂದುಕೊಡುತ್ತಿತ್ತು. ಆದರೆ ನೀನು ಏನು ಮಾಡುತ್ತಿರುವೆ ? ನೀನು ಸಮಾನತೆಯ ಬಗ್ಗೆ ಮಾತನಾಡುತ್ತೀಯ, ಆದರೆ ಈ ಜೈಲಿನಲ್ಲಿ ನೀನು ಪ್ರತಿಷ್ಠಿತ ಬುದ್ಧಿಜೀವಿಗಳ ಗುಂಪನ್ನು ಕಟ್ಟಿಕೊಂಡು ನಿನ್ನ ಕಾಲವನ್ನು ಐಷಾರಾಮವಾಗಿ ಕಳೆಯುತ್ತಿರುವೆ. ನೀನು ಸಾಮಾನ್ಯ ಖೈದಿಗಳನ್ನು ನಿನ್ನ ಸೇವಕರಂತೆ ಕಾಣುತ್ತಿರುವೆ. ಅವರ ಬಗ್ಗೆ ನಿನಗೆ ಯಾವ ಕಾಳಜಿಯೂ ಇಲ್ಲ.'

'ಹಾಗಿದ್ದರೆ ನಾನೇನು ಮಾಡಬಹುದು ?'

'ನೀನು ಎಲ್ಲವನ್ನೂ ಮಾಡಬಲ್ಲೆ. ನಿನ್ನ ಎಲ್ಲ ಸವಲತ್ತುಗಳನ್ನೂ ಅವರೊಂದಿಗೆ ಹಂಚಿಕೊ. ಅದೇನೂ ನಿನಗೆ ಕಷ್ಟದ ವಿಷಯವಲ್ಲ ; ಆದರೆ ನೀನು ಅವರಲ್ಲೊಬ್ಬಳು ಎಂಬ ಭಾವನೆ ಅವರಿಗೆ ಬರುತ್ತದೆ. ಹಂಚಿಕೊಳ್ಳುವಷ್ಟು ಸೌಕರ್ಯ ನಿನ್ನ ಬಳಿ ಇಲ್ಲ ಎನ್ನುವುದಾದರೆ, ನಿನಗೆ ನೀಡುತ್ತಿರುವ ಆದ್ಯತೆಯ ಸೌಕರ್ಯವನ್ನು ನೀನು ತಿರಸ್ಕರಿಸಬಹುದಲ್ಲ !'

ಹೀಗೆ ತುಂಬ ವಾಗ್ವಾದಗಳು ನಡೆದವು. ಇದು ಸರ್ಕಾರಕ್ಕೆ ಹಣದ ಉಳಿತಾಯ ಮಾಡಲು ನೆರವು ನೀಡಬಹುದಷ್ಟೇ. ಅಂತಹ ಕಷ್ಟವನ್ನು ಹಂಚಿಕೊಳ್ಳುವ ಮನಃಸ್ಥಿತಿಯಲ್ಲಿ ನಾವಿದ್ದೇವೆಯೇ ? ಅದು ನಮಗೆ ಅಭ್ಯಾಸವಿಲ್ಲ. ಅಂತಹ ಪ್ರಯಾಸದಿಂದ ಆರೋಗ್ಯ ಕೆಡುತ್ತದೆ. ನಮ್ಮ ಅಧ್ಯಯನ ಏನಾಗಬೇಕು ? ಈ ತೆರನ ಎಲ್ಲ ಮಾತುಗಳೂ ಕೇವಲ ನೆಪಗಳಾಗಿಬಿಡುತ್ತವೆಂದು ಭಾವಿಸಿ, ನಾನು ಮೌನ ತಾಳಿದೆ. ನನ್ನತ್ತ ದೃಷ್ಟಿ ನೆಟ್ಟಿದ್ದ ಲೆನಿನ್ ಸ್ವಲ್ಪ ಸಮಯದ ನಂತರ ನನ್ನನ್ನು ಕೇಳಿದ, 'ನೀನೇನು ಯೋಚಿಸುತ್ತಿರುವೆ ? ಅದು ತುಂಬ ಕಷ್ಟದ್ದು, ಹೌದಲ್ಲವೆ ? ದಿನನಿತ್ಯ ಈ ಕಷ್ಟವನ್ನು ಅನುಭವಿಸುವುದಕ್ಕಿಂತ ನೇಣುಗಂಬಕ್ಕೆ ತಲೆಯೊಡ್ಡುವುದು ಸುಲಭ ಹೌದಲ್ಲವೆ ?'

ನಾನು ಮೌನದಿಂದ ನನ್ನ ತಲೆ ಬಗ್ಗಿಸಿದೆ. ಲೆನಿನ್ ಎದ್ದುನಿಂತ, 'ನಾನು ಹೇಳಿದ್ದು ಸರಿಯಲ್ಲವೆ ? ಅದು ನನಗೆ ಗೊತ್ತಿದೆ. ನೀನೊಬ್ಬಳೇ ಅಲ್ಲ, ಭಾರತದಲ್ಲಿರುವ ಎಲ್ಲ ಜೈಲುಗಳೂ ನನಗೆ ಗೊತ್ತು. ಜವಾಹರಲಾಲ್‌ರಿಂದ ಹಿಡಿದು ಜಯಪ್ರಕಾಶ್‌ರವರೆಗೆ, ಇಂದಿನ ಕಮ್ಯುನಿಸ್ಟ್ ವಿದ್ಯಾರ್ಥಿಗಳಿಂದ ಹಿಡಿದು ಕಾರ್ಮಿಕರವರೆಗೆ, ಸಮಸ್ಯೆ ಅದೇ. ನಿಮಗೆ ನಿಮ್ಮ ಮೇಲರಿಮೆಯ ಸ್ಥಾನಮಾನವನ್ನು ಮರೆಯಲಾಗುತ್ತಿಲ್ಲ. ನಿಮ್ಮ ವರ್ಗದ ಸವಲತ್ತು ಮತ್ತು ಸುಖಸಾಧನಗಳನ್ನು ನೀವು ಬಿಟ್ಟುಕೊಡಲಾರಿರಿ. ನಿಮ್ಮ ದೇಶದ ಲಕ್ಷಗಟ್ಟಲೆ ನಿರ್ಗತಿಕರ ಹತ್ತಿರಕ್ಕೂ ನೀವು ಹೋಗಲಾರಿರಿ. ನಿಮ್ಮ ಕಲ್ಪನೆಯಲ್ಲಿ ಜನಸಾಮಾನ್ಯರ ಉತ್ಕರ್ಷವೆನ್ನುವುದು ಕೇವಲ ಬೌದ್ಧಿಕವಾದುದು. ಅದನ್ನು ನೀವು ಬುದ್ಧಿಯಿಂದ ಒಪ್ಪಿಕೊಳ್ಳುತ್ತೀರಿ, ಆದರೆ ಹೃದಯದಿಂದ ಅನುಭವಿಸುವುದಿಲ್ಲ. ಈ ದೇಶದಲ್ಲಿ ಯಾವಾಗ, ಎಷ್ಟು ವರ್ಷಗಳಾದ ಮೇಲೆ ನಿಜವಾದ ಕಾರ್ಮಿಕರ ಸಮೂಹವು ಉದ್ಭವವಾಗುತ್ತದೆಂಬುದು ಯಾರಿಗೆ ತಾನೆ ಗೊತ್ತು ? ರಷ್ಯಾದ ನಂತರ ಭಾರತ ...ಎಂಬ ಆಶಾಭಾವನೆ ನನಗಿತ್ತು. ಆದರೆ ಇಂತಹ ಕಾರ್ಮಿಕರೊಂದಿಗೆ...'

'ಬೀನಾದೀ, ಇದೇನು ದೀಪ ಉರಿಸುತ್ತಾ ನೀನು ಮಲಗಿದ್ದೀ ? ನಿನಗೆ ಹಾಸಿಗೆ ಹಾಸಿಕೊಡಲೆ ?' ನಾನು ದಢಕ್ಕೆಂದು ಎದ್ದುಕೂತೆ. ಅರ್ಧ ಬರೆದ ಪ್ರಬಂಧವಿದ್ದ ನನ್ನ ಎಕ್ಸರ್‌ಸೈಜ್ ಪುಸ್ತಕ ನೆಲದ ಮೇಲೆ ಬಿದ್ದಿತ್ತು. ಪೆನ್ಸಿಲ್ ಮಾತ್ರ ನನ್ನ ಕೈಯಲ್ಲೇ ಇತ್ತು ! ಲೆನಿನ್ ದಿನಾಚರಣೆಯ ಸಭೆಯಿದ್ದ ದಿನದಂದು ನಾನು ಏನೂ ಕಾರ್ಯಕ್ರಮ ನೀಡದೆ, ಮತ್ತೆ ಮೂಕ ಪ್ರೇಕ್ಷಕಳಾಗಿ ಕೂತೆ. ಸಭೆ ಮುಗಿದ ನಂತರ ಯಾರೋ ಕೇಳಿದರು, 'ನನ್ನ ಭಾಷಣ ಕುರಿತು ನಿನಗೆ ಏನನ್ನಿಸಿತು ?'

'ಅದು ಉಪಯೋಗವಿಲ್ಲ' ಯೋಚಿಸದೆ ಉತ್ತರಿಸಿದೆ. ಅವಳ ಅಚ್ಚರಿಯ ದೃಷ್ಟಿಯನ್ನು ನೋಡಿ, ನಾನು ತಕ್ಷಣವೇ ನನ್ನನ್ನು ತಿದ್ದಿಕೊಂಡೆ, 'ಇಲ್ಲ, ಇಲ್ಲ. ನಾನು ಹೇಳಿದ್ದು ಆ ಅರ್ಥದಲ್ಲಲ್ಲ. ಯಾವಾಗಲೂ ಇದ್ದಂತೆಯೇ ಇಂದೂ ನಿನ್ನ ಭಾಷಣ ಅದ್ಭುತವಾಗಿತ್ತು.'

ಮೂಲ : **ಬೀನಾದಾಸ್**
ಅನುವಾದ : **ಎನ್. ಗಾಯತ್ರಿ**
ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್', ಛತ್ರಂ ಬ್ಲಾಕ್
ಕೆಂಪೇಗೌಡ ನಗರ, ಗವೀಪುರಂ, ಬೆಂಗಳೂರು – ೫೬೦ ೦೧೯

### ನಮನ

ನವಕರ್ನಾಟಕ ಪ್ರಕಾಶನದ ಲೇಖಕ, ಕನ್ನಡ ಹೋರಾಟಗಾರ ಹಾಗೂ ಕನ್ನಡ ಗೆಳೆಯರ ಬಳಗದ ಸಂಚಾಲಕರಾಗಿದ್ದ ಕೆ. ಎಚ್. ನರಸಿಂಹಮೂರ್ತಿಯವರು ದಿನಾಂಕ ೧೮-೧೦-೨೦೧೭ರಂದು ನಿಧನರಾಗಿದ್ದಾರೆ.

ಅವರಿಗೆ 'ಹೊಸತು' ಮತ್ತು 'ನವಕರ್ನಾಟಕ ಪ್ರಕಾಶನ' ಬಳಗದ ನಮನಗಳು.

### ಸಮೇತನಹಳ್ಳಿ ರಾಮರಾಯರ ಬಹುಮಾನ

ಬೆಂಗಳೂರಿನ ಸಿಂಧು ಭೈರವಿ ಕುಟೀರದ ಪರವಾಗಿ ಅದರ ಅಧ್ಯಕ್ಷರಾದ ಶ್ರೀಮತಿ ಭಾರತೀ ಕಾಸರಗೋಡು ಅವರು ಆಗಸ್ಟ್ ೨೦೧೬ರಿಂದ ಜುಲೈ ೨೦೧೭ರವರೆಗಿನ 'ಹೊಸತು' ಸಂಚಿಕೆಗಳಲ್ಲಿ ಪ್ರಕಟವಾದ ಎರಡು ಬರಹಗಳಿಗೆ ತಲಾ ರೂ. ೫೦೦೦/– ಬಹುಮಾನ ನೀಡುತ್ತಿದ್ದಾರೆ. ಅವರಿಗೆ ವಂದನೆ ಸಲ್ಲಿಸುತ್ತ ಎರಡು ಬಹುಮಾನಗಳನ್ನು ಘೋಷಿಸಲು 'ಹೊಸತು' ಹರ್ಷಿಸುತ್ತದೆ :

ಅ. ಮಹಿಳೆಯರು ಬರೆದ ಉತ್ತಮ ಸಣ್ಣಕತೆ

**ಅಂಬಾ ಶಪಥ**

*– ಡಾ॥ ಸುಲತಾ ವಿದ್ಯಾಧರ್ (ಪ್ರ. ನವೆಂಬರ್ ೨೦೧೬)*

ಆ. ಪುರುಷರು ಬರೆದ ಉತ್ತಮ ಮಹಿಳಾಪರ ಲೇಖನ

**ಅನುಭಾವ ವಚನಕಾರ್ತಿಯರ ಲೋಕದೃಷ್ಟಿ**

*– ಡಾ॥ ನಟರಾಜ ಬೂದಾಳು (ಪ್ರ. ಜನವರಿ ೨೦೧೭)*

# ಗಿರಿಜಾ ಕಂಡ ಸಿನಿಮಾ

ರಾಗವಾಗಿ ಗಿರಿಜಾ 'ರೀs' ಎಂದರೆ ಸಾಕು– ಏನೋ ಬಂತು ಪೀಕಲಾಟ ಎಂದು ಗೊತ್ತು ಸಿದ್ಧರಾಮನಿಗೆ. ಮನಸ್ಸಿಲ್ಲದಿದ್ದರೂ ಅವಳ ಕಡೆ ಕಣ್ಣು ಹೊರಳಿಸುತ್ತಾನೆ.

'ರೀss'

'ಏನೇ ?'

'ರೀss'

'ಏನು ಹೇಳೇ ?'

'ಏನು ಅಂತ ನನ್ನೇ ಕೇಳ್ತೀರಲ್ಲ ! ಬಹಳ ಘಾಟಿ ಕಣ್ರೀ ನೀವು !' ಎಂದು ಅವಳೊಂದು ಕಣ್ಣ ಬಾಣ ಬಿಡುತ್ತಾಳೆ.

ಆ ಬಾಣದಿಂದ ಏಟು ತಿಂದೂ ತಿಂದೂ ಅಭ್ಯಾಸ ವಾಗಿಹೋಗಿದೆ ಅವನಿಗೆ. ಅದರಿಂದ ಪರಿಣಾಮ ವಾಗುವಂಥ ಮನಃಸ್ಥಿತಿಯೂ ಅವನಿಗಿರುವುದಿಲ್ಲ. ಬೆಳಗಿನಿಂದ ಸಾಯಂಕಾಲದವರೆಗೂ ಡಿಪೋವಿನಲ್ಲಿ ಕತ್ತೆಯಂತೆ ದುಡಿದು ದುಡಿದು ದಣಿದಿರುತ್ತದೆ ದೇಹ. ಜೀವರಹಿತ ಯಾಂತ್ರಿಕ ಕೆಲಸದಿಂದ ಬೇಸರಗೊಂಡಿರು ತ್ತದೆ ಮನಸ್ಸು. ಹಾಸುಗೆಯ ಸ್ಪರ್ಶವಾಗುವುದೇ ತಡ, ಕಣ್ಣು ತಾವಾಗಿಯೇ ಮುಚ್ಚಿಕೊಳ್ಳುತ್ತವೆ. ಕಠೋರ ಪ್ರಪಂಚ ಹೋರಾಟದಲ್ಲಿ ದಣಿದ ಮನಸ್ಸು ರಹಸ್ಯಮಯ ನಿದ್ರಾಪ್ರಪಂಚದಲ್ಲಿ ಶಾಂತವಾಗಲಾಶಿಸುತ್ತದೆ. ಇಂಥ ಸಮಯದಲ್ಲಿ ಪ್ರಣಯಾಲಾಪಕ್ಕೆಲ್ಲಿಯ ಉತ್ಸಾಹ ಬಂದೀತು ? ಮದುವೆಯಾದ ಹೊಸದರಲ್ಲಿ ಮುದ್ದು ಮುದ್ದಾಗಿ ತೋರುತ್ತಿದ್ದ ಗಿರಿಜೆಯ ಮಾತು ಈಗ ಮೊದ್ದು ಮೊದ್ದಾಗಿ ಕಾಣುತ್ತಿದೆ. 'ಈಕೆ ಮಾತನಾಡದೆ ಸುಮ್ಮನಿದ್ದರೆ ಬದುಕಿಕೊಂಡೀತು ನನ್ನ ಬಡಜೀವ, ತೆಪ್ಪಗೆ ಬಿದ್ದುಕೊಂಡಿರಬಾರದೆ ಅವಳು !' ಎಂದು ಅನಿಸುತ್ತದೆ ಅವನಿಗೆ. ಆದರಾಕೆ ಬಿಡಬೇಕಲ್ಲ ! ತನ್ನ ಕಡೆ ಬೆನ್ನುಮಾಡಿ ಗೋಡೆಯ ಕಡೆ ಮುಖ ಹೊರಳಿಸಿ ನಿದ್ರೆ ಹೋಗಲೆತ್ನಿಸುವ ಪತಿಯ ತಲೆಗೂದಲನ್ನು ಹಿಡಿದು ಎಳೆಯುತ್ತಾಳೆ. ಅವನ ಮೂಗಿನ ಬಳಿ ತನ್ನ ಮೂಗನ್ನೊಯ್ದು ತುಂಟತನದಿಂದ ಉಜ್ಜುತ್ತ 'ರೀss' ಎನ್ನುತ್ತಾಳೆ – ಕೊಂಚ ಗಟ್ಟಿಯಾಗಿಯೆ.

ನಿದ್ರೆಯಿಂದ ಜಡವಾಗುತ್ತಿದ್ದ ಕಣ್ಣುಗಳನ್ನು ಅವಳ ಕಡೆ ತಿರುಗಿಸಿ ಆತ ಕೇಳುತ್ತಾನೆ.

'ಏನೇ ?'

'ಏನು ಅಂತ ನನ್ನೇ ಕೇಳ್ತೀರಲ್ಲ ? ಬಹಳ–ಬಹಳ ಘಾಟಿ ಕಣ್ರೀ ನೀವು' ಎಂದು ಹೇಳಿ ಆಕೆ ಅವನ ಕೆನ್ನೆಯ ಮೇಲೊಂದು ಮೃದುವಾದ ಏಟು ಹಾಕುತ್ತಾಳೆ.

ಆಗ ಮಾತ್ರ ಆತ ನಿದ್ರೆಯ ಆಸೆ ಬಿಟ್ಟುಬಿಡಲೇ ಬೇಕಾಗುತ್ತದೆ. ಎಷ್ಟು ಬೇಸರವಾಗಿದ್ದರೇನು – ಎಂಥ ನಿದ್ರೆ ಬರುತ್ತಿದ್ದರೇನು – ತಾರುಣ್ಯದಿಂದ ತುಂಬಿ ತುಳುಕುವ ನಲ್ಲೆ ನಗುನಗುತ್ತ ಪಕ್ಕದಲ್ಲೊರಗಿದ್ದರೆ ಮುಖ ತಿರುಗಿಸಲು ಎಲ್ಲಿ ಸಾಧ್ಯ ?

ಅವನ ಮುಖವನ್ನೆತ್ತಿ ತನ್ನ ಮುಖದ ಮೇಲಿಟ್ಟು ಕೊಳ್ಳುತ್ತ ಅವನ ದೃಷ್ಟಿಗೆ ದೃಷ್ಟಿ ಬೆರೆಸುತ್ತ ಆಕೆ ಕೇಳುತ್ತಾಳೆ.

'ಯಾವಾಗ ಹೋಗೋದು ಸಿನಿಮಾಕೆ ?'

'ಸಿನಿಮಾ ?'

'ಹೂಂ. ಅಲ್ಲವೇನು ಮತ್ತೆ ? ಇಲ್ಲಿಗೆ ಬಂದಾಗಿನಿಂದ ಕೇಳುತ್ತಿದ್ದೇನೆ ನಾನು. ಹೋಗೋಣ ಹೋಗೋಣ ಅಂತಾಲೇ ಇದೀರಿ. ಕಳೆದ ಭಾನುವಾರ ಖಂಡಿತ ಹೋಗೋಣ ಅಂದಿದ್ದಿರಿ. ಆದರೂ ಚಕ್ಕರು ಹಾಕಿದಿರಿ. ಈ ಭಾನುವಾರಾನಾದ್ರೂ ತೋರಿಸಲೇಬೇಕು. ಯಾವಾಗಲೂ ಹೀಗೆ ನೀವು ! ಮಾತು ಕೊಡೋದು ! ಮರೆತುಬಿಡೋದು' ಎಂದು ಹೇಳಿ ಆಕೆ ಕೆನ್ನೆ ಉಬ್ಬಿಸಿಬಿಟ್ಟು ಕಣ್ಣು ಕುಣಿಸುತ್ತಾಳೆ.

ಆ ಉಬ್ಬಿಸಿದ ಕೆನ್ನೆಗಳನ್ನು ಒತ್ತಿ ಸರಿಪಡಿಸುತ್ತಾ ಆತ ಹೇಳುತ್ತಾನೆ.

'ಇಲ್ಲ ಕಣೇ ಮರೆತಿಲ್ಲ ! ಖಂಡಿತ ಹೋಗೋಣ !'

ಅವನ ಮುಖವನ್ನು ತಲೆದಿಂಬಿನ ಮೇಲೊರಗಿಸಿ ಬಿಟ್ಟು ಆಗ ಹುಸಿಮುನಿಸಿನಿಂದ –

'ಗೊತ್ತು ನೀವು ಕರಕೊಂಡು ಹೋಗೋದು ! ಬಲೆ ! ಬಲೆ !' ಎಂದು ಕೈ ತಿರುವುತ್ತಾಳೆ.

ಅವಳು ಕೈ ತಿರುಗಿಸುವುದೂ ಒಂದು ತಮಾಷೆಯೇ. ಆಗಿನ ಅವಳ ಆ ಸಹಜಾಭಿನಯವೋ ಆ ಕೊಂಕು ನೋಟವೋ ! ಆ ಡೊಂಕು ಹುಬ್ಬೋ! ಆ ತುಟಿಯ ಕುಣಿತವೋ ! ಎದೆಯ ಮಣಿತವೋ ! ಕೊರಳಿನ ನಾಜೂಕು ಹೊರಳುವಿಕೆಯೋ ! ಮದುವೆಯಾದ ಎರಡು ವರ್ಷಗಳಿಂದ ಆ ಸೊಗಸು ನೋಡಿ ನೋಡಿ ರೂಢಿಯಾಗಿದ್ದರೂ ಆ ಕ್ಷಣ ಒಂದೇ ಒಂದು ಕ್ಷಣ ಸಿದ್ಧರಾಮನಿಗೆ ಸ್ವಾರಸ್ಯವೆನಿಸದಿರುವುದಿಲ್ಲ. ಅವಳು ಕೈ ತಿರುಗಿಸುವುದೇ ಒಂದು ಶೋಭೆ; 'ಬಲೆ ! ಬಲೆ !' ಎನ್ನುವುದೇ ಒಂದು ಶೋಭೆ. ಆ ರಸನಿಮಿಷದಲ್ಲಿ ಆತ ಅವಳಿಗೆ ಸಂಪೂರ್ಣವಾಗಿ ಸೋತು ಹೋಗುತ್ತಾನೆ. ಅವಳ ಬಗ್ಗೆ ಅವನ ಎದೆಯಲ್ಲಿರುವ ಪ್ರೀತಿಯೆಲ್ಲಾ ಉಕ್ಕಿಬರುತ್ತದೆ. ಮೋಹವೆಲ್ಲಾ ಚಿಮ್ಮಿ ಬರುತ್ತದೆ.








ಪ್ರೀತಿ–ಮೋಹಗಳ ಆ ವಿಲಕ್ಷಣ ಸಂಗಮದಿಂದ ಉತ್ಪನ್ನವಾದ ವಿದ್ಯುಲ್ಲತೆಯಿಂದ ಉನ್ಮತ್ತವಾದ ಅವನ ತೋಳು ಅವಳ ಶರೀರವನ್ನು ರಭಸದಿಂದ ಸೆಳೆದುಕೊಳ್ಳುತ್ತವೆ. ಅವಳ ತುಟಿಗಳಿಗೆ ತುಟಿಯಿಟ್ಟು ಆತ ಹೇಳುತ್ತಾನೆ :

'ಭಾನುವಾರದವರೆಗೂ ಕಾಯೋದೇಕೆ ಹುಚ್ಚಿ ? ಈಗಲೇ – ಈ ಗಳಿಗೆಯಲ್ಲೇ – ಈ ಕೊಠಡಿಯಲ್ಲೇ ನಡೆದಿದೆಯಲ್ಲ ಸಿನಿಮಾ ! ನಮ್ಮ ಸಿನಿಮಾ !'

ಮಾತನಾಡುವುದಿಲ್ಲ ಆಕೆ. ಮಾತನಾಡಲು ತುಟಿ ತೆರೆದಿದ್ದರೆ ತಾನೆ !

ಆದರೆ ಒಂದೊಂದು ಬಾರಿ ಮಾತ್ರ ಅವಳ ಮಾತು ನಿಲ್ಲುವುದಿಲ್ಲ. ಅವನ ತುಟಿಗಳಿಗೆ ತನ್ನ ತುಟಿಗಳನ್ನೂ ಆಕೆ ಕೊಡುವುದಿಲ್ಲ. ಒಂದು ಭಾನುವಾರವೇ ? ಎರಡೇ ? ಎಷ್ಟೋ ಭಾನುವಾರಗಳು ಕಳೆದುಹೋದರೂ ಆತ ಸಿನಿಮಾಕ್ಕೆ ಕರೆದೊಯ್ಯದಿದ್ದಾಗ ಅವಳಿಗೆ ಕೋಪ ಬರುವುದೂ ಸ್ವಾಭಾವಿಕವೇ ಸರಿ. ಇನ್ನೂ ಹದಿನೇಳರ ಜವ್ವನೆ. ಹೊಸ ಹರಯದ ಹೊಸ ಉತ್ಸಾಹದ ಜೀವ. ಆರು ದಿನಗಳ ಕಾಲ ಹಗಲು ಹೊತ್ತು ಗಂಡನ ಮುಖವನ್ನೇ ನೋಡುವಂತಿಲ್ಲ. ಇಬ್ಬರೂ ಕೊಂಚ ಹೊತ್ತು ಕೂಡಿ ತಿರುಗಾಡಿ ಸೊಗಸಾಗಿ ಕಾಲ ಕಳೆಯುವಂತಿಲ್ಲ. ಭಾನುವಾರ ರಜದ ದಿನ. ಅಂದಾದರೂ ತನ್ನ ಕಡೆ ಗಮನವೀಯಬಾರದೇ ಅವರು ? ಬೆಳಗಿನ ರೈಲಿನಲ್ಲಿ ಬೆಂಗಳೂರಿಗೆ ಹೋಗಿಬಿಟ್ಟು ಒಂದು ಮ್ಯಾಟ್ನಿ ಆಟ ನೋಡಿಕೊಂಡು ಎಂಟು ಗಂಟೆಯ ರೈಲಿಗೆ ಮರಳಿ ಬರಬಹುದು. ಅಕ್ಕಪಕ್ಕದ ಮನೆಗಳವರೆಲ್ಲ ಹೋಗಿಬರುವುದಿಲ್ಲವೆ ? ಇವರಿಗೇನು ಬಂದಿರೋದು ಧಾಡಿ ? ಈ ವಯಸ್ಸಿನಲ್ಲಿ ಸನ್ಯಾಸಿಯಂಥ ಜೀವನವೇಕೋ ಇವರಿಗೆ ? ತಮ್ಮ ಮನೆಯವಳ ಸುಖ ದುಃಖ ನೋಡಿಕೊಳ್ಳಲಾರದವರು ಪರರ ಸುಖ ದುಃಖ ಏನು ತಿಳಿದುಕೊಳ್ಳುತ್ತಾರೊ ! ಇವರ ಸೋಶಲಿಸಮ್ಮೋ ! ಕಮ್ಯುನಿಸಮ್ಮೋ ! ಇಂಥ ದಮ್ಮೋ ಅದು – ಯಾವಾಗಲೂ ಅದರದೇ ಧ್ಯಾನ ! ಕೈ ಹಿಡಿದವಳನ್ನ ಬಳಲಿಸೋ ಈ ಇಸಮ್ಮು ! ಎಂದುಕೊಂಡು ಉದ್ವೇಗದಿಂದ ಬಳಲುತ್ತಾಳೆ. ಇಂಥ ಉದ್ವೇಗವಿದ್ದಾಗ ತುಟಿಗೆ ತುಟಿ ಬೆರತೀತೇ ?

ಅವಳನ್ನು ತನ್ನ ಬಾಹುಪಾಶದಲ್ಲಿ ಬಿಗಿದು ಸಿದ್ಧರಾಮ 'ಬಾ ! ಬಾ ನನ್ನ ಹುಡುಗಿ ಬಾ ! ಒಂದೇ ಒಂದು ಕೊಡು ! ಹೆಚ್ಚು ಬೇಡ ! ಒಂದೇ ಒಂದು !' ಎಂದು ಒತ್ತಾಯದಿಂದ ಅವಳನ್ನು ಮುತ್ತಿಡಲು ಪ್ರಯತ್ನಿಸುತ್ತಾನೆ.

ಹೌದು ಆಗ ಅವಳಿಗೆ ಕೋಪ ಬರುತ್ತದೆ. 'ಮುತ್ತು ಮಾತ್ರ ಬೇಕು ಇವರಿಗೆ ! ನನಗೆ ಸಿನಿಮಾ ತೋರಿಸೋದು ಬೇಡ. ಎಂಥ ಸ್ವಾರ್ಥ ಜಾತಿ ಇದು. ಈ ಗಂಡಸರದು ! ಇವರಿಗ್ಯಾಕೆ ಮುತ್ತು ಕೊಡಬೇಕು ನಾನು ?' ಎಂದುಕೊಂಡು ಕೈಯಿಂದ ತನ್ನ ತುಟಿಗಳನ್ನು ಮುಚ್ಚಿಕೊಳ್ಳುತ್ತಾಳೆ. ಆತ ತಡೆಯಲಾರ. ಅವಳ ಕೈಯನ್ನು ಎತ್ತಿ ಆಚೆಗೆ ಸರಿಸಿ ತುಟಿಗೆ ತುಟಿ ಸೇರಿಸುತ್ತಾನೆ. ಮರುಕ್ಷಣವೇ ತನ್ನ ತುಟಿಗಳನ್ನು ತೆಗೆದುಬಿಟ್ಟು 'ಅಯ್ಯೋ ಗಂಡುಬೀರೀ ಕಚ್ಚಿಬಿಟ್ಟೆಯಲ್ಲೇ ಬಜಾರಿ !' ಎನ್ನುತ್ತಾನೆ.

'ಇನ್ನೇನು ಮಾಡೋದು ಕರಡೀ ಹಾಗೆ ನೀವು ಮೈಮೇಲೆ ಬಿದ್ದರೆ ?'

'ನಾನು ಕರಡಿಯಾದರೆ ನೀನೇನು ಕೋತಿ ಮರಿಯೇನು ಹೀಗೆ ಕಚ್ಚಿ ಬಿಡೋಕೆ ?'

'ಹೌದು ಕಣ್ರೀ ! ನಾನು ಕೋತಿ ! ನಿಮ್ಮ ಮುಖ ಮಾತ್ರ ಬಹಳ ಚಂದಾಗಿದೆ. ನರಿಯ ಹಾಗೆ ?'

'ಇಲ್ಲ ಕಣೆ ! ಅಷ್ಟು ಚೆನ್ನಾಗಿಲ್ಲ ನನ್ನ ಮುಖ ! ನಿನ್ನ ಮೂಗು ಮಾತ್ರ ಬಹಳ ಚೆಂದಾಗಿದೆ ಬೆಕ್ಕಿನ ಹಾಗೆ' ಎಂದು ಬಿಟ್ಟು ಆತ ಅವಳ ನಸು ಚಪ್ಪಟೆ ಮೂಗನ್ನು ಕುರಿತು ಹಾಸ್ಯ ಮಾಡುತ್ತಾನೆ.

'ನನ್ನ ಮೂಗಿಗೇನೂ ನೀವು ನಗಬೇಕಾಗಿಲ್ಲ. ನಿಮ್ಮದೇನು ಮಹಾ ಸೌತೆಕಾಯಿ ಯಂಥಾದ್ದು !' ಎಂದು ಹೇಳಿ ಆಕೆ ಮುಯ್ಯಕ್ಕೆ ಮುಯ್ಯ ತೀರಿಸಿಬಿಡುತ್ತಾಳೆ.

'ಇಂಥ ಮೂಗಿನವನ್ನ ನೀ ಯಾಕೆ ಮಾಡಿಕೊಂಡೆ ?'

'ಇಂಥ ಮೂಗಿನವಳನ್ನ ನೀವು ಯಾಕ್ರಿ ಕಟ್ಟಿಕೊಂಡ್ರಿ ?'

'ನನ್ನೇ ಆಗಬೇಕು ಅಂತ, ಅತ್ತುಕೊಂಡು ಕಣ್ಣೀರಿಟ್ಟೆಯಲ್ಲ ನೀನು. ಮನಸ್ಸು ಕರಗಿ ಆಗಿಬಿಟ್ಟೆ !'

'ಹೌದು ಪಾಪ ! ನಮ್ಮಪ್ಪ ನಿಮಗೆ ನನ್ನ ಕೊಡೋಲ್ಲಾಂತ ಅಂದಾಗ ಊಟ ನೀರು ಬಿಟ್ಟು ಮೂರು ನಾಲ್ಕು ದಿನ ಬೆಂಗಳೂರೆಲ್ಲ ಹುಚ್ಚರಂತೆ ಅಲೆದೋರು ಯಾರೋ?'

'ಹೂಂ ! ನಾನೊಬ್ಬ ಹುಚ್ಚ ! ನಿನ್ನಂಥ ಹುಚ್ಚಿಯನ್ನ ಕಟ್ಟಿಕೊಂಡಿರೋನು !'

'ನೀವು ಹುಚ್ಚರಾದ್ರೆ ಹುಚ್ಚರಾಸ್ಪತ್ರೆಗೆ ಹೋಗಿ ಬನ್ನಿ. ನನಗೇನೂ ಹುಚ್ಚು ಹಿಡಿದಿಲ್ಲ !'

'ಹಿಡಿದಿದೆಯಲ್ಲ ಒಂದು ಭಾರಿ ಹುಚ್ಚು–ಸಿನಿಮಾ ಹುಚ್ಚು !'

'ಬಲೆ ! ಬಲೆ ! ಬಹಳ ತೋರಿಸೋವ್ರು ನೀವು ! ನೋಡೀ ನೋಡೀ ನೋಡೀ ಹುಚ್ಚು ಹಿಡಿದಿದೆ ನನಗೆ ಅಲ್ವೆ ?'

'ತೋರಿಸೋಕೆ ಪುರುಸತ್ತು ಎಲ್ಲಿರುತ್ತೆ ಗಿರಿಜಾ ?'

'ಅವರಿವರ ಮನೆ ತಿರುಗೋಕೆ ಪುರಸತ್ತಿರುತ್ತೆ. ಸಿನಿಮಾಗೆ ಮಾತ್ರ ಇರೋಲ್ಲ !'

'ಅವರಿವರ ಮನೆ ಅಂದ್ರೇನೇ ? ಪಾಪ. ಏನೂ ತಿಳಿಯದ ಬಡ ಕೂಲಿಕಾರರು ಅವರು. ಅವರ ಸುಖ ದುಃಖ ತಿಳಿದುಕೊಂಡು ಸಂಘಟನೆ ಮಾಡಬೇಡವೇ ?'

'ಏನು ಸುಖವೋ ! ಏನು ದುಃಖವೋ ! ಮೊದಲು ಯುದ್ಧ ಯುದ್ಧ ಅಂತಿದ್ದಿರಿ. ಈಗ ಯುದ್ಧ ಮುಗಿದು ವರ್ಷವಾಗ್ತಾ ಬಂತು. ಇನ್ನೂ ಮೊದಲಿನ ಹಾಡೇ ಹಾಡ್ತೀರಲ್ಲ?'

'ಯುದ್ಧ ಮುಗೀತು ಅಂತ ಯಾರು ಹೇಳಿದರು ಗಿರಿಜಾ ?'

'ನೀವೇ ಹೇಳಿದಿರಲ್ಲ ಒಮ್ಮೆ ! ಅವತ್ತು ಎರಡು ದಿನ ರಜಾ ಬಂದಿರಲಿಲ್ಲೇನು ವಿಜಯೋತ್ಸವಕ್ಕೇಂತ ?'

'ವಿಜಯೋತ್ಸವ ಅಲ್ಲ ಅದು ಗಿರಿಜಾ ! ಮತ್ತೊಂದು ಯುದ್ಧದ ಪ್ರಾರಂಭೋತ್ಸವ. ಮುಗಿದ ಯುದ್ಧಕ್ಕಿಂತ ಭಾರಿ ಯುದ್ಧ ಇದು. ಬಡವರ ಯುದ್ಧ ! ಕೂಲಿಕಾರರ ಯುದ್ಧ ! ರೈತರ ಯುದ್ಧ ! ಈ ಯುದ್ಧ ನಡೆದಿರೋದು ಹೊಟ್ಟೆಗಾಗಿ ! ಅನ್ನಕ್ಕಾಗಿ ! ಒಂದು ಮುಷ್ಟಿ ಮುದ್ದೆಗಾಗಿ ! ಒಂದು ತಟ್ಟೆ ಎಸರಿಗಾಗಿ ! ಸಾವಿರಾರು ಜನ ಬಡಪಾಯಿಗಳೂ ಇಲ್ಲಿ – ಈ ಕಾಡುಗೋಡಿಯಲ್ಲಿ – ಹೊಟ್ಟೆಯ ಹೋರಾಟ ನಡೆಸಿದಾರಲ್ಲ ಗಿರಿಜಾ ! ಅವರ ಗೋಳಿನ ಕೂಗು ನನ್ನನ್ನು ಹುಚ್ಚನನ್ನಾಗಿ ಮಾಡಿದೆ ! ಅಂತೇ ಭಾನುವಾರ ಬರುತ್ತಲೂ ಅವರ ಮನೆಗಳಿಗೆ ಹೋಗುತ್ತೇನೆ. ಅವರ ಹೋರಾಟದ ಕತೆ ಕೇಳುತ್ತೇನೆ. ನನ್ನ ಕೈಲಾದ ಸೇವೆ ಮಾಡುತ್ತೇನೆ.'

'ಸಾಕು ಸಾಕು ನಿಮ್ಮ ಪುರಾಣ ! ನಾನು ಸಿನಿಮಾ ಎನ್ನುತ್ತಲೂ ಶುರುವಾಗುತ್ತೆ ನಿಮ್ಮ ಲೆಕ್ಚರು !'

'ಲೆಕ್ಚರಲ್ಲ ಗಿರಿಜಾ ಇದು ! ಹೃದಯದಿಂದ ನೇರವಾಗಿ ಹೊರಡುವ ಉದ್ಗಾರ ಇದು ! ನನ್ನ ಹೃದಯ – ನನ್ನ ಮಾತು ನಿನಗೆ ಹೇಗೆ ಅರ್ಥವಾದೀತು ? ನೀನು ಇನ್ನೂ ಕೊಂಚ ಓದಿದ್ದರೆ...? ಓದಿದ್ದರೆ...?'

'ನೀವು ಓದಿ ಅಮಲ್ದಾರಿ ಮಾಡ್ತಾ ಇರೋದನ್ನ ನೋಡಲಿಲ್ಲವೇ ನಾನು ? ಎಸೆಸೆಲ್ಸಿ ಆದರೂ ಈ ಕೂಲಿ ಕೆಲಸಕ್ಕೆ ಬಂದು ಸೇರಿದ್ದೀರಲ್ಲ !'

'ಅಮಲ್ದಾರ ಆಗೋದಕ್ಕಿಂತ ಕೂಲಿ ಆಗಿರೋದು ಸಾವಿರ ಪಾಲಿಗೆ ವಾಸಿ ಗಿರಿಜಾ ! ನಿನಗದು ತಿಳಿಯೋಲ್ಲ ?'

'ಹೌದು ಕಣ್ರಿ ! ನನಗೆ ತಿಳಿಯೋದಿಲ್ಲ ! ನನಗೆ ತಲೇನೆ ಇಲ್ಲ ! ಒಳಗಡೆ ಇರೋದು ಬರೀ ಆಲೂಗಡ್ಡೆ. ಹೀಗೆ ಅಲ್ವೇ ನೀವು ಹೇಳೋದು !'

'ಏನಂದಿ ? ಆಲೂಗಡ್ಡೇನೇ ? ಬಹಳ ಒಳ್ಳೇದಾಯ್ತು. ಇಷ್ಟು ದಿನ ಯಾಕೆ ಹೇಳಲಿಲ್ಲ ನನಗೆ ? ಸರಿ. ತೆಗೆದುಬಿಟ್ಟು ಬೆಳಗ್ಗೆ ಪಲ್ಯ ಮಾಡಿಬಿಡು. ಆಲೂಗಡ್ಡೆ ಪಲ್ಯ ತುಂಬ ರುಚಿ. ನಿನ್ನ ತಲೇಲಿ ಬೆಳೆದಿರೋದು ಅಂದಮೇಲೆ ಇನ್ನೂ ರುಚಿಕಟ್ಟಾಗಿದ್ದೀತು !'

'ಶುರು ಮಾಡಿದ್ರು ತಮಾಷೆಗೆ ! ಬಹಳ ಜಾಣರು ಕಣ್ರೀ ಮಾತು ಹೊರಳಿಸೋದ್ರಲ್ಲಿ' ಎನ್ನುತ್ತಾ ಆಕೆ ಅವನ ಕೆನ್ನೆ ಚಿವುಟುತ್ತಾಳೆ. ತನಗರಿಯದಂತೆಯೇ ಅವಳ ನಗೆ ಹೂ

ಅರಳುತ್ತದೆ. ಕಂಗಳಲ್ಲಿ ಪ್ರಣಯ ಭಾವ ಚಿಮ್ಮುತ್ತದೆ. ಕೆನ್ನೆಗೆ ರಕ್ತವೇರುತ್ತದೆ. ಆಗ ಆಕೆಯೇ ಸೋತುಹೋಗುತ್ತಾಳೆ. ಆ ಕ್ಷಣಕ್ಕಂತೂ ಅವರ ಯುದ್ಧ ಮುಗಿದು ಒಪ್ಪಂದವಾಗುತ್ತದೆ. ನಲ್ಲನಲ್ಲೆಯರ ದೃಢಾಲಿಂಗನದಲ್ಲಿ ಶಾಂತಿ ಮೊಗದೋರುತ್ತದೆ.

೨

ಆ ಶನಿವಾರ ಸಾಯಂಕಾಲ ಸಿದ್ಧರಾಮ ಮನೆಗೆ ಬಂದಾಗ ಗಿರಿಜಾ ಹೆರಳು ಹಾಕಿ ಹೂ ಮುಡಿದುಕೊಂಡು ನಗುನಗುತ್ತ ನಿಂತಿದ್ದಳು – ಅವನ ಬರವನ್ನೇ ಎದುರು ನೋಡುತ್ತ.

ಬಟ್ಟೆ ತೆಗೆದುಹಾಕಿ, ಮುಖ ತೊಳೆದುಕೊಂಡು ಆತ ಹಾಸುಗೆಗೊರಗಿ ಕುಳಿತುಕೊಂಡ. ಯಾವುದೋ ಒಂದು ಪತ್ರಿಕೆಯನ್ನೆತ್ತಿಕೊಂಡು ಓದಲಾರಂಭಿಸಿದ.

ಎಂದೂ ಇಲ್ಲದೆ ಗಿರಿಜಾ ಅಂದು ಕಾಫಿ ಮಾಡಿರಿಸಿದ್ದಳೇನೋ! ಒಂದು ಲೋಟದಲ್ಲಿ ಅದನ್ನು ತುಂಬಿಕೊಂಡು ಅವನ ಬಳಿ ಬಂದಳು.

'ರೀsss!'

ಪತ್ರಿಕೆಯ ಮೇಲಿನ ದೃಷ್ಟಿಯನ್ನು ಕದಲಿಸದೆ ಆತ 'ಏನೆ ?' ಎಂದ. ಒಡನೆಯೇ ಆ ಪತ್ರಿಕೆಯನ್ನು ಕಿತ್ತುಕೊಂಡು ಮೂಲೆಯಲ್ಲಿಟ್ಟು ಗಿರಿಜಾ 'ಬಲೆ ಓದೋದು ನೀವು ಬಿಡಿ! ಈ ಕಾಫೀನಾದ್ರೂ ಕುಡೀರಿ!' ಎಂದಳು.

'ಕಾಫೀ ? ಅದೇನೇ ಇಂದು ಇಷ್ಟು ಸಡಗರ ?'

'ಸಡಗರಾನೂ ಇಲ್ಲ, ಗಿಡಗರಾನೂ ಇಲ್ಲ. ಆಚೆಮನೇ ದೇವಮ್ಮನ ಗಂಡ ಮೈಸೂರಿಗೆ ಹೋಗಿದ್ದರಂತೆ. ಒಳ್ಳೇ ಕಾಫಿಪುಡಿ ತಂದಿದ್ದರಂತೆ. ಸ್ವಲ್ಪ ಕೊಟ್ಟಳು. ವಾಸನೆ ಚೆನ್ನಾಗಿದೆ. ಇಂದೇ ಕುಡೀಲಿ ಅಂತ ಮಾಡಿದ್ದೆ.'

'ದೇವಮ್ಮ ?'

'ಆ ಸೂಪರ್‌ವೈಜರ್ ಇಲ್ವೆ ? ಅವರ ಹೆಂಡತಿ.'

'ಸೂಪರ್‌ವೈಜರ್ ?'

'ನಿಮಗೆ ಕೂಲಿಕಾರರೆಲ್ಲಾ ಗೊತ್ತು. ಸೂಪರ್‌ವೈಜರ್ ಮಾತ್ರ ಗೊತ್ತಿಲ್ಲ!'

'ಹೇಗೆ ಗೊತ್ತಾಗಬೇಕು ಹೇಳು ಗಿರಿಜಾ! ಅವರು ಹೆಚ್ಚು ಸಂಬಳ ಪಡೆಯೋರು. ಡಿಪೋನಲ್ಲಿ ಅವರು ಹೇಳಿದ ಹಾಗೆ ಕೆಲಸ ಮಾಡಬೇಕಾಗುತ್ತೆ ನಾವು. ಅವರ ಜತೆ ಸ್ನೇಹ ಮಾಡೋಕಾಗುತ್ತೇನೇ ನಮಗೆ.'

'ಎಲ್ಲಾ ಆಗುತ್ತೆ. ನಿಮಗೆ ಮೊದಲು ಮನಸ್ಸಿರಬೇಕಲ್ಲ! ಅವರು ಗಂಡ ಹೆಂಡಿರು ಎಷ್ಟು ನೆಮ್ಮದಿಯಿಂದಿದ್ದಾರೆ! ವಾರಾವಾರಾ ಬೆಂಗಳೂರಿಗೆ ಹೋಗೋದು ತಪ್ಪೋದಿಲ್ಲ. ಅಂದಹಾಗೆ ಮೊನ್ನೆ ದೇವಮ್ಮ ಹೊಸ ಸೀರೆ ಒಂದನ್ನ ಕೊಂಡು ತಂದಿದ್ದಾಳೆ. ನೂರಿಪ್ಪತ್ತು ರೂಪಾಯಿಯಂತೆ. ಬಹಳ ಚಂದಾಗಿದೆ ಕಣ್ರೀ! ನಯವಾದ ರೇಷ್ಮೆ ಕಲಾಪತ್ತಿಂದು.'

ಪತ್ನಿಯ ವಿಚಾರಧಾರೆ ಯಾವ ಕಡೆ ಹೊರಳುತ್ತಿದೆಯೆಂಬುದರ ಅರಿವಾಯಿತೇನೋ ಅವನಿಗೆ! ನೊಂದ ದನಿಯಲ್ಲಿ ನುಡಿದ.

'ಅವರ ಸೀರೆಯ ವಿಚಾರ ನನಗೆ ಹೇಳಬೇಡ ಗಿರಿಜಾ! ನನ್ನ ತಲೆ ಕೆಟ್ಟು ಹೋಗುತ್ತೆ!'

ಆ ನೊಂದ ದನಿ, ಅದರಲ್ಲಿ ಅವಿತಿದ್ದ ಆ ಆಳವಾದ ವೇದನೆ ಅವಳಿಗೆ ಅರ್ಥವಾಗಲಿಲ್ಲ – ಹೇಳಿದಳು :

'ಅಂಥಾದನ್ನು ನನಗೆ ತಂದುಕೊಡೋ ಯೋಗ್ಯತೆ ಅಂತೂ ನಿಮಗಿಲ್ಲ! ಇನ್ನು ಅವರು ಉಡುತ್ತಾರೆ ಅಂತ ಹೊಟ್ಟೆ ಉರಿಯೇಕೋ ?'

'ಹೊಟ್ಟೆ ಉರಿ ಅಲ್ಲ ಅದು ಗಿರಿಜಾ! ನಿನಗರ್ಥವಾಗುವುದಿಲ್ಲ. ನಾವು ಬಡವರು, ಅವರು ಶ್ರೀಮಂತರು. ನನಗೆ ಬರೋದು ನಲವತ್ತು ರೂಪಾಯಿ, ಅವರಿಗೆ ಬರೋದು ಎರಡು ನೂರು ರೂಪಾಯಿ. ಒಂದೇಕೆ ಹತ್ತು ಸೀರೆಗಳನ್ನೂ ಕೊಂಡಾರು ಅವರು. ನನಗೆ ಬರೋ ನಲವತ್ತು ರೂಪಾಯಿನಲ್ಲಿ ಹೊಟ್ಟೆತುಂಬಿಕೊಳ್ಳೋದೆ ಕಷ್ಟ. ನಿನಗೂ ಗೊತ್ತೇ ಇದೆಯಲ್ಲ! ಇನ್ನು ಅಂಥ ಸೀರೆಯ ವಿಚಾರ ಮಾತನಾಡೋದು ತಪ್ಪಲ್ವೇ ? ರೇಷ್ಮೆ ಸೀರೆಯನ್ನ ಕಣ್ಣಿಂದ ನೋಡೋದಕ್ಕೂ ಅಧಿಕಾರವಿಲ್ಲ ನಮಗೆ. ಹತ್ತು ರೂಪಾಯಿನ ಸೀರೆಗಳಲ್ಲೇ ನಾವು ತೃಪ್ತಿಪಟ್ಟುಕೊಳ್ಳಬೇಕು...'

'ಏನು ತೃಪ್ತಿಯೋ! ಏನು ಕತೆಯೊ! ಮದುವೆಯಲ್ಲಿ ತಂದದ್ದೆಷ್ಟೊ ಅಷ್ಟೆ. ಅಂದಿನಿಂದ ಹತ್ತು ರೂಪಾಯಿನ ಸೀರೆನಾದ್ರೂ, ಒಂದಾದ್ರೂ ತಂದಿದೀರಾ!' ಎಂದಳಾಕೆ.

ಎಲ್ಲಿಂದ ತರಲಿ ? ದುಡ್ಡು ಉಳಿದರೆ ತಾನೇ ತರೋದು ? ಅಕ್ಕಿ, ಬೇಳೆ, ಕಾಳು, ಸೌದೆ ಎಲ್ಲಾ ಒಂದಕ್ಕೆರಡು ಬೆಲೆ. ಹೊಟ್ಟೆ ತುಂಬೋದೆ ಕಷ್ಟ. ನನಗಾದರೂ ಬಟ್ಟೆಗಳಿವೆಯೇನೆ ? ಇರೋದು ಎರಡು ಶರಟು. ಅವು ಹರಿದು ಚಿಂದಿಯಾಗಿವೆ. ಎಲ್ಲಿ ನೋಡಿಲ್ಲಿ ...' ಎಂದು ವಿಷಾದದಿಂದ ಹೇಳುತ್ತ ಸಿದ್ಧರಾಮ ಎದೆಯ ಮೇಲೆ ಹರಿದಿದ್ದ ಭಾಗವನ್ನು ತೋರಿಸಿದ.

'ನೀವೇನು ಮಾಡೀರಿ ? ನನ್ನ ಅದೃಷ್ಟ. ಒಂದು ಒಳ್ಳೆ ಸೀರೇ ಉಡೋ ಭಾಗ್ಯವೂ ನನಗಿಲ್ಲ. ಒಂದು ಸಿನಿಮಾ ನೋಡೋ ಭಾಗ್ಯವೂ ಇಲ್ಲ. ಪಕ್ಕದ ಮನೆಯವರೆಲ್ಲಾ ವಾರಕ್ಕೊಂದು ಬಾರಿ ನೋಡಿಕೊಂಡು ಬರ್ತಾರೆ. ನನಗೆ ವರ್ಷಕ್ಕೊಂದು ಬಾರಿಯಾದರೂ...' ಎಂದು ಹೇಳುತ್ತಿದ್ದ ಹಾಗೆ ಅವಳಿಗೆ ಅಳುವುಕ್ಕಿ ಬಂತು. ಸೆರಗಿನಲ್ಲಿ ಮುಖ ಮುಚ್ಚಿಕೊಂಡು ಅಡುಗೆಮನೆಗೆ ಹೊರಟುಬಿಟ್ಟಳು.

ವೇದನಾಪೂರ್ಣ ದೃಷ್ಟಿಯಲ್ಲಿ ಸಿದ್ಧರಾಮ ಕಾಫಿಯ ಕಡೆಗೆ ತಿರುಗಿಸಿದ. ಅದು ಆರಿಹೋಗಿತ್ತು. ಲೋಟ ಎತ್ತಿ ಕಿಟಕಿಯಲ್ಲಿ ಬಾಗಿಸಿದ.

ಚರಂಡಿಯ ಕೊಳಚೆಯೊಂದಿಗೆ ಹರಿದುಹೋಯಿತು ಕಾಫಿ.

೩

ತಿಗಣೆಯೊಂದು ಬಲವಾಗಿ ಕಚ್ಚಿ ಸಿದ್ಧರಾಮನನ್ನು ಎಚ್ಚರಗೊಳಿಸಿತು. ಕಣ್ದೆರೆದು ನೋಡಿದ. ಭಾನುವಾರದ ಬೆಳಗು ಸ್ವಾಗತಿಸುತ್ತಿತ್ತು.

ಪಕ್ಕದಲ್ಲಿ ಗಿರಿಜಾ ಇನ್ನೂ ಗಾಢ ನಿದ್ರೆಯಲ್ಲಿ ತಲ್ಲೀನಳಾಗಿದ್ದಳು. ಎಂಥ ವಿಲಕ್ಷಣ ನಿದ್ರೆ ಅದು ಬೆಳಗಿನ ಜಾವದ್ದು! ಬಲಗಡೆ ಮಲಗಿದ್ದಳಾಕೆ. ತುಟಿಗಳೆರಡೂ ತೆರೆದಿದ್ದವು. ಅವುಗಳೊಳಗಿನ ನಸು ಹಳದಿ ಬಣ್ಣದ ದಂತಪಂಕ್ತಿ ಅಸ್ಫುಟವಾಗಿ ಕಾಣುತ್ತಿತ್ತು. ತುಟಿಗಳ ಮೂಲೆಯಿಂದ ಮುಖರಸ ಸೋರುತ್ತಿತ್ತು. ಬಲಗೈ ಗೋಡೆಯ ಮೇಲೊರಗಿ ಕೊಂಡಿತ್ತು. ಉದ್ದವಾದ ಜಡೆ ತಲೆದಿಂಬಿನಿಂದಿಳಿದು ಈಚೆ ಬಂದು ಬಿದ್ದಿತ್ತು. ಅದರ ಕೊನೆಗೆ ಕಟ್ಟಿದ್ದ ಬಣ್ಣ ಬಣ್ಣದ ಆ ಟೇಪು – ಅವನಿಗೆ ನಗೆ ಬಾರದಿರಲಿಲ್ಲ. ಎಂಥ ಮಾಟಗಾತಿ ಈ ನಿದ್ರೆ! ಎಂದುಕೊಂಡು ಮೆಲ್ಲನೆ ಬಾಗಿ ಅವಳ ಸೀರೆಯ ಸೆರಗಿನಿಂದ ಮುಖರಸವನ್ನೊರಸಿದ. ಹಣೆಯ ಮೇಲೆ ಬಂದಿದ್ದ ಮುಂಗುರುಳು ಗಳನ್ನೆತ್ತಿ ಹಿಂದೆ ಹಾಕಿದ. ಕೆನ್ನೆಗಳನ್ನೊರಸಿ ಒಂದು ಬಾರಿ ಅವುಗಳ ಮೇಲೆ ತುಟಿ ಒತ್ತಿದ. ಆಗ ಎಷ್ಟು ಮುದ್ದಾಗಿ ಕಾಣಿಸುತ್ತಿದ್ದಳು ಗಿರಿಜಾ! ಪುಟ್ಟದೊಂದು ಮಗುವಿನ ಹಾಗೆ! ನಿನ್ನೆ ತಾನು ಆ ರೀತಿ ಮಾತನಾಡಿದುದರಿಂದ ಎಷ್ಟು ನೊಂದು ಕೊಂಡಿದಾಳೋ! ಎಂಥ ನಿಷ್ಠುರಿ ತಾನು. ತನ್ನ ಕೈ ಹಿಡಿದು ಏನು ಸುಖಪಡಬೇಕು ಈ ಮುಗ್ಧೆ ? ಜೀವನದ ಕಠೋರ ಹೋರಾಟ ಅವಳಿಗರ್ಥವಾಗದು. ಅದಕ್ಕೆ ಅವಶ್ಯವಾದ ಶಿಕ್ಷಣವೂ ದೊರೆತಿಲ್ಲ ಅವಳಿಗೆ. ಪ್ರಪಂಚದ ಅನುಭವವೂ ಇಲ್ಲ. ತನ್ನ ವಿಚಾರಗಳೊಂದಿಗೆ ಅವಳು ಸಮರಸವಾಗದಿರುವಲ್ಲಿ ಅವಳ ತಪ್ಪೇನೂ ಇಲ್ಲ...

ಅವನ ಮನಸ್ಸು ಏನೋ ನಿರ್ಧಾರಕ್ಕೆ ಬಂದಂತಾಯಿತು. ಇಂದು ತನ್ನ ಹತ್ತಿರ ಮೂರು ರೂಪಾಯಿ ಇದೆ. ಸಂಬಳ ಬರುವುದಕ್ಕೆ ಇನ್ನೂ ಎಂಟು ದಿನ. ಪರವಾಯಿಲ್ಲ. ಇಂದು ಈ ಮೂರು ರೂಪಾಯಿಯೂ ಖರ್ಚಾಗಿ ಹೋಗಲಿ. ಒಲವಿನ ಈ ಜೀವಕ್ಕೆ ಇಷ್ಟು ಸಂತೋಷವಾದರೂ ಆಗಲಿ. ಇವತ್ತು ಅವಳ ಆಸೆಯನ್ನು ಪೂರೈಸಿಯೇ ಬಿಡೋಣ ಎಂದುಕೊಂಡು ಅವಳ ಗದ್ದವನ್ನು ಹಿಡಿದು ಮೆಲ್ಲನೆ ಅಲುಗಾಡಿಸಿದ.

'ಏಳು ಗಿರಿಜಾ! ಏಳು! ಏಳು ನನ್ನ ರಾಣೀ! ಏಳು! ಏಳು! ಬೆಳಗಾಯಿತು!' ಎಂದ.

ಕಣ್ಣುಜ್ಜಿಕೊಳ್ಳುತ್ತ ಅವಳು ಎದ್ದು ಕುಳಿತಳು.

"ಬೇಗ ಬೇಗ ಅನ್ನ ಸಾರು ಮಾಡಿಬಿಡು. ಊಟ ಮಾಡಿಬಿಟ್ಟು ಬೆಂಗಳೂರಿಗೆ ಹೋಗೋಣ. ಇಂದು ಖಂಡಿತವಾಗಿಯೂ ಸಿನಿಮಾ ನೋಡಿಸ್ತೇನೆ ನಿನಗೆ!" ಎಂದ ಸಿದ್ಧರಾಮ.

ಅವನ ಮೈಯ ಸುತ್ತ ತನ್ನ ತೋಳು ಹೆಣೆಯುತ್ತ ಆನಂದದಿಂದ ಕೇಳಿದಳಾಕೆ.

'ಹೌದೆ ? ನಿಜವಾಗಲೂ ?!'

'ಇನ್ನೂ ಸಂಶಯವೇನೇ ನಿನಗೆ – ನನ್ನ ಬೆಪ್ಪು ಹುಡುಗೀ ?'

'ನಂಬೋದೇ ಕಷ್ಟ ಅಮ್ಮಾ ನಿಮ್ಮ ಮಾತನ್ನ! ಇಂದೇನೋ ಸೂರ್ಯ ಉತ್ತರದಲ್ಲಿ ಹುಟ್ಟಿರಬೇಕು' ಎಂದು ನಗುತ್ತ ಆಕೆ ಎದ್ದುಬಿಟ್ಟಳು.

ಅಡುಗೆ ಮಾಡುವಾಗ ಅವಳ ಸಡಗರವೋ ಸಡಗರ! ಒಲೆಯ ಮೇಲೆ ಅನ್ನ ಕುದಿಯುತ್ತಿದ್ದ ಹಾಗೆ ಸಬಕಾರ ಹಚ್ಚಿ ಮುಖ ತೊಳೆದುಕೊಂಡಳು. ಜಡೆ ಹಾಕಿ ಟೇಪು ಕಟ್ಟಿಕೊಂಡಳು. ರಾತ್ರಿ ನೀರಿನಲ್ಲಿ ತೋಯಿಸಿ ಬಟ್ಟೆಯಲ್ಲಿ ಕಟ್ಟಿ ಇಟ್ಟಿದ್ದ ಕೆಂಪು ಹೂ ಮುಡಿದುಕೊಂಡಳು. ಕುಂಕುಮ ಇಟ್ಟುಕೊಂಡಳು. ಟ್ರಂಕಿನಲ್ಲಿದ್ದ ನಾಲ್ಕು ಸೀರೆಗಳನ್ನು ಹೊರ ತೆಗೆದು ಯಾವುದನ್ನುಡುವುದು – ಎಂದು ಹದಿನೈದು ನಿಮಿಷ ಯೋಚಿಸಿದಳು.

"ರೀsss. ಯಾವುದನ್ನುಟ್ಟುಕೊಳ್ಳಲಿ ಹೇಳ್ರೀ sss" ಎಂದು ಪತಿಯ ಸಲಹೆಯನ್ನೂ ಕೇಳಿದಳು. "ಯಾವುದನ್ನಾದರೂ ಉಟ್ಟುಕೊಂಡು ಬಿಡು. ಎಂಥದು ಉಟ್ಟರೂ ನೀನು ಚೆಂದಾಗಿಯೇ ಕಾಣುತ್ತೀಯ!" ಆತ ಉತ್ತರವಿತ್ತ. ಕೊನೆಗೆ ಬಿಳಿಯ ವಾಯಲ್ ಸೀರೆಯೇ ಸರಿಯೆಂದು ನಿಶ್ಚಯಿಸಿ ಉಟ್ಟುಕೊಂಡು ಬಿಳಿಯ ರವಿಕೆ ತೊಟ್ಟಿದ್ದೂ ಆಯಿತು. ಮೂರು ನಾಲ್ಕು ಸಲ ಕನ್ನಡಿಯಲ್ಲಿ – ಹೌದು ಅರ್ಧ ಒಡೆದ ಕನ್ನಡಿಯಲ್ಲಿ – ಮುಖ ನೋಡಿಕೊಂಡು, ಕೆನ್ನೆ ಉಜ್ಜಿಕೊಂಡು ಕುರುಳು ತಿದ್ದಿಕೊಂಡು, ಹುಬ್ಬು ತೀಡಿಕೊಂಡು, ಮೂಗು ಒರಸಿಕೊಂಡು ತನ್ನಷ್ಟಕ್ಕೆ ತಾನೇ ನಕ್ಕು – ಅನ್ನ ಹೊತ್ತಿಕೊಂಡ ವಾಸನೆ ಬರುತ್ತಲೂ ಅವಸರದಿಂದ ಓಡಿಹೋಗಿ ಅದನ್ನಿಳಿಸಿದ್ದಾಯಿತು. ಅವಳ ಚಲನವಲನಗಳನ್ನೆಲ್ಲ ಕೌತುಕದಿಂದ ನಿರೀಕ್ಷಿಸುತ್ತ ಕೊಠಡಿಯಲ್ಲಿ ಕುಳಿತಿದ್ದ ಸಿದ್ಧರಾಮ. ಅವನ ಸಿದ್ಧತೆಯೇನೂ ಇರಲಿಲ್ಲ. ಸೂಟು ಹಾಕಿ, ಬೂಟು ಧರಿಸಿ ಹೊರಡಬೇಕಾದರೆ ಸಿದ್ಧತೆ ಬೇಕು. ಅಂಗಿ ತೊಟ್ಟು , ಪಂಚೆ ಉಟ್ಟು ಹೊರಡಲು ಎಂಥ ಸಿದ್ಧತೆ ?

ಊಟ ತೀರಿಸಿಕೊಂಡು ಪ್ಲಾಟ್‌ಫಾರ್ಮಿಗೆ ಬಂದದ್ದೂ ಆಯಿತು. ಅವಸರದಿಂದ ಟಿಕೆಟ್ ಕೊಂಡುಕೊಂಡು ಪ್ಲಾಟ್‌ಫಾರ್ಮಿಗೆ ಬಂದರು.

'ಅದೋ ! ದೇವಮ್ಮನೂ ಬಂದಿದ್ದಾಳೆ ನೋಡಿ. ಅವರೂ ಹೊರಟಂತೆ ಕಾಣುತ್ತೆ ಸಿನಿಮಾಕ್ಕೆ ?'

ಸಿದ್ಧರಾಮ ಅತ್ತ ಹೊರಳಿದ. ದೇವಮ್ಮ ! ಅವಳನ್ನಾತ ನೋಡಿದ್ದು ಇದೇ ಮೊದಲನೆಯ ಸಲ. ಭಾರಿ ಬೆಲೆಯ ರೇಷ್ಮೆ ಸೀರೆ ಉಟ್ಟಿದ್ದಾಳೆ. ರೇಷ್ಮೆ ರವಿಕೆ ತೊಟ್ಟಿದ್ದಾಳೆ. ಕಿವಿಗಳಲ್ಲಿ ಕೆಂಪಿನ ಲೋಲಾಕು ಇಟ್ಟಿದ್ದಾಳೆ. ಕತ್ತಿನಲ್ಲಿ ಚಿನ್ನದ ಹಾರ ಹಾಕಿ ಕೈಗಳಲ್ಲಿ ಚಿನ್ನದ ಬಳೆ ತೊಟ್ಟಿದ್ದಾಳೆ. ಬೆರಳುಗಳಲ್ಲಿ ರತ್ನದುಂಗುರಗಳಿವೆ. ಕಾಲಿಗೆ ಹೊಳಪಿನ ಷೂಸು. ಮುಖದ ಮೇಲೆಲ್ಲ ಪೌಡರಿನ ತೆರೆ ! ತುಟಿಗಳಲ್ಲಿ ಬಿಂಕದ ನಗೆ ! ತಿಂಗಳಿಗೆ ಇನ್ನೂರು ರೂಪಾಯಿ ಸಂಪಾದಿಸುವ ಸೂಪರ್‌ವೈಸರ್ ಪತ್ನಿ ತಾನು ಎಂಬುದನ್ನು ಸೂಚಿಸಲೆತ್ನಿಸುವಂಥ ದೃಷ್ಟಿ .

ಪಕ್ಕದಲ್ಲೇ ನಿಂತಿದ್ದ – ಅವಳ ಕೈಹಿಡಿದ ಮಹಾನುಭಾವ – ಆಗತಾನೆ ಯುರೋಪಿನಿಂದ ಮರಳಿದವರಂಥ ವೇಷದಲ್ಲಿ. ಮಾಂಚೆಸ್ಟರ್ ಸರ್ಜಿನ ಸೂಟು, ಟೈ, ಕಾಲರ್, ಹ್ಯಾಟು, ಬೆಳಕು ಬೀರುವ ಬೂಟು. ಬಿಂಕದಿಂದ ಸೆಟೆದು ನಿಂತ ಕತ್ತು.

ಸಿದ್ಧರಾಮನ ದೃಷ್ಟಿ ಆ ದಂಪತಿಗಳಿಂದ ಹೊರಳಿ ತಮ್ಮಿಬ್ಬರನ್ನು ನೋಡಿಕೊಂಡಿತು. ಆ ಸೂಪರ್‌ವೈಸರ್ ಮಹಾಶಯನ ಸೂಟು–ಬೂಟು, ತನ್ನ ಶರಟು, ಪಂಚೆ, ಅವನ ಪತ್ನಿಯ ರೇಷ್ಮೆ ಸೀರೆ, ತನ್ನ ಪತ್ನಿಯ ಸಾದಾಸೀರೆ, ಅವಳ ಕತ್ತಿನಲ್ಲಿನ ಚಿನ್ನದ ಹಾರಗಳು; ಇವಳ ಕತ್ತಿನಲ್ಲಿದ್ದ ಕರಿಮಣಿಗಳು, ಅವಳ ಚಿನ್ನದ ಬಳೆ, ಇವಳ ಗಾಜಿನ ಬಳೆ, ಅವಳ ರತ್ನದುಂಗುರದ ಬೆರಳು, ಶೂ ಮೆಟ್ಟಿದ ಕಾಲು – ಇವಳ ಬೆರಳೂ ಬರಿಯವು – ಕಾಲೂ ಬರಿಯವು...

ಈ ಬಗೆಯ ತುಲನೆ ಸರಿಯಲ್ಲ ಎಂದು ಎಷ್ಟು ಹೇಳಿದರೂ ಕೇಳಲಿಲ್ಲ ಮನಸ್ಸು. ಮತ್ತೆ ಮತ್ತೆ ಆ ವೈಶಮ್ಯದ ಭಾವನೆಯೆ ಎದೆಯನ್ನು ಕಲಕುತ್ತಿತ್ತು. ಅವರೂ ಸಿನಿಮಾಗೆ ಹೋಗುತ್ತಿದ್ದಾರೆ – ನಾವೂ ಸಿನಿಮಾಗೆ ಹೋಗುತ್ತಿದ್ದೇವೆ. ಆದರೆ ಅವರ ಸ್ಥಿತಿಗೂ ನಮ್ಮ ಸ್ಥಿತಿಗೂ ಎಷ್ಟು ವ್ಯತ್ಯಾಸ ! ಆ ಸೂಪರ್‌ವೈಸರ್ ಅಮ್ಮನೆದುರಿಗೆ ಎಷ್ಟು ದೀನೆಯಾಗಿ ಕಾಣುತ್ತಾಳೆ ನನ್ನ ಗಿರಿಜಾ ! ಆಕೆಗಿಂತಲೂ ಚೆಲುವೆ ಈಕೆ. ಆದರೆ...

ಧಾವಿಸುತ್ತ ಬಂದು ಉಗಿಬಂಡಿ ನಿಂತಿತು. ಒಂದು ಡಬ್ಬಿಯಲ್ಲೂ ಸ್ಥಳವಿರಲಿಲ್ಲ. ಗಂಡಸರು, ಹೆಂಗಸರು, ಹುಡುಗಿಯರು, ಕೂಸುಗಳು ! ಕಾಲಿಟ್ಟುಕೊಂಡು ನಿಂತಿರಲೂ ಸಹ ಸಾಧ್ಯವಿರಲಿಲ್ಲ. ಬಾಗಿಲು ತೆರೆದು ಒಳಸೇರುವುದೇ ಅಸಾಧ್ಯವಾಗಿತ್ತು. ಅವುಗಳ ಮೇಲೂ ಸವಾರಿ ಮಾಡಿದ್ದರು ಜನ. ಬಾಗಿಲು ತೆರೆಯುವುದು ಹಾಗಿರಲಿ. ಹತ್ತಿರ ಹೋದರೆ ಸಾಕು – ಆ ದ್ವಾರರಕ್ಷಕರು ಉರಿದು ಬೀಳುತ್ತಿದ್ದರು. ಕನ್ನಡ, ತೆಲುಗು, ತಮಿಳು, ಹಿಂದಿ ಎಲ್ಲ ಭಾಷೆಗಳಲ್ಲೂ ಗಲಾಟೆಗೆ ಆರಂಭವಾಗುತ್ತಿತ್ತು.

ಎಲ್ಲ ಡಬ್ಬಿಗಳನ್ನೂ ಹುಡುಕಿದ್ದಾಯಿತು. ಒಂದರಲ್ಲೂ ಪ್ರವೇಶ ದೊರೆಯುವಂತಿರಲಿಲ್ಲ. ದೇವಮ್ಮನೂ ಅವಳ ಪತಿಯೂ ಇಂಟರ್ ವರ್ಗದಲ್ಲಿ ಕುಳಿತುಕೊಂಡು ಬಿಟ್ಟರು. ಅಲ್ಲಿ ಹಾಯ್ದು ಹೋಗುತ್ತಿದ್ದ ಹಾಗೆ ದೇವಮ್ಮ ಗಿರಿಜೆಯನ್ನು ನೋಡಿದಳು.

'ನಾವೂ ಬರೋಣವೇನಮ್ಮಾ ಒಳಕ್ಕೆ ?' ಎಂದಳು ಗಿರಿಜಾ.

'ಟಿಕೆಟ್ ತಕ್ಕೊಂಡಿದ್ದೀರೇನು ಇಂಟರಿನದು ?' ಎಂದು ಉಪಹಾಸದಿಂದ ಹೇಳಿ ದೇವಮ್ಮ ಮುಸಿ ಮುಸಿ ನಕ್ಕಳು.

ಮುಖಭಂಗವಾಯಿತು ಸಿದ್ಧರಾಮನಿಗೆ. 'ಇಲ್ಲಿ ಬೇಡ ಬಾ ಗಿರಿಜಾ ! ನಮ್ಮ ಸ್ಥಳವಲ್ಲ ಇದು ! ಅಲ್ಲಿ ...ಹೆಂಗಸರ ಡಬ್ಬಿಯಲ್ಲಿ ನೀ ಕೂತಿರು. ನಾನು ಎಲ್ಲಾದರೂ ನಿಂತುಕೊಂಡಿರುತ್ತೇನೆ' ಎಂದು ಹೇಳಿ ಆ ಕಡೆ ನಡೆದ.

ಅಲ್ಲೂ ಅದೇ ಗತಿ. ಅಷ್ಟೇ ಗಲಾಟೆ. ದಪ್ಪಗಿನ ಶರೀರದ ಮದ್ರಾಸೀ ಸ್ತ್ರೀಯೊಬ್ಬಳು ಬಾಗಿಲಿಗೆ ಅಡ್ಡವಾಗಿ ಕೂತುಕೊಂಡುಬಿಟ್ಟಿದ್ದಳು. ಅವಳ ಆ ದೀರ್ಘಕಾಯವನ್ನು ಬದಿಗೆ ಸರಿಸಿ ಬಾಗಿಲು ತೆಗೆಯುವುದೂ ಅಸಾಧ್ಯವಾಗಿತ್ತು. ಹೇಗೋ ಪ್ರಯಾಸಪಟ್ಟು ಬಾಗಿಲ ಮೇಲಿಂದ ಗಿರಿಜಳನ್ನೇರಿಸಿ ಒಳಕ್ಕೆ ತೂರಿಸಿಬಿಟ್ಟು ಸಿದ್ಧರಾಮ ಪಕ್ಕದ ಡಬ್ಬಿಗೆ ಹೋದ. ಹತ್ತಾರು ಜನರ ಬೈಗಳ ಮಳೆಯಲ್ಲಿ ತೋಯಿಸಿಕೊಳ್ಳುತ್ತ ಹೇಗೋ ಒಳಕ್ಕೆ ನೆಗೆದ. 'ಉಸ್ಸಪ್ಪಾ' ಎಂದು ಒಂದು ಸಲ ದೀರ್ಘ ಉಸಿರು ಹಾಕಿ ನಿಂತುಕೊಂಡ.

ಗಾಡಿಯೂ ಉರಿರೆಳೆಯುತ್ತ ಧಾವಿಸತೊಡಗಿತು.

ಅಷ್ಟರಲ್ಲಿ ತಿಂದ ಅನ್ನ, ಕಟ್ಟಿತಂದ ಉತ್ಸಾಹ ಅರ್ಧಕ್ಕರ್ಧ ಕರಗಿಹೋಗಿತ್ತು ಸಿದ್ಧರಾಮನಿಗೆ.

ಬೆಂಗಳೂರು ನಗರದ ನಿಲ್ದಾಣ ಬಂತು. ಬಾಗಿಲಿನಿಂದ ಪ್ಲಾಟ್‌ಫಾರ್ಮಿಗೆ ಜಿಗಿದುಬಿಟ್ಟು ಈಚೆಗೆ ಬಂದು ಪತ್ನಿಯನ್ನು ಕರೆದುಕೊಂಡು ಹೊರಕ್ಕೆ ಬಂದ. ಓಡಾಡುತ್ತಿದ್ದವರಲ್ಲಿ ಅನೇಕರು ಬೇಕೆಂತಲೇ ಅವಳ ಮೈಗೆ ಮೈ ತಗುಲಿಸಿಕೊಂಡು ಹೋಗುತ್ತಿದ್ದರು. ಅವಳೆಷ್ಟು ಎಚ್ಚರದಿಂದ ನಡೆದರೂ ಪ್ರಯೋಜನವಾಗಲಿಲ್ಲ.

'ಅದ್ಯಾಕೆ ಹೀಗೆಲ್ಲಾ ತಟ್ಟಿಕೊಂಡು ಹೋಗುತ್ತಾರೆ ಇವರು ?' ಎಂದು ಬೇಸರದಿಂದ ಕೇಳಿದಳಾಕೆ.

'ಇದು ಬೆಂಗಳೂರಿನ ಫ್ಯಾಶನ್ ಗಿರಿಜಾ ! ಬಡವರನ್ನು ಕಂಡರೆ ಎಲ್ಲ ಹೀಗೆ. ನಾವು ನೋಡಹೊರಟಿರುವ ಸಿನಿಮಾದಲ್ಲಿ ಮೊದಲನೇ ದೃಶ್ಯ ಇದು !' ಎಂದ ಸಿದ್ಧರಾಮ. ಅವನ ಮಾತಿನಲ್ಲಿ ಎಷ್ಟು ಅರ್ಥವಾಯಿತೋ ಅವಳಿಗೆ !

ನಿಲ್ದಾಣದ ಹೊರಗಡೆ ಬಂದಾಗ ದೇವಮ್ಮನೂ ಅವಳ ಪತಿಯೂ ಕುದುರೆ ಗಾಡಿಯಲ್ಲಿ ಹತ್ತಿ ಹೊರಡಲಣಿಯಾಗಿದ್ದುದು ಕಾಣಿಸಿತು. ಗಿರಿಜಾಳ ಕಡೆ ದೃಷ್ಟಿ ಹೊರಳಿಸುತ್ತಲೂ ಮತ್ತೆ ದೇವಮ್ಮ ಮುಸಿ ಮುಸಿ ನಕ್ಕಳು. ಆ ನಗೆಯ ಅರ್ಥವೇನೆಂಬುದನ್ನರಿತುಕೊಳ್ಳುವಷ್ಟು ಸೂಕ್ಷ್ಮ ಬುದ್ಧಿಯೆಲ್ಲಿ ಬಂದೀತು ಗಿರಿಜಾಗೆ ?

'ನೋಡಿದ್ರಾ ! ಗಾಡಿ ಮಾಡ್ಕೊಂಡು ಹೊರಟಿದ್ದಾರೆ. ಎಲ್ಲಿಗೆ ಹೋಗ್ತಾ ಇದಾರೋ !' ಎಂದಳು.

'ಎಲ್ಲಿಯಾದರೂ ಹೋಗಲೇಳು. ಗಾಡಿ ಆದ್ರೂ ಮಾಡಿಕೊಳ್ಳಲಿ, ವಿಮಾನನಾದ್ರೂ ಏರಿಕೊಳ್ಳಲಿ, ನಮಗೇನಂತೆ, ನಾವು ನಡೆದುಹೋಗೋದೇ ಮೇಲು ಬಾ' ಎಂದ ಸಿದ್ಧರಾಮ.

'ಎಲ್ಲಿಗೆ ಹೋಗೋದು ಈಗ ?'

'ಚಿಕ್ಕಲಾಲ್‌ಬಾಗಿಗೆ.'

'ಲಾಲ್‌ಬಾಗ್ ? ದೇವಮ್ಮ ಅಲ್ಲಿಗೇ ಹೊರಟಿದ್ದಾಳೋ ಏನೋ ! ಅಲ್ಲಿ ಪಾರಿವಾಳಗಳಿವೆಯಂತಲ್ಲ ? ಹೌದೇನು ?'

'ಇವೆಯಂತೆ. ನಾನೇನೂ ನೋಡಿಲ್ಲ. ಅದು ದೊಡ್ಡ ಲಾಲ್‌ಬಾಗ್. ನಾವೀಗ ಹೋಗೋದು ಅಲ್ಲಿಗಲ್ಲ. ಚಿಕ್ಕಲಾಲ್‌ಬಾಗಿಗೆ.'

'ಅಲ್ಲಿಗ್ಯಾತಕ್ಕೇ ? ದೊಡ್ಡಲಾಲ್‌ಬಾಗಿಗೇ ಹೋಗೋಣ. ಪಾರಿವಾಳಗಳನ್ನಾದ್ರೂ ನೋಡಬಹುದು.'

'ದೊಡ್ಡಲಾಲ್‌ಬಾಗ್ ದೊಡ್ಡ ಮನುಷ್ಯರದು ಗಿರಿಜಾ ! ಪಾರಿವಾಳ, ಗಿಳಿ, ಗೊರವಂಕ, ಗ್ಲಾಸ್ ಹೌಸ್ – ಎಲ್ಲಾ ಅವರದು ! ನಾವು ಚಿಕ್ಕಜನ, ನಮಗೆಲ್ಲಾ ಚಿಕ್ಕಲಾಲ್‌ಬಾಗೇ ಸರಿಯಾದ ಸ್ಥಳ. ಈ ವೇಷದಲ್ಲಿ ನಾವು ದೊಡ್ಡ ಲಾಲ್‌ಬಾಗಿಗೆ ಹೋದರೆ ರೇಷ್ಮೆ ಸೀರೆಯುಟ್ಟುಕೊಂಡು ಅಲ್ಲಿ ತಿರುಗುವ ಥಳುಕಿನ ಹುಡುಗಿಯರು ಬಿದ್ದು ಬಿದ್ದು ನಕ್ಕಾರು. ಚಿಕ್ಕಲಾಲ್‌ಬಾಗಿನಲ್ಲಾದರೂ ಹಾಗೆ ನಗುವರಾರೂ ಇರೋದಿಲ್ಲ. ಇಲ್ಲಿಗೆ ಬರೋದು ಅಂದರೆ ಅವರ ಮರ್ಯಾದೆಗೆ ಕಡಿಮೆ. ನಮ್ಮಂಥ ಬಡವರೇ ಬರೋದು ಇಲ್ಲಿಗೆ. ಬಾ ಹೋಗೋಣ. ಮೂರೂವರೆಗೆ ಸಿನಿಮಾ ಸುರುವಾಗುತ್ತದೆ. ಅಲ್ಲಿಯವರೆಗೆ ಮಾಡೋದೇನು ? ಕೂತಿರೋಣವಂತೆ ತೋಟದಲ್ಲಿ...'

ತೋಟಕ್ಕೆ ಬಂದು ತಲುಪಿದರು. ಆಗಲೆ ಸೂರ್ಯ ನೆತ್ತಿಯ ಮೇಲೆ ಏರಿ ಬಂದಿದ್ದ. ಗಿಡಮರಗಳ ನೆರಳಿನಲ್ಲಿ ಅಲ್ಲಿ ಇಲ್ಲಿ ಅಸ್ತವ್ಯಸ್ತವಾಗಿ ಬಿದ್ದುಕೊಂಡಿತ್ತು ಬಡಜನ. ಶಿಲಾಸನವೊಂದರಮೇಲೆ ಇಬ್ಬರೂ ಕುಳಿತುಕೊಂಡರು.

ಸೆರಗಿನಿಂದ ಬೆವರನ್ನೊರಸಿಕೊಳ್ಳುತ್ತ ಕೇಳಿದಳು ಗಿರಿಜಾ.

'ಇನ್ನೇನು ಮಾಡೋದು ?'

'ಸಿನಿಮಾ ನೋಡ್ಡೋದು' ಎಂದ ಸಿದ್ಧರಾಮ, ಅರ್ಥಗರ್ಭಿತ ಸ್ವರದಲ್ಲಿ.

'ಸಿನಿಮಾ ? ಈಗೆಲ್ಲಿಯ ಸಿನಿಮಾ ? ಮೂರೂವರಿಗಲ್ಲವೇನು ನೀವು ಹೇಳಿದ್ದು ?

ಮೂರುವರೆಗೆ ನಡೆಯೋದು ನಿಜವಾದ ಸಿನಿಮಾ ಅಲ್ಲ. ಸುಳ್ಳು ಸಿನಿಮಾ ! ನಿಜವಾದ ಸಿನಿಮಾ ಇಲ್ಲೇ ನಡೆದಿದೆ ನೋಡು. ನಮ್ಮ ಅಕ್ಕಪಕ್ಕದಲ್ಲೆ. ನಮ್ಮ ಕಣ್ಣೆದುರಿನಲ್ಲೆ !

'ಸುರು ಮಾಡಿದಿರೇನು ಹಾಸ್ಯಕ್ಕೆ ? ಇಲ್ಲೆಲ್ಲಿದೆ ಸಿನಿಮಾ ? ಈ ತೋಟದಲ್ಲಿ ?'

'ಹೂಂ ! ಈ ತೋಟದಲ್ಲಿ !'

'ಎಲ್ಲಿ ? ಕಾಣೋದಿಲ್ಲವಲ್ಲಾ ?' ಕಣ್ಣಿದ್ದವರಿಗೆ ಮಾತ್ರ ಕಾಣುತ್ತೆ ಅದು !

'ಕಣ್ಣಿದ್ದವರಿಗೆ ಅಂದ್ರೆ ? ಅಂದ್ರೆ ನನ್ನೇನು ಕುರುಡಿ ಅಂತ ತಿಳಕೊಂಡಿರೊ ?'

'ಹೂಂ ಕುರುಡಿಯೇ ಸರಿ – ಇನ್ನೇನು ?'

'ಕಣ್ಣಿದ್ದೂ ?'

'ಹೌದು, ಕಣ್ಣಿದ್ದೂ ಕುರುಡಿ ನೀನು ಗಿರಿಜಾ ! ಈ ಹೊರಗಿನ ಕಣ್ಣುಗಳಿಂದ ಕಾಣಲಾರದು ಈ ಸಿನಿಮಾ ! ಅವಕ್ಕೆ ಒಳಗಿನ ಕಣ್ಣು ಬೇಕು ! ಜ್ಞಾನದ ಕಣ್ಣು ಬೇಕು. ಬುದ್ಧಿಯ ಕಣ್ಣು ಬೇಕು. ಸಹಾನುಭೂತಿಯ ಕಣ್ಣು ಬೇಕು.'

'ಅಂದ್ರೆ ?'

'ನಮ್ಮ ಸುತ್ತಮುತ್ತ ಏನು ನಡೆದಿದೆ, ನಮ್ಮ ದೇಶದ ಗತಿ ಏನಾಗಿದೆ, ಜನ ಯಾವ ಸ್ಥಿತಿಯಲ್ಲಿದ್ದಾರೆ, ಅವರ ಕಷ್ಟ ಸುಖ ಹೇಗಿದೆ – ಅನ್ನೋದನ್ನ ತಿಳಿದುಕೊಳ್ಳೋ ವಿಚಾರ ಬೇಕು ನಮಗೆ ಗಿರಿಜಾ ! ಅದೋ ಆ ಗಿಡದ ಕೆಳಗೆ ಒಬ್ಬ ಹೆಂಗಸು ಬಿದ್ದುಕೊಂಡಿದ್ದಾಳೆ, ಕಾಣಿಸುತ್ತೆ ತಾನೆ ನಿನಗೆ !'

'ಹೌದಲ್ರಿ ! ಪಾಪ ! ಹಾಗೆ ಯಾಕೆ ಬಿದ್ದುಕೊಂಡಿದ್ದಾಳೋ ? ಹತ್ತಿರ ಇರೋವು ಆ ನಾಲ್ಕು ಪಿಳ್ಳೆಗಳು ಮಕ್ಕಳು ಅಂತ ಕಾಣುತ್ತೆ !'

'ಮಕ್ಕಳೆ ! ಇನ್ನಾರಿದ್ದಾರು ! ನೋಡು, ಆಕೆಯೂ ನಮ್ಮ ಹಾಗೆ ಮನುಷ್ಯಳೇ, ನಿನ್ನ ಹಾಗೆ ಹೆಂಗಸೇ. ಮಾನ ಮರ್ಯಾದೆ ಎಲ್ಲಾ ಮರೆತುಬಿಟ್ಟು ಒಬ್ಬಳೇ ಈ ಮಕ್ಕಳನ್ನು ಕಟ್ಟಿಕೊಂಡು ಈ ತೋಟಕ್ಕೆ ಬಂದು ಈ ರೀತಿ ಬಿದ್ದುಕೋಬೇಕಾದರೆ ಅವಳಿಗೆ ಯಾವ ಗತಿ ಬಂದಿದ್ದೀತು ? – ಅವಳಿಗೆ ಇಂಥ ಸ್ಥಿತಿ ಬರಲು ಕಾರಣ ಏನು ? ಅನ್ನೋ ವಿಚಾರ ನಮಗೆ ಬರಬೇಡವೇ ?'

ಗಿರಿಜಾ ಮಾತನಾಡಲಿಲ್ಲ. ಅವಳ ಮನಸ್ಸಿಗೆ ಮುತ್ತಿಕೊಂಡಿದ್ದ ಮೌಢ್ಯದ ಪರದೆ ಮೆಲ್ಲಮೆಲ್ಲನೆ ಕಳಚಿಬೀಳತೊಡಗಿತು.

'ಆ ಹೆಂಗಸಿನ ಮಾತು ಹಾಗಿರಲಿ. ಈ ಕಡೆ ಎಡಗಡೆ ಆ ಬೇಲಿಯ ಹತ್ತಿರ ನೋಡು : ಹರಕು, ಹೊಲಸು ಬಟ್ಟೆ ಹಾಕಿಕೊಂಡು ಆ ನಾಲ್ಕು ಹುಡುಗರು ಹೇಗೆ ಬಿದ್ದಿವೆ ನೋಡು ಬಿಸಿಲಿನಲ್ಲಿ ! ಪಾಪ ! ಅವುಗಳ ವಯಸ್ಸಾದರೂ ಎಷ್ಟಿದ್ದೀತು ! ಆರರಿಂದ ಏಳರ ವರೆಗೆ ! ಹೆಚ್ಚಾಗಿರಲಿಕ್ಕಿಲ್ಲ. ಶಾಲೆ ಕಲಿಯೋ ವಯಸ್ಸಿದು. ಇವು ಇಲ್ಲಿ ಬಿದ್ದುಕೊಂಡಿವೆ. ಎಲ್ಲಿಯಾದರೂ ಕೂಲಿನಾಲಿ ಮಾಡೋದು – ಆರು ಕಾಸಿನ ಕಡಲೆಪುರಿ ತಿನ್ನೋದು. ಮುಸುರೆ ಎಲೆ ಹುಡುಕಿ ಎಂಜಲು ತಿನ್ನೋದು – ಇಲ್ಲಿ ಬಂದು ಬಿದ್ದುಕೊಳ್ಳೋದು – ಇದು ಜೀವನವೇ ಗಿರಿಜಾ ! ಈ ಮಕ್ಕಳು ಮಕ್ಕಳೇ ! ನೋಡಿದರೆ ನಾಯಿಯ ಕುನ್ನಿಗಳು ಬಿದ್ದುಕೊಂಡ ಹಾಗೆ ಕಾಣಿಸೊಲ್ಲವೆ ಅವು ? – ನಮ್ಮ ದೇಶದಲ್ಲಿ ನೂರಕ್ಕೆ ತೊಂಬತ್ತರಷ್ಟು ಮಕ್ಕಳ ಗತಿಯೂ ಹೀಗೆ ಆಗಿದೆ ಗಿರಿಜಾ, ನಾಯಿಯ ಕುನ್ನಿಗಳು ಹಾಗೆ. ನಾವು ನೋಡುತ್ತಿರುವ ಸಿನಿಮಾದಲ್ಲಿ ಎರಡನೇ ದೃಶ್ಯ ಇದು !...' ಎಂದ.

ಕೆಲಕಾಲ ದಂಪತಿಗಳಿಬ್ಬರೂ ಮೌನವಾಗಿದ್ದರು. ಯಾರ ಬಾಯಿಂದಲೂ ಮಾತು ಹೊರಡುವ ಹಾಗಿರಲಿಲ್ಲ.

'ಕಳ್ಳೇಕಾಯಿ ! ಕಳ್ಳೇಕಾಯಿ !'

ತಲೆಯೆತ್ತಿ ನೋಡಿದಳು ಗಿರಿಜಾ.

ಮುದುಕನೊಬ್ಬ ಬುಟ್ಟಿಯೊಂದನ್ನು ಹೊತ್ತುಕೊಂಡು ಕೂಗುತ್ತ ಬರುತ್ತಿದ್ದ. ವಯಸ್ಸಾದ ಮುದುಕ, ಅರವತ್ತು ಎಪ್ಪತ್ತು ಆದರೂ ಆಗಿದ್ದೀತು. ಕೈಯಲ್ಲೊಂದು ಕೋಲು ಹಿಡಿದುಕೊಂಡು ಅದರ ಆಧಾರದಿಂದ ತನ್ನ ಕೋಲಿನಂಥ ಶರೀರವನ್ನು ಮುಂದುವರೆಯಿಸುತ್ತ ಬಾಗುತ್ತ, ಬರುತ್ತಿದ್ದಾನೆ. ಹರಿದುಹೋದ ಪಂಚೆಯೊಂದನ್ನು ಮೊಳಕಾಲಿನವರೆಗೆ ಸುತ್ತಿಕೊಂಡು ಹೊಲಸು ಅಂಗಿಯೊಂದನ್ನು ತೊಟ್ಟಿದ್ದಾನೆ. ತಲೆಗೊಂದು ಚಿಂದಿ ಬಟ್ಟೆ, ಮುಖದ ಮೇಲೆ ಬೆಳೆದು ನಿಂತ ಬಿಳಿಯ ಗಡ್ಡ ಮೀಸೆ. ಮೊದಲೇ ಕಳಾಹೀನವಾದ ಆ ಮುಖ ಬಿಸಿಲಿನಲ್ಲಿ ಸುತ್ತಿ ಸುತ್ತಿ ಇನ್ನೂ ಕಂದಿಹೋಗಿದೆ. 'ಕಳ್ಳೇಕಾಯಿ ! ಕಳ್ಳೇಕಾಯಿ !' ಎಂಥ ಕುಗ್ಗಿದ ದನಿ ಅದು.

'ಹಸಿವಾಗಿದೆಯೇನೆ ?' ಎಂದ ಸಿದ್ಧರಾಮ.

ಹೌದು. ಹಸಿವಾಗಿತ್ತು ಅವಳಿಗೆ. ಬೆಳಗಿನಲ್ಲಿ ತಿಂದ ಆ ಅನ್ನ ಯಾವಾಗಲೋ ಕರಗಿಹೋಗಿತ್ತು. ಆ ರೈಲು ಪ್ರಯಾಣ – ಆ ಗಲಾಟೆ – ಆ ಬಿಸಿಲು – ಆ ದಾಹ...

'ಕೊಡಯ್ಯಾ ಒಂದಾಣೆಯದು !'

ನಡುಗುವ ಕೈಗಳಿಂದ ಬುಟ್ಟಿಯನ್ನಿಳಿಸಿ ಆ ಮುದುಕ ಕುಳಿತುಕೊಂಡ. ಒಂದು ಪಾವು ಕಡಲೇಕಾಯಿಗಳನ್ನಳೆದುಕೊಟ್ಟು ದುಡ್ಡು ತೆಗೆದುಕೊಂಡು ಹೊರಟುಹೋದ. ಭಾರತದ ದಾರಿದ್ರ್ಯ, ದೈನ್ಯತೆ, ಅಸಹಾಯಕತೆಗಳೇ ಮೂರ್ತಿವೆತ್ತು ಬಂದಂತಿದ್ದ ಆ ಮುದುಕನನ್ನು ಶೂನ್ಯ ದೃಷ್ಟಿಯಿಂದ ನಿಟ್ಟಿಸುತ್ತ ಸಿದ್ಧರಾಮನೆಂದ :

'ನಾವು ನೋಡುತ್ತಿರುವ ಸಿನಿಮಾದಲ್ಲಿ ಮೂರನೆಯ ದೃಶ್ಯ ಇದು ಗಿರಿಜಾ ! ಇನ್ನೂ ಕೊಂಚ ಕಣ್ದೆರೆದು ನೋಡು. ಮುಪ್ಪಿನ ಮುದುಕ ಈತ. ಅರವತ್ತಕ್ಕೂ ಹೆಚ್ಚಾಗಿದ್ದೀತು ವಯಸ್ಸು. ಮೈಯಲ್ಲಿ ಶಕ್ತಿಯಾದರೂ ಇದೆಯೆ ಅವನಿಗೆ ? ಅವನ ಕತ್ತಿನಲ್ಲಿ ನರಗಳಾದರೂ ಇವೆಯೆ ? ಮೈಯಲ್ಲಿ ರಕ್ತವಾದರೂ ಇದೆಯೆ ? ಆದರೂ ಆತ ಆ ಬುಟ್ಟಿ ಹೊತ್ತುಕೊಂಡು ಆ ಭೀಕರ ಬಿಸಿಲಿನಲ್ಲಿ ತಿರುಗುತ್ತಾನೆ. ಊಟ ಮಾಡಿ ತಂಪಾದ ಸ್ಥಳದಲ್ಲಿ ಮಲಗಿಕೊಂಡು ವಿರಮಿಸುವ ಹೊತ್ತು ಇದು. ಇವನ ವಯಸ್ಸಿನ ಶ್ರೀಮಂತರೆಷ್ಟು ಜನ ಸೋಫಾಗಳ ಮೇಲೆ ಒರಗಿ ನಿದ್ರಿಸುತ್ತಿದ್ದಾರೋ; ಇವನು ಮಾತ್ರ ಹೊಟ್ಟೆಪಾಡಿಗಾಗಿ ಈ ಕಳ್ಳೇಕಾಯಿಯ ಕ್ಷುಲ್ಲಕ ವ್ಯಾಪಾರ ಮಾಡುತ್ತ ತಿರುಗಬೇಕಾಗಿದೆ. ದಿನವೆಲ್ಲಾ ಈ ರೀತಿ ತಿರುಗಿದರೆ ಅವನಿಗೆ ದೊರೆಯುವ ಲಾಭವಾದರೂ ಎಷ್ಟಿದ್ದೀತು ಅಂತಿಯಾ ? ನಾಲ್ಕಾಣೆ ಐದಾಣೆ ಆದರೆ ಬಹಳ ಆಯಿತು. ಈ ಅಲ್ಪ ಲಾಭಕ್ಕಾಗಿ ಈ ಮುದುಕ ಪಡುತ್ತಿರುವ ಕಷ್ಟ ನೋಡಿದೆಯಾ ? ಇಂಥ ಕಷ್ಟವೇ ಇವನಂಥ ಕೋಟ್ಯಂತರ ಜನ ಮುದುಕರಿಗೂ ಇದೆ, ಇಂದಿನ ಹಿಂದೂಸ್ಥಾನದಲ್ಲಿ ! ಇದು ನಿಜವಾದ ಸಿನಿಮಾ ಗಿರಿಜಾ ! ಅಲ್ಲಿ ಆ ಥೇಟರಲ್ಲಿ ಆ ನಿಜ ದೃಶ್ಯಗಳನ್ನು ನೋಡಿಸೋಲ್ಲ. ಅದೆಲ್ಲಾ ಸುಳ್ಳು ಸೃಷ್ಟಿ. ಬರೀ ಶ್ರೀಮಂತರ ಅಟ್ಟಹಾಸ; ಅವರ ಸೂಟು, ಅವಳ ಭಾರಿ ಭಾರಿ ಬಂಗಲೆಗಳು, ಮೋಟರು ಕಾರುಗಳು, ಅವರ ಪ್ರೇಯಸಿಯರು, ಅವರ ಚಿತ್ರವಿಚಿತ್ರ ಸೀರೆ–ರವಿಕೆಗಳು... ಅವರ ವಿಲಕ್ಷಣ ಪ್ರೇಮ ! ಈ ಜಗತ್ತಿನಲ್ಲಿ ನಿಜವಾಗಿ ನಡೆದಿರೋದು ಆ ಸಿನಿಮಾಗಳಲ್ಲಿ ಕಾಣಿಸೋದಿಲ್ಲ ಗಿರಿಜಾ ! ಅದ್ಯಾವುದೋ ಬೇರೆ ಜಗತ್ತಿನ ಸಿನಿಮಾ ! ಅದಕ್ಕಾಗಿ ಹಣ ಹಾಳುಮಾಡ್ತೇವೆ, ಹುಚ್ಚರು ನಾವು !...'

ಬೇರಾವುದಾದರೂ ಸಮಯವಾಗಿದ್ದರೆ ಗಿರಿಜಾ ಸುಮ್ಮನಿರುತ್ತಿರಲಿಲ್ಲ. ದುಡ್ಡು ಖರ್ಚಾಗುತ್ತೆ ಅಂತ ಸುರುವಾಯ್ತೇನೊ ನಿಮ್ಮ ಲೆಕ್ಚರು ! ಎಂದು ಹೇಳಿ ಮೂಗು ಮುರಿಯದಿರುತ್ತಿರಲಿಲ್ಲ. ಆದರೆ ಈಗ ಹಾಗೇನೂ ಮಾಡಲಿಲ್ಲ ಆಕೆ, ಅದು ಸಾಧ್ಯವೂ ಇರಲಿಲ್ಲ. ಈ ವಾತಾವರಣವೇ ವಿಲಕ್ಷಣವಾಗಿತ್ತು. ಮನೆಯಲ್ಲಿ ಕೂತು ಕೂತು ಸಂಕುಚಿತವಾಗಿದ್ದ ಅವಳ ದೃಷ್ಟಿ, ಹೊರಜಗತ್ತಿನ ಸಂಪರ್ಕದೊಂದಿಗೆ ವಿಶಾಲವಾಗುತ್ತಿತ್ತು ; ಅವಳ ಕಣ್ಣು ಮೆಲ್ಲನೆ ಬಿಚ್ಚಿಕೊಳ್ಳುತ್ತಿತ್ತು – ಸಿದ್ಧರಾಮನೆಂದ ಆ ಒಳಗಣ್ಣು...

'ಇಂಥ ಬಡತನ, ಇಂಥ ದೈನ್ಯತೆ, ಇಂಥ ಅಸಹಾಯ ಸ್ಥಿತಿ ನಮ್ಮದು ! ಇದನ್ನೇ ಹೋಗಲಾಡಿಸಲು ನಾವು ದುಡಿಯಬೇಕಲ್ಲವೇ ಗಿರಿಜಾ ! ಈ ಬಡವರೂ ನಮ್ಮವರೇ ! ನಮ್ಮ ದೇಶದವರೇ ! ನಮ್ಮ ಅಣ್ಣ–ತಮ್ಮ ಅಕ್ಕ–ತಂಗಿಯರೇ ! ಅವರ ದುಃಖ ಹೇಗೆ ಹೋದೀತು – ಅದಕ್ಕಾಗಿ ಎಂಥ ಕೆಲಸ ಮಾಡಬೇಕು – ಎನ್ನುವುದನ್ನು ನಾವು ಯೋಚಿಸಬೇಕಲ್ಲವೇ ? ಭಾನುವಾರ ಬರುತ್ತಲೂ ಅದೇ ಕೆಲಸದಲ್ಲಿ ತೊಡಗಿರುತ್ತೇನೆ ನಾನು. ಕಾಡುಗೋಡಿಯಲ್ಲಿರುವ ಇಂಥ ಬಡ ಕೂಲಿಗಾರರ ಸಂಘಟನೆ ಮಾಡುತ್ತೇನೆ. ಈ ಅಸಹ್ಯ ಬಡತನ ಹೋಗಬೇಕು. ಅವರೂ ಮನುಷ್ಯರಾಗಿ ಬದುಕುವಂತಾಗಬೇಕು. ಅವರ ಮಕ್ಕಳೂ ಶಾಲೆಗೆ ಹೋಗಿ ಕಲಿಯ ಬೇಕು. ನಾಯಿಕುನ್ನಿಗಳಂತೆ ಎಂಜಲು ತಿಂದು ತಿಂದು ಈ ರೀತಿ ಬಿಸಿಲಲ್ಲಿ ಬೀಳಬಾರದು. ಅವರ ಹೆಂಗಸರೂ ಮರ್ಯಾದೆಯಿಂದ, ಸುಖದಿಂದ ಇರುವಂತಾಗಬೇಕು. ಈ ರೀತಿ ಅನಾಥೆಯರಾಗಿ ತೋಟದಲ್ಲಿ ಬಿದ್ದುಕೊಳ್ಳಬಾರದು. ಅವರ ಮುದುಕ ತಂದೆಗಳೂ ಸುಖವಾಗಿ ಊಟಮಾಡಿ ವಿರಮಿಸುವಂತಾಗಬೇಕು. ಇಂಥ ಉರಿಬಿಸಿಲಿನಲ್ಲಿ ಕಳ್ಳೇಕಾಯಿ ಮಾರುತ್ತ ತಿರುಗಿ ಕೊನೆಗೆ ಕೆಮ್ಮುತ್ತ ಕೆಮ್ಮುತ್ತ ಪ್ರಾಣ ಬಿಡಬಾರದು...'

'ಅದೆಲ್ಲಾ ಸರಿ, ಆದರೆ ನೀವೊಬ್ಬರೇ ಏನು ಮಾಡೀರಿ ಇವರಿಗೆಲ್ಲ ? ನಿಮ್ಮೊಬ್ಬರಿಂದ ಏನಾದೀತು ?'

'ನಾನೊಬ್ಬನು ಮಾತ್ರವಲ್ಲ ಗಿರಿಜಾ ! ಎಷ್ಟೋ ಜನ ಇಂಥ ಕಾರ್ಯ ಮಾಡುತ್ತಿದ್ದೇವೆ. ಒಂದೊಂದು ಊರಿನಲ್ಲಿ ನಮ್ಮಂಥವರು ಇಬ್ಬರಿದ್ದರೆ ಸಾಕು. ಎಷ್ಟೊ ಕೆಲಸವಾದೀತು. ಇಂದಿಲ್ಲ ನಾಳೆ ಈ ಬಡ ಜನರಿಗೆಲ್ಲ ಒಳ್ಳೆಯ ದಿನ

ಬಂದೀತು. ಅವರೂ ಸುಖವಾಗಿ ಬಾಳಿಯಾರು ! ಇದೊಂದು ದೊಡ್ಡ ಸಿನಿಮಾ ! ಅದರಲ್ಲಿ ಪಾತ್ರ ವಹಿಸುವವರು ಹತ್ತಿಪ್ಪತ್ತು ಮಂದಿ ಮಾತ್ರವಲ್ಲ – ದೇಶದ ಬಡವರೆಲ್ಲಾ ಅದರಲ್ಲಿ ಅಭಿನಯಿಸುತ್ತಿದ್ದಾರೆ. ನಾವೇ ಅದರ ನಿರ್ಮಾತೃಗಳು – ನಿರ್ದೇಶಕರು. ಕಳ್ಳೇಕಾಯಿ ತಿನ್ನು ಗಿರಿಜಾ ! ಹಸಿದಿದ್ದೀಯ !'

ತಿನ್ನಲಾಗಲಿಲ್ಲ ಅವಳಿಗೆ. ಭಾವನಾವೇಗದಿಂದ ಅವಳ ಬಾಯಿ ಕಟ್ಟಿಹೋಗಿತ್ತು. ಕತ್ತಿನ ನರವುಬ್ಬಿಕೊಂಡಿತ್ತು.

೪

ಸೂರ್ಯ ಪಶ್ಚಿಮದ ಕಡೆ ಮೆಲ್ಲಮೆಲ್ಲನೆ ಇಳಿಯಲಾರಂಭಿಸಿದ್ದ. ಗಿಡಗಳ ನೆರಳು ಪೂರ್ವಕ್ಕೆ ಹೊರಳುತ್ತಿದ್ದುವು. ಸಿದ್ಧರಾಮನ ಹತ್ತಿರ ಗಡಿಯಾರವೆಲ್ಲಿಂದ ಬಂದೀತು ! ಸೂರ್ಯನನ್ನು ನೋಡಿಯೇ ಹೊತ್ತು ಗುರುತಿಸಬೇಕು ಆತ.

'ಮೂರು ಗಂಟೆ ಆಯ್ತೇನೊ – ಏಳು ಹೋಗೋಣ' ಎಂದ.

ಮೂರು ಗಂಟೆಯಲ್ಲ – ಮೂರುವರೆ ಗಂಟೆಯಾಗಿ ಹೋಗಿತ್ತು, ಅವರು ಸಿನಿಮಾ ಮಂದಿರಕ್ಕೆ ಬಂದು ತಲುಪಿದಾಗ, ಗಿರಿಜಾಳಿಗೆ ಮೂರು ಮುಕ್ಕಾಲಾಣೆಯದೊಂದು ಟಿಕೆಟ್ ತೆಗೆಯಿಸಿ ತನಗಾಗಿ ಎಂಟಾಣೆಯದೊಂದನ್ನು ಕೊಳ್ಳಲು ಹೋದರೆ 'ಟಿಕೆಟ್ ತೀರಿವೆ, ಹದಿಮೂರಾಣೆಯದೂ ಇಲ್ಲ. ರೂಪಾಯಿನಾಲ್ಕಾಣೆಯದಿದೆ' ಎಂದು ಉತ್ತರ ಬಂತು. ಒಂದು ರೂಪಾಯಿ ನಾಲ್ಕಾಣೆ ! ಅಷ್ಟು ದಂಡ ತೆತ್ತು ಸಿನಿಮಾ ನೋಡುವುದು ! ಅದೂ ತನ್ನಂಥ ನಲವತ್ತು ರೂಪಾಯಿ ಸಂಬಳದವ ! ಅಷ್ಟು ಹಣವೂ ಹತ್ತಿರ ಇಲ್ಲ–ಸರಿ. ಮುಖ ಬಾಡಿಸಿಕೊಂಡು ಹೊರಳಿ ಬಂದ.

'ಏನು ಮಾಡೋಣ ಗಿರಿಜಾ ! ಎಂಟಾಣೆಯ ಟಿಕೆಟ್ ತೀರಿಹೋಗಿವೆ';

'ಇನ್ನು ಎಷ್ಟರದಿದೆ ?'

'ಒಂದು ಕಾಲು ರೂಪಾಯಿಂದು'

'ತೆಗೆಸಿ ಬಿಡಿ. ಇನ್ನೇನು ಮಾಡೋದು ? ನಾನಂತೂ ಕೊಂಡಾಯಿತಲ್ಲಾ'

'ಒಂದುಕಾಲು ರೂಪಾಯಿ ಟಿಕೆಟ್ಟಿಗೆ ಕೊಟ್ಟರೆ ರೈಲಿಗೆ ಹಣವನ್ನೆಲ್ಲಿಂದ ತರೋದು ? ಇಬ್ಬರಿಗೂ ಹತ್ತಾಣೆ ಬೇಕು ರೈಲಿಗೆ.'

ಈ ರೀತಿ ಲೆಕ್ಕಾಚಾರ ನಡೆದಿರುವಾಗಲೇ ದೇವಮ್ಮ ಬಂದಳು, ಗಂಡನ ಜತೆಯಲ್ಲಿ. ಇವರನ್ನು ನೋಡಿಯೂ ನೋಡದವರಂತೆ ಅವರಿಬ್ಬರೂ ನೇರವಾಗಿ ಚಿತ್ರಮಂದಿರವನ್ನು ಸೇರಿದರು.

'ಅವರು ಹೋದರಲ್ಲ ? ಯಾವ ಜಾಗಕ್ಕೆ ?' ಎಂದಳು ಗಿರಿಜಾ.

'ಎರಡು ರೂಪಾಯಿ ನಾಲ್ಕಾಣೆಯದಕ್ಕೆ !'

'ಅಂದ್ರೆ ? ಇವರಿಬ್ಬರಿಗೇ ಸೇರಿ ನಾಲ್ಕೂವರೆ ಆಯ್ತಲ್ಲ ! ಬರಿ ಸಿನಿಮಾಕ್ಕೆ ಇಷ್ಟು ಖರ್ಚು ಮಾಡ್ತಾರೇ ಅವರು ?'

'ದುಡ್ಡಿದೆ, ಮಾಡ್ತಾರೆ. ನಮ್ಮ ಹತ್ತಿರ ದುಡ್ಡಿಲ್ಲ. ನಾವು ಮಾಡಲಾಗೋದಿಲ್ಲ. ಇದೇ ಇಂದಿನ ಜಗತ್ತಿನ ರೀತಿ ಗಿರಿಜಾ ! ಹಾಳಾಯ್ತು ಈ ಸಿನಿಮಾ ! ಹೊರಟು ಬಿಡೋಣ' ಎಂದ ಸಿದ್ಧರಾಮ.

'ಬೇರ್‍ಯಾವುದಾದರೂ ಸಿನಿಮಾಕ್ಕೆ ಹೋಗಿದ್ದರೆ ?'

'ಸೆಲೆಕ್ಟ್‌ಗೆ ಹೋಗೋಣ ಬಾ. ಅಲ್ಲಿಯಾದರೂ ಟಿಕೆಟ್ ಸಿಕ್ಕಿದರೆ ! ಇಂದು ಭಾನುವಾರ. ತುಂಬ ಗಲಾಟೆ. ಸಮಯಾನೂ ಮೀರಿ ಹೋಗಿದೆ. ಆದರೂ ಪ್ರಯತ್ನಿಸೋದಕ್ಕೇನಂತೆ ಬಾ' ಎಂದ.

ಅವರ ಪ್ರಯತ್ನವೇನೂ ಸಫಲವಾಗಲಿಲ್ಲ. ಆಗಲೇ ಅಲ್ಲಿಯೂ ಟಿಕೆಟ್ಟು ಮುಗಿದುಹೋಗಿದ್ದುವು.

ಮೆಜೆಸ್ಟಿಕ್ ಆಯಿತು; ಸಾಗರ್, ಪ್ರಭಾತ್, ಸ್ಟೇಟ್ಸ್ ಎಲ್ಲ ಸುತ್ತಿ ಮುಗಿಯಿತು. ಎಲ್ಲೂ ಟಿಕೆಟ್ಟು ಸಿಕ್ಕುವಂತಿರಲಿಲ್ಲ. ಎಲ್ಲೆಲ್ಲೂ 'ಹೌಸ್‌ಫುಲ್' ಪಟ. ಟಿಕೆಟ್ ಸಿಕ್ಕದೆ ನಿರಾಶರಾಗಿ ಹಿಂತಿರುಗುತ್ತಿದ್ದ ಜನಗಳ ತಂಡ ತಂಡ. ಅಲ್ಲಲ್ಲಿ ನಾಲ್ಕಾರು ಜನ ಧಡಿಯರು ನಿಂತುಕೊಂಡು ಕಾಳಸಂತೆಯ ವ್ಯಾಪಾರವನ್ನೇನೋ ನಡೆಸುತ್ತಿದ್ದರು. ಒಂದಕ್ಕೆರಡು ಬೆಲೆ ಕೊಟ್ಟು ಅವರ ಟಿಕೆಟ್ ಕೊಂಡು ಸಿನಿಮಾ ನೋಡುವ ಆಸೆಯೇನೂ ಸಿದ್ಧರಾಮನಿಗಿರಲಿಲ್ಲ. ಆರೂವರೆ ಗಂಟೆಯ ಆಟಕ್ಕೆ ಹೋಗಬೇಕೆಂದರೆ ಅದೂ ಅಸಾಧ್ಯವೆ. ಎಂಟು ಗಂಟೆಯ ರೈಲಿಗೆ ಮನೆಗೆ ಮರಳಬೇಕು. ಅದನ್ನು ಬಿಟ್ಟರೆ ಬೇರೆ ರೈಲಿಲ್ಲ. ಬೆಂಗಳೂರಿನಲ್ಲಿ ಪರಿಚಿತರ ಮನೆಗಳೂ ಇಲ್ಲ. ರಾತ್ರಿಯನ್ನೆಲ್ಲಿ ಕಳೆಯುವುದು ಈಕೆಯನ್ನು ಕಟ್ಟಿಕೊಂಡು ? ನಿಲ್ದಾಣದ ವೇಟಿಂಗ್ ರೂಮಿನಲ್ಲೇ ? – ಥೇ ! ಅದೆಲ್ಲ ತೊಂದರೆಯೇ ತಕ್ಕಂತೆ ? ಈಗಲೇ ಹೊರಡುವುದೇ ವಾಸಿ ಎಂದುಕೊಂಡು –

'ನನಗಂತೂ ಟಿಕೀಟು ಸಿಕ್ಕೋಹಾಗಿಲ್ಲ, ನೀನೊಬ್ಬಳೇ ಹೋಗಿ ನೋಡಿ ಬರ್ತೀಯಾ ಗಿರಿಜಾ ? ನಾನು ಥೇಟರ್ ಹೊರಗಡೆ ಕಾದಿರ್ತೇನೆ' ಎಂದ.

ಅವಳು ಒಪ್ಪಲಿಲ್ಲ. 'ನಿಮ್ಮನ್ನು ಬಿಟ್ಟು ನಾನೊಬ್ಬಳೇ ನೋಡೋದೆ ! ಏನೂ ಬೇಡ ! ಕಾಡುಗೋಡಿಗೆ ಹೋಗೋಣ ನಡೀರಿ' ಎಂದಳು.

ಅಷ್ಟರಲ್ಲಿ ಹತ್ತಿರದಲ್ಲೆ ಯಾರದೋ ಆರ್ತನಾದ ಕೇಳಿ ಬಂದಿತು. ಅತ್ತ ಹೊರಳಿದರು. ಬಡ ಕೂಲಿಕಾರನೊಬ್ಬನನ್ನು ನಾಲ್ಕು ಜನ ಸೇರಿ ಹೊಡೆಯುತ್ತಿದ್ದುದು ಕಾಣಿಸಿತು. 'ಇಲ್ಲೇ ನಿಂತಿರು ಗಿರಿಜಾ ! ಪಾಪ ! ಅವನನ್ಯಾಕೆ ಹೊಡೆಯುತ್ತಿದ್ದಾರೊ ನೋಡ್ತೇನೆ' ಎಂದು ಹೇಳಿ ಸಿದ್ಧರಾಮ ಗಲಾಟೆ ನಡೆದಿದ್ದಲ್ಲಿಗೆ ಹೋದ.

ಆ ನಾಲ್ಕು ಜನ ಧಡಿಯರಿಂದ ಕೂಲಿಕಾರರನ್ನು ಬಿಡಿಸಿಕೊಂಡು 'ಏನು ಏನಾಯಿತು ? ಯಾಕೆ ಹೊಡೆದಾಟ ?' ಎಂದ.

ಆ ಬಡಪಾಯಿ ಅಳುತ್ತಳುತ್ತ ಹೇಳಿದ.

'ಐದಾಣೆಯ ಒಂದು ಟಿಕೆಟ್ ಎಂಟಾಣೆಗೆ ಕೊಡ್ತೇನೆ ಅಂದರು. ನನ್ನ ಹತ್ತಿರ ಇದ್ದದ್ದೂ ಅಷ್ಟೆ. ಕೊಟ್ಟು ಬಿಟ್ಟೆ. ಈಗ ಟಿಕೆಟ್ಟೂ ಕೊಡಲೊಲ್ಲರು. ದುಡ್ಡಾದರೂ ವಾಪಸು ಮಾಡಿ ಅಂದ್ರೆ ಅದನ್ನು ಕೊಡಲೊಲ್ಲರು.'

ಕಾಳಸಂತೆಯ ಆ ಕಳ್ಳರನ್ನು ಕ್ರುದ್ಧ ದೃಷ್ಟಿಯಿಂದ ನಿಟ್ಟಿಸುತ್ತ ಸಿದ್ಧರಾಮ 'ಹೌದೇನು ? ಈತ ಹೇಳೋದು ನಿಜವೇನು ?' ಎಂದ.

'ಅರೆ ! ನೀನೆಲ್ಲಿಯೋನೋ ಬಂದೆ ಮಹಾರಾಜಾ ! ನಿನ್ನ ಹಾದಿ ಹಿಡಿದುಹೋಗು!' ಎಂದು ಉಪಹಾಸದ ದನಿಯಲ್ಲಿ ಉತ್ತರ ಬಂತು.

'ಒಳ್ಳೇ ಮಾತಿನಿಂದ ಇವನ ಹಣ ಇವನಿಗೆ ವಾಪಸು ಕೊಡ್ತೀರೋ ಇಲ್ಲ, ಪೊಲೀಸರಿಗೆ ತಿಳಿಸಬೇಕೊ ?' ಎಂದ ಸಿದ್ಧರಾಮ ಇನ್ನೂ ಕ್ರುದ್ಧನಾಗಿ.

ಆ ನಾಲ್ಕೂ ಜನರು ಗಹಗಹಿಸಿ ನಕ್ಕುಬಿಟ್ಟು 'ಪೊಲೀಸರಿಗೆ ತಿಳಿಸುತ್ತಾನಂತೆ ಪೊಲೀಸರಿಗೆ ! ನಮ್ಮ ಮಾವನ ಮಕ್ಕಳು ಕಣೋ ಅವರು ! ನಿನ್ನನ್ನೆ ಬೇಕಾದರೆ ಸ್ಟೇಶನ್ನಿಗೆ ಸಾಗಿಸುತ್ತಾರೆ – ಒಂದು ಮಾತು ಹೇಳಿದ್ರೆ. ಸುಮ್ಮನೆ ಹೋಗೋ ನಿನ್ನ ಹಾದಿ ಹಿಡಿದು' ಎಂದರು.

ಸಿದ್ಧರಾಮನಿಗೆ ವಿಪರೀತ ಕೋಪವೇರಿತು. ಮುಷ್ಟಿಯನ್ನು ಮುಂದೆ ಮಾಡಿ ಗರ್ಜಿಸಿದ. 'ಕೊಡ್ತಿರೋ ಇಲ್ಲವೋ ಇವನ ಎಂಟಾಣೆ ?'

ಸರಿ. ಮತ್ತೆ ಹೊಡೆದಾಟಕ್ಕಾರಂಭವಾಯಿತು. ನಾಲ್ಕು ಜನ ಪೈಲ್ವಾನರ ಮುಂದೆ ಒಬ್ಬನ ಆಟ ಎಷ್ಟು ನಡೆದೀತು ? ಮುಖಕ್ಕೆ, ಮೂಗಿಗೆ, ತಲೆಗೆ, ಎದೆಗೆ – ದೇಹದ ಎಲ್ಲ ಕಡೆಗಳಲ್ಲೂ ಬಲವಾದ ಏಟು ಬಿತ್ತು ಸಿದ್ಧರಾಮನಿಗೆ. ಹಣೆಯೊಡೆದು ರಕ್ತ ಬಳಬಳನೆ ಸುರಿಯತೊಡಗಿತು. ನೋಡುತ್ತ ನಿಂತಿದ್ದ ಗಿರಿಜೆ ಗಾಬರಿಗೊಂಡು ಕೂಗತೊಡಗಿದಳು. ಪೊಲೀಸರು ಬಂದರು. ಹೊಡೆದಾಟವನ್ನು ನಿಲ್ಲಿಸಿ, ಸಿದ್ಧರಾಮನನ್ನು ಬಿಡಿಸಿ, ಆ ಪೈಲ್ವಾನರನ್ನು ಬೈದ ಹಾಗೆ ಮಾಡಿ ಹೊರಟುಹೋದರು. ಆ ಕೂಲಿಯವನ ಹಣವೂ ಸಿಕ್ಕಲಿಲ್ಲ. ಸಿದ್ಧರಾಮನ ಪ್ರತಿಭಟನೆಯಿಂದ ಯಾವ ಪ್ರಯೋಜನವೂ ಆಗಲಿಲ್ಲ.

ಕೈವಸ್ತ್ರದಿಂದ ಹಣೆ ಕಟ್ಟಿಕೊಂಡು ಪತ್ನಿಯ ಕೈಹಿಡಿದುಕೊಂಡು ನಿಲ್ದಾಣಕ್ಕೆ ಹೊರಟ ಸಿದ್ಧರಾಮ. ಮೆಜೆಸ್ಟಿಕ್ ಹಿಂದೆ ಹಾಕಿ ಧರ್ಮಾಂಬುಧಿ ಕೆರೆಯಲ್ಲಿ ಹಾದು ಬರುತ್ತಿದ್ದ ಹಾಗೆ ಆತ ಕಂಪಿಸುವ ಕಂಠದಿಂದ ಉದ್ಗಾರ ತೆಗೆದ.

'ಇಂದಿನ ನಮ್ಮ ಸಿನಿಮಾದಲ್ಲಿ ನಾಲ್ಕನೇ ದೃಶ್ಯ ಇದು ಗಿರಿಜಾ ! ಇದಕ್ಕೆ ಕ್ಲೈಮಾಕ್ಸ್ ಅಂತಾರೆ...'

ರೈಲಿನ ಸಮಯವಾಗುವವರೆಗೂ ಕೆರೆಯ ಅಂಗಳದಲ್ಲಿ ಕುಳಿತಿದ್ದು ನಿಲ್ದಾಣಕ್ಕೆ ಬಂದರು. ಟಿಕೆಟ್ ತೆಗೆಯಿಸುವುದಕ್ಕಾಗಿ ಜೇಬಿಗೆ ಕೈಹಾಕಿದ ಸಿದ್ಧರಾಮ. ಹಣದ ಸುಳಿವೇ ಇರಲಿಲ್ಲ ? ಇಳಿದ ಮುಖದಿಂದ ಪತ್ನಿ ನಿಂತಲ್ಲಿಗೆ ಮರಳಿದ.

'ತೆಗೆಸಿದಿರಾ ಟಿಕೆಟ್ಟನ್ನ ?'

'ಇಲ್ಲ.'

'ಯಾಕೆ.'

'ದುಡ್ಡು ಎಲ್ಲೋ ಕಳೆದುಹೋಯಿತು. ಬಹಳ ಹೊಡೆದಾಟ ನಡೆದಿದ್ದಾಗ ಆ ಪೋಕರಿಗಳಲ್ಲಿ ಯಾರೋ ಹಾರಿಸಿರಬೇಕು.'

'ಇನ್ನೇನು ಮಾಡುವುದು ?'

'ಮಾಡೋದೇನು ಬಂತು ? ಉಪವಾಸ ಮಾಡೋದು. ಬೆಳಗ್ಗೆ ಬೇಗನೆ ಎದ್ದು ಹದಿನೈದು ಮೈಲು ನಡೆದುಕೊಂಡು ಹೋಗೋದು.'

'ರಾತ್ರಿ ಮಲಗುವದಾದರೂ ಎಲ್ಲಿ ?'

'ಇದೆಯಲ್ಲ ಅನಾಥರ ಧರ್ಮಛತ್ರ – ಆ ಚಿಕ್ಕಲಾಲ್‌ಬಾಗ್...'

'ಅಲ್ಲಿ ? ನಾವು ?'

'ಯಾಕೆ ಹೀಗೆ ದಿಗಿಲುಗೊಳ್ಳಿ? ನಮ್ಮಂತೇ ಎಷ್ಟೋ ಜನ ಮಲಗೋದಿಲ್ಲವೆ? ಹೆಂಗಸರು, ಗಂಡಸರೆಲ್ಲಾ ? ದುಡ್ಡಿದ್ದವರೇನೋ ಹೋಟಲುಗಳಿಗೆ ಹೋಗುತ್ತಾರೆ. ದುಡ್ಡಿಲ್ಲದವರೆಲ್ಲ ಇನ್ನೆಲ್ಲಿಗೆ ಹೋಗೋದು ? ಚಿಕ್ಕಲಾಲ್‌ಬಾಗಿಗೆ. ಹೆದರಿಕೆಯೇನು ನಿನಗೆ ?'

'ಹೆದರಿಕೆಯೇನು ? ನೀವು ಜೊತೆಗಿದ್ದಾಗ ?'

'ಸರಿ. ಹಾಗಾದರೆ ಬಾ !'

ಮತ್ತೆ ನಿಲ್ದಾಣವನ್ನು ಬಿಟ್ಟು ಹೊರಟರು. ಮೆಟ್ಟಿಲು ಇಳಿಯುತ್ತಿದ್ದ ಹಾಗೆ ಎದುರಿನಲ್ಲಿ ದೇವಮ್ಮನೂ ಅವಳ ಪತಿಯೂ ಕಾಣಿಸಿಕೊಂಡರು.

'ಸಿನಿಮಾ ನೋಡಿದ್ದಾಯ್ತೇನು ಗಿರಿಜಮ್ಮ ?' ದೇವಮ್ಮನೇ ಮಾತನಾಡಿಸಿದಳು.

ಅವಳೊಂದಿಗೆ ಮಾತನಾಡುವ ಮನಸ್ಥಿತಿಯಲ್ಲಿಲ್ಲದಿದ್ದರೂ ಸಹ ಗಿರಿಜಾ ಉತ್ತರವಿತ್ತಳು.

'ಹೂ. ನೋಡಿದೆವು !'

'ಊರಿಗೆ ಬರೋದಿಲ್ಲವೇನು ಮತ್ತೆ ಎಲ್ಲಿ ಹಿಂದಿರುಗುತ್ತಿದ್ದೀರಲ್ಲ ?'

'ಲಾಲ್‌ಬಾಗಿಗೆ ಹೋಗಿಬರ್ತೇವೆ – ನೀವು ಹೊರಡಿ' ಎಂದು ಹೇಳಿ ಗಿರಿಜಾ ನಿಲ್ಲದೆ ಮುಂದುವರಿದಳು.

'ಲಾಲ್‌ಬಾಗಿಗೆ ! ಅಂತೂ ಮಜಾ ಐತಪ್ಪ ನಿಮ್ಮಿಬ್ಬರದೂ ! ಸಾಗಲಿ ಸಾಗಲಿ !' ಎಂದು ಹಾಸ್ಯ ಮಾಡಿ ದೇವಮ್ಮ ಗಂಡನ ಕಡೆ ತಿರುಗಿ ನಕ್ಕಳು.

'ನಾವು ಹೋಗೋದು ದೊಡ್ಡ ಲಾಲ್‌ಬಾಗಿಗಲ್ಲ – ಚಿಕ್ಕಲಾಲ್‌ಬಾಗಿಗೆ – ಇಂದಿನ ನಮ್ಮ ಸಿನಿಮಾದ ಕೊನೆಯ ದೃಶ್ಯಕ್ಕೆ – ಅನ್ನೋದು ಅವಳಿಗೇನು ತಿಳಿದೀತು ಗಿರಿಜಾ. ಬಾ, ಬೇಗ ಬೇಗ ಹೆಜ್ಜೆಯಿಡು' ಎಂದ ಸಿದ್ಧರಾಮ.

ಗಿರಿಜಾ ಹೆಜ್ಜೆ ಹಾಕತೊಡಗಿದಳು. ಚಿಕ್ಕ ಲಾಲ್‌ಬಾಗಿಗೆ; ಅಲ್ಲ–ನಿಜ ಜೀವನದ ಕಡೆಗೆ !

*(ಕನ್ನಡ ಸಾಹಿತ್ಯ ಪರಿಷತ್ತಿನ 'ಅತ್ಯುತ್ತಮ ಸಣ್ಣಕತೆಗಳು' ೨೦೧೧ರ ಪ್ರಕಟಣೆಯಿಂದ ಆಯ್ದದ್ದು)*

**ಬಸವರಾಜ ಕಟ್ಟೀಮನಿ**

# ಸಂಬಂಧ ಮತ್ತು ಸತ್ಯ

ಇದು ರಷ್ಯಾದ ಕ್ರಾಂತಿಯ ಶತಮಾನದ ವರುಷ. ೧೯೧೭ರಲ್ಲಿ ಸಂಭವಿಸಿದ ರಷ್ಯಾದ ಕ್ರಾಂತಿ ಹಿಂದಿನ ಶತಮಾನಗಳ ಪ್ರಭುತ್ವಗಳ ದಬ್ಬಾಳಿಕೆಯನ್ನು ಅಂತ್ಯಗೊಳಿಸಿ, ಹೊಸ ರಾಜಕೀಯ ಮತ್ತು ಸಾಮಾಜಿಕ ಬದಲಾವಣೆಗಳಿಗೆ ಚಾಲನೆ ಕೊಡುವ ಮೂಲಕ, ಸೋವಿಯತ್ ಒಕ್ಕೂಟದ ರಚನೆಗೆ ಕಾರಣವಾಯಿತು. ನಂತರದ ಶತಮಾನದ ಆಗುಹೋಗುಗಳು ಈಗ ಇತಿಹಾಸ. ಈ ಕ್ರಾಂತಿಯ ಹಿನ್ನೆಲೆಯಲ್ಲಿ ರಚಿತವಾದ ಮ್ಯಾಕ್ಸಿಂ ಗಾರ್ಕಿಯ 'ತಾಯಿ' (ಮದರ್) ಒಂದು ಶ್ರೇಷ್ಠ ಕಾದಂಬರಿ. ನಾನು ವಿದ್ಯಾರ್ಥಿಯಾಗಿದ್ದ ದಿನಗಳಲ್ಲಿ ಓದಿದ ನೆನಪು ಮಸುಕು ಮಸಕಾಗಿ ಉಳಿದು ಬಂದಿತ್ತು; ಈಗ ಮತ್ತೊಮ್ಮೆ ಓದಿದೆ. ಅಸಮಾನತೆ, ಭ್ರಷ್ಟಾಚಾರ, ಶೋಷಣೆ, ಕ್ರೌರ್ಯ ಮೊದಲಾದ ಸಾಮಾಜಿಕ ಸಂದರ್ಭದ ನಗ್ನ ಚಿತ್ರಣ ಮತ್ತು ಅವುಗಳ ವಿರುದ್ಧದ ಕೆಚ್ಚಿನ ಹೋರಾಟ ಕಾದಂಬರಿಯ ವಸ್ತು. ಅದೆಲ್ಲಾ ಇಂದಿಗೂ ತೀರಾ ಪ್ರಸ್ತುತ. ಕಾದಂಬರಿಯಲ್ಲಿ ಹತ್ತುಹಲವಾರು ಮಹತ್ವದ ವಿಚಾರಗಳು ಬಂದುಹೋಗುತ್ತವೆ. ಅಂತಹ ಒಂದು ಸನ್ನಿವೇಶ ಮತ್ತು ಅಲ್ಲಿನ ಸಂಭಾಷಣೆಗಳ ಹಿನ್ನೆಲೆಯಲ್ಲಿ ನಮ್ಮ ಪ್ರಸ್ತುತ ಸಮಾಜದ ಅಧಃಪತನವನ್ನು ವಿಶ್ಲೇಷಿಸಬಹುದಾಗಿದೆ.

ಕ್ರಾಂತಿಕಾರಿಗಳ ವಿಚಾರಣೆ ನಡೆದು ಅವರಿಗೆ ಗಡೀಪಾರು ಶಿಕ್ಷೆ ವಿಧಿಸಿದ ನಂತರದಲ್ಲಿ, ಅವರ ಸಂಬಂಧಿಗಳು ತಮ್ಮತಮ್ಮಲ್ಲೇ ಮಾತುಕತೆಯಾಡುತ್ತಿರುವ ಸಂದರ್ಭ. ಸಾಶಾ ಕ್ರಾಂತಿಕಾರಿಯೊಬ್ಬನ ಪ್ರೇಯಸಿ, ಸಿಜೋವ್ ಇನ್ನೊಬ್ಬ ಕ್ರಾಂತಿಕಾರಿಯ ಚಿಕ್ಕಪ್ಪ. ಸಾಶಾ ತನ್ನನ್ನು ಸಿಜೋವ್‌ಗೆ ಪರಿಚಯಿಸಿಕೊಳ್ಳುತ್ತಾಳೆ; ಪ್ರತಿಯಾಗಿ ಆತ ಅವಳ ತಂದೆಯ ಬಗ್ಗೆ ವಿಚಾರಿಸುತ್ತಾನೆ. "ನನಗೆ ತಂದೆ ಇಲ್ಲ" ಎನ್ನುವುದಾಗಿ ಆಕೆ ಹೇಳಿದಾಗ, "ಅಂದರೆ, ಅವನು ತೀರಿಕೊಂಡಿದ್ದಾನೆಯೆ ?" ಎಂದು ಸಿಜೋವ್ ಪ್ರಶ್ನಿಸುತ್ತಾನೆ. "ಇಲ್ಲ, ಬದುಕಿದ್ದಾನೆ. ಅವನೊಬ್ಬ ಜಮೀನುದಾರ, ಒಂದು ಪ್ರಾಂತ್ಯದ ಮುಖ್ಯಸ್ಥ. ಕೃಷಿಕರನ್ನು ದೋಚುತ್ತಾನೆ ಮತ್ತು ಅವರನ್ನು ಕ್ರೂರವಾಗಿ ಹಿಂಸಿಸುತ್ತಾನೆ. ಅಂತಹ ಮನುಷ್ಯನೊಬ್ಬ ನನ್ನ ತಂದೆ ಎಂದು ಹೇಳಿಕೊಳ್ಳಲಾರೆ" ಎಂಬುದಾಗಿ ಸಾಶಾ ವಿವರಿಸುತ್ತಾಳೆ. "ನಿನ್ನ ತಂದೆಯ ಬಗ್ಗೆ ನೀನು ಕಠಿಣವಾಗಿದ್ದೀಯ" ಎನ್ನುವ ಅಭಿಪ್ರಾಯವನ್ನು ಸಿಜೋವ್ ವ್ಯಕ್ತಪಡಿಸುತ್ತಾನೆ. ಅದಕ್ಕೆ ಪ್ರತಿಯಾಗಿ, "ನಿನ್ನ ಮಗ ಒಬ್ಬ ನೀತಿಗೆಟ್ಟವನಾಗಿದ್ದು, ಜನರಿಗೆ ಕಂಟಕನಾಗಿದ್ದು, ನಿನಗೆ ಜಿಗುಪ್ಸೆ ತರುವಂತಿದ್ದರೆ, ನೀನು ನಿನ್ನ ಮಗನ ಬಗ್ಗೆ ಇದೇ ರೀತಿಯ ನಿಲುವು ತಾಳುತ್ತಿರಲಿಲ್ಲವೇ" ಎಂಬುದಾಗಿ ಸಾಶಾ ಸಿಜೋವನಿಗೆ ಸವಾಲು ಹಾಕುತ್ತಾಳೆ. ಸಿಜೋವ್ ಸಾಶಾಳ ಮಾತನ್ನು ಒಪ್ಪಿಕೊಳ್ಳುತ್ತಾನೆ; ಅಂತಹ ವ್ಯಕ್ತಿಯೊಬ್ಬನನ್ನು ಮಗನೆಂದು ಸ್ವೀಕರಿಸುವುದು ಆಗದು ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾನೆ. "ಅಂದಮೇಲೆ, ಮಗನಿಗಿಂತ ನಿನಗೆ ನ್ಯಾಯ ಹೆಚ್ಚು ಆಪ್ಯಾಯಮಾನವಾದದ್ದು, ಅಂತೆಯೇ ನನಗೂ ಸಹ ನನ್ನ ತಂದೆಗಿಂತ ಸತ್ಯವೇ ಹೆಚ್ಚು ಆತ್ಮೀಯವಾದದ್ದು" ಎಂಬ ಮಾತನ್ನು ಸಾಶಾ ಹೇಳುತ್ತಾಳೆ.

ಈ ಮೇಲಿನ ಸಂದರ್ಭ ಮತ್ತು ಸಂಭಾಷಣೆಯಲ್ಲಿ ಗಾರ್ಕಿ ಸಂಬಂಧ ಮತ್ತು ಸತ್ಯ (ನ್ಯಾಯ)ಗಳ ನಡುವಣ ತಾಕಲಾಟದಲ್ಲಿ, ನ್ಯಾಯದ ಪರವಾಗಿ ನಿಲ್ಲುತ್ತಾನೆ. ಅನ್ಯಾಯದ ಪರವಾಗಿರುವ ಸಂಬಂಧಗಳನ್ನು ತಿರಸ್ಕರಿಸುವ ಮೂಲಕ, ಗಾರ್ಕಿ ಸತ್ಯದ ಪರಮೋಚ್ಚತೆಯನ್ನು ಎತ್ತಿಹಿಡಿಯುತ್ತಾನೆ. ಗಾರ್ಕಿಯ ದೃಷ್ಟಿಯಲ್ಲಿ ನ್ಯಾಯ ಎಂಬುದು ವೈಯ್ಯಕ್ತಿಕ ಸಂಬಂಧಗಳನ್ನು ಮೀರಿದ್ದು; ಬಾಂಧವ್ಯಗಳ ಸೆಳೆತಕ್ಕೆ ಸಿಕ್ಕಿ ನ್ಯಾಯ ಸಾಯಬಾರದು. ಕಾದಂಬರಿಯ ಅಂತ್ಯದಲ್ಲಿ ತಾಯಿ ಪೊಲೀಸರ ಕೈಗೆ ಸಿಕ್ಕಿಬೀಳುತ್ತಾಳೆ; ಅವರ ಅಮಾನವೀಯ ನಡವಳಿಕೆಗೆ ಗುರಿಯಾದ ಸಂಕಷ್ಟದ ಗಳಿಗೆಯಲ್ಲೂ, "ನೆತ್ತರಿನ ಕೋಡಿ ಹರಿದರೂ ಸತ್ಯ ಅದರಲ್ಲಿ ಮುಳುಗಿಹೋಗಲಾರದು" ಎಂಬ ಮಹತ್ವದ ಮಾತನ್ನು ಗಾರ್ಕಿ ಆ ತಾಯಿಯ ಮಾತುಗಳ ಮೂಲಕ ಪ್ರತಿಪಾದಿಸುತ್ತಾನೆ.

ಗಾರ್ಕಿ ಸಮರ್ಥಿಸುವ ಮೇಲಿನ ಒಂದು ಮೌಲಿಕ ನಿಲುವು ನಮಗೆ ಎಷ್ಟು ಹೊರತಾದದ್ದು, ಎಷ್ಟು ಅಪ್ರಸ್ತುತ ಎನ್ನುವ ವಾಸ್ತವ ನಮ್ಮ ದಿನನಿತ್ಯದ ಆಗುಹೋಗುಗಳಲ್ಲಿ ಪದೇ ಪದೇ ನಮ್ಮ ಗಮನಕ್ಕೆ ಬಂದಾಗ್ಯೂ, ಅದು ನಮ್ಮ ಪ್ರಜ್ಞೆಯನ್ನು ತಟ್ಟುವುದೇ ಇಲ್ಲ. ಇದಕ್ಕೆ ನಿದರ್ಶನವಾಗಿ ಭ್ರಷ್ಟಾಚಾರ ಮತ್ತು ಅನೈತಿಕ ವ್ಯವಹಾರಗಳಲ್ಲಿ ತೊಡಗಿಸಿಕೊಂಡಿರುವ ಅಧಿಕಾರಿಗಳು ಮತ್ತು ರಾಜಕಾರಣಿಗಳನ್ನು ಹೇಗೆ ಅವರ ಬಂಧು ಬಳಗದವರು ಸಮರ್ಥಿಸಿಕೊಳ್ಳುತ್ತಾರೆ ಎನ್ನುವುದನ್ನು ಉಲ್ಲೇಖಿಸಬಹುದು. ಮಂತ್ರಿಯೊಬ್ಬನ ಮಗ ಯಾ ಸಂಬಂಧಿ ಯಾವುದೋ ಗುರುತರ ಆಪಾದನೆಯಲ್ಲಿ ಸಿಕ್ಕಿಕೊಂಡಾಗ ಅವನನ್ನು ರಕ್ಷಿಸಲು ಯಾವ ಬಗೆಯ ಕುತಂತ್ರಗಳನ್ನು ಬಳಸುತ್ತಾರೆ, ಹೇಗೆ ತಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಳ್ಳುತ್ತಾರೆ ಎನ್ನುವುದು ಇಂದು ಜಗಜ್ಜಾಹೀರಾಗಿರುವ ಸಂಗತಿ. ಈ ಬಗೆಯ ಪಕ್ಷಪಾತ ನಿಲುವು ಕೇವಲ ಸಂಬಂಧಿಗಳಿಗೆ ಮಾತ್ರವೇ ಸೀಮಿತವಾಗುವುದಿಲ್ಲ; ಒಂದು ಜಾತಿ ಅಥವಾ ಪಕ್ಷ ತನ್ನ ಸದಸ್ಯರ ರಕ್ಷಣೆಗೆ ಇದೇ ಬಗೆಯ ನೀತಿಯನ್ನು ಅನುಸರಿಸುವ ಮೂಲಕ ನ್ಯಾಯವನ್ನು ತಿರುಚಿ, ಸತ್ಯವನ್ನು ಸಾಯಿಸುವ ಅಪಚಾರ ನಿರಂತರವಾಗಿ ನಡೆಯುತ್ತಲೇ ಇರುತ್ತದೆ.

ನ್ಯಾಯವನ್ನು ತಿರುಚಿ, ಸತ್ಯವನ್ನು ಸಾಯಿಸಿ ಬಂಧುಗಳನ್ನು ರಕ್ಷಿಸುವ ಸ್ವಾರ್ಥ ಸಹಜವಾದದ್ದೆ. ಆದರೆ ಸಮಾಜ – ಅಂದರೆ ಬುದ್ಧಿಜೀವಿಗಳು ಎಂದು ಹಣೆಪಟ್ಟಿ ತೊಟ್ಟವರು, ಮಾಧ್ಯಮಗಳು, ಸಂಘ ಸಂಸ್ಥೆಗಳು – ಇಂತಹ ಸಂದರ್ಭಗಳಲ್ಲಿ ನ್ಯಾಯದ ಪರವಾಗಿ ಧ್ವನಿ ಎತ್ತುವುದು, ನಡೆದುಕೊಳ್ಳುವುದು, ಸಾಮಾಜಿಕ ಜವಾಬ್ದಾರಿಯ ನೆರವೇರಿಕೆಯಾಗುತ್ತದೆ.

**ಹೆಚ್. ಎಸ್. ಈಶ್ವರ**

"ಉತ್ತುಂಗ", ಹೆಚ್. ಐ. ಜಿ. ೧೧, ಕೆ. ಎಚ್. ಬಿ. ಕಾಲೋನಿ
ಮೊದಲ ಹಂತ, ಬಸವೇಶ್ವರನಗರ, ಬೆಂಗಳೂರು – ೫೬೦ ೦೭೯

# ಅಕ್ಟೋಬರ್ ಕ್ರಾಂತಿ ಭರವಸೆಯ ಹೊಸ ಅಂಕುರ



ಫ್ರೆಂಚ್ ಕ್ರಾಂತಿಯನ್ನು ಆಧರಿಸಿ ಬರೆದ ಚಾರ್ಲ್ಸ್ ಡಿಕನ್ಸ್‌ನ ಪ್ರಖ್ಯಾತ ‘ಎರಡು ನಗರಗಳ ಕಥೆ’ ಶುರುವಾಗುವುದು ಹೀಗೆ: “ಅದು ಅತ್ಯುತ್ತಮ ಸಮಯವಾಗಿತ್ತು, ಅದು ಕೆಟ್ಟ ಸಮಯವೂ ಆಗಿತ್ತು... ಇದು ಬೆಳಕಿನ ಕಾಲ, ಇದು ಕತ್ತಲೆಯ ಕಾಲ; ಇದು ಭರವಸೆಯ ವಸಂತ, ಇದು ಹತಾಶೆಯ ಶಿಶಿರ.” ಈ ಲೇಖನ, ಅಕ್ಟೋಬರ್ ಕ್ರಾಂತಿಯ ಪರಿಣಾಮಗಳ ಬಗ್ಗೆ ಹೇಳುವ ಒಂದು ಪ್ರಯತ್ನ.

ಫ್ರಾನ್ಸಿನ ೧೭೮೯ರ ಕ್ರಾಂತಿಯ ಸುಮಾರು ೧೩೦ ವರ್ಷಗಳ ನಂತರ ಬೋಲ್ಶೆವಿಕ್ ಕ್ರಾಂತಿ ನಡೆಯಿತು. ಅದು ಬದುಕುಳಿಯುವುದೆಂಬ ಭರವಸೆ ಕೇವಲ ಕೆಲವು ಮಂದಿಗೆ ಮಾತ್ರ ಇತ್ತು. ಈ ಆಳವಾದ ಕಾಳಜಿಯ ಬಗ್ಗೆ, ಅಕ್ಟೋಬರ್ ೧೯೧೭ರಲ್ಲಿ, ಲೆನಿನ್ನನು ತನ್ನ ಲೇಖನ ‘ಬೋಲ್ಶೆವಿಕರು ಅಧಿಕಾರ ಉಳಿಸಿಕೊಳ್ಳುವರೇ ?’ದಲ್ಲಿ ಬರೆದದ್ದು ಈ ರೀತಿಯಲ್ಲಿ: “ಇವರು ಖಂಡಿತ ಅಧಿಕಾರವನ್ನು ಸ್ವೀಕರಿಸಬೇಕು. ಅದನ್ನವರು ಉಳಿಸಿಕೊಳ್ಳುವರೇ ಇಲ್ಲವೇ ಎಂಬುದು, ಮುಂಬರಲಿರುವ ಕ್ಲಿಷ್ಟ ಪರಿಸ್ಥಿತಿಯನ್ನು ಹೇಗೆ ಎದುರಿಸುವರೆಂಬುದರ ಮೇಲೆ ನಿರ್ಧಾರಗೊಳ್ಳುತ್ತದೆ.”

ಇದು ಬೆಳಕಿನ ಕಾಲವನ್ನು ಆಹ್ವಾನಿಸುವ ಕರೆಯಾಗಿತ್ತು. ಆದರೆ, ಕತ್ತಲೆಯೂ ಹಿಂಬಾಲಿಸಿತು.

ಬ್ರೆಸ್ಟ್–ಲಿಟೋವ್‌ಸ್ಕ್ ಒಪ್ಪಂದ ಜರ್ಮನಿಯೊಂದಿಗೆ ಯುದ್ಧವನ್ನೇನೋ ನಿಲ್ಲಿಸಿತು. ಆದರೆ, ಕ್ರಾಂತಿಯ ಮುನ್ನ ಮಿತ್ರ ದೇಶಗಳಾಗಿದ್ದ (ಝಾರನ ರಷ್ಯಾ), ಪಶ್ಚಿಮದ ಶಕ್ತಿಯುತ ದೇಶಗಳು, ಈಗ ಶತ್ರುಗಳಾದವು. ಹುಟ್ಟಿನಿಂದಲೇ ಸೈದ್ಧಾಂತಿಕ ಶತ್ರುಗಳಾದ ಇವರು, ಈಗ ಮಿಲಿಟರಿ ಶತ್ರುಗಳೂ ಆದರು. ಜೊತೆಗೆ, ತಮ್ಮದೇ ಶೈಲಿಯ ಪ್ರತಿ ಕ್ರಾಂತಿಯನ್ನು ಪಶ್ಚಿಮ ದೇಶಗಳು ಪ್ರೇರೇಪಿಸಿ ಸಹಾಯ ಮಾಡಿದವು. ಅದರ ಮುಂಚೂಣಿಯಲ್ಲಿ ಕೋಲ್ಚಾಕ್ ಮತ್ತು ಡೆನಿಕಿನ್ ಇದ್ದರು. ಕೊನೆಗೆ, ಇವರನ್ನು ಕಾರ್ಮಿಕ ವರ್ಗದ ಯುವಕರ ‘ಕೆಂಪು ಸೈನ್ಯ’ ಸೋಲಿಸಿತು.

ಶತ್ರುವು ಕ್ರಾಂತಿಕಾರಿಗಳಿಂದ ಸೋಲಿಸಲ್ಪಟ್ಟರೂ, ರಷ್ಯಾದ ಆರ್ಥಿಕ ಪರಿಸ್ಥಿತಿ ಕುಸಿದುಬಿದ್ದಿತು.

ಬ್ರೆಸ್ಟ್–ಲಿಟೋವ್‌ಸ್ಕ್ ಒಪ್ಪಂದದ ನಂತರ ಪಶ್ಚಿಮ ದೇಶಗಳು ಸೋವಿಯತ್ ರಷ್ಯಾದ ಮೇಲೆ ಆರ್ಥಿಕ ದಿಗ್ಬಂಧನವನ್ನು ಹೇರಿದವು. ಇದರಿಂದ, ಆರ್ಥಿಕವಾಗಿ ಹಿಂದುಳಿದ ದೇಶವಾದ ರಷ್ಯಾ, ಪಶ್ಚಿಮ ದೇಶಗಳಿಂದ ಯಾವ ಯಂತ್ರವನ್ನೂ ಆಮದು ಮಾಡಿಕೊಳ್ಳಲಾಗಲಿಲ್ಲ. ತಮ್ಮಲ್ಲಿದ್ದ ಕಚ್ಚಾ ಪದಾರ್ಥಗಳ ರಫ್ತು ಸಹ ಸಾಧ್ಯವಾಗಲಿಲ್ಲ. ಈ ಪರಿಸ್ಥಿತಿಯಲ್ಲಿ ಸೋವಿಯತ್ ಶಕ್ತಿ ಬೇಗನೇ ಕುಸಿಯುವುದೆಂದು ಎಲ್ಲರಿಗೂ ಅನಿಸಿತು.

ಈ ಕ್ಲಿಷ್ಟ ಪರಿಸ್ಥಿತಿಯ ಬಗ್ಗೆ ೧೯೨೦ನೇ ಇಸವಿಯಲ್ಲಿ ನಿಕೋಲಾಯ್ ಬುಖಾರಿನ್ ಅವರ ಹೇಳಿಕೆ ಹೀಗಿತ್ತು: ‘ಎಲ್ಲ ಕ್ರಾಂತಿಗಳಂತೆಯೇ, ಕಮ್ಯುನಿಸ್ಟ್ ಕ್ರಾಂತಿಯೂ, ಉತ್ಪಾದಕ ಶಕ್ತಿಗಳ ದುರ್ಬಲತೆಯಿಂದ ಬಳಲುತ್ತಿದೆ.’ ಆದರೆ ಪ್ರಗತಿಯ ಹಾದಿಯೇನು?

ಈ ಆರ್ಥಿಕ ಬಿಕ್ಕಟ್ಟಿನ ಪರಿಣಾಮ ಹೇಗಿತ್ತೆಂದು ನೋಡೋಣ. ಅಂಕೆ – ಸಂಖ್ಯೆಗಳಿಂದ ವಿಶ್ಲೇಷಣೆ ಮಾಡುವ ಮೊದಲು ಗಮನಿಸಬೇಕಾದ ವಿಷಯವಿದು. ಯಾವುದೇ ಯುದ್ಧದ ಪರಿಣಾಮವು ಒಂದು ವಿಷಯದಿಂದ ಮತ್ತೊಂದಕ್ಕೆ ಹಬ್ಬಿಕೊಳ್ಳುತ್ತದೆ. ಜನರ ಕಷ್ಟಗಳಿಗೆ ಮಿತಿಯೇ ಇರಲಿಲ್ಲ. ಉದ್ಯಮಗಳ ಉತ್ಪತ್ತಿಯು, ಉದಾಹರಣೆಗೆ, ಜವಳಿಗಳು ದಾಸ್ತಾನುಗಳಲ್ಲಿ ಕೊಳೆಯುತ್ತಿದ್ದವು. ಅವುಗಳನ್ನು ಕೊಳ್ಳಲು ಹಣವಿರಲಿಲ್ಲ. ೧೯೧೨ರಿಂದ ೧೯೧೯, ಈ ಏಳು ವರ್ಷಗಳಲ್ಲಿ, ಉದ್ಯಮಗಳ ಉತ್ಪಾದನೆಯು ಶೇಕಡ ೧೮ರಷ್ಟು ಇಳಿಮುಖವಾಗಿತ್ತು.

**ಡಾ॥ ಎಸ್. ಚಟರ್ಜಿ**

ಕೆಲವು ಸ್ಥಳಗಳಲ್ಲಿ ಉದ್ದಿಮೆಗಳು ಪೂರ್ತಿಯಾಗಿ ನಾಶಗೊಂಡವು. ಕಬ್ಬಿಣದ ಉದ್ದಿಮೆಗಳಲ್ಲಿ ಉತ್ಪಾದನೆಯು ೧೯೧೩ನೆಯ ಇಸವಿಗೆ ಹೋಲಿಸಿದರೆ, ೩% ಗಿಂತಲೂ ಕಡಿಮೆಯಿತ್ತು. ಬಹಳಷ್ಟು ಉದ್ದಿಮೆಗಳಲ್ಲಿ ೧೦%ರಿಂದ ೨೦% ಉತ್ಪತ್ತಿಯಾಗುತ್ತಿತ್ತು. ಕೆಲವೊಂದು ಉದ್ದಿಮೆಗಳಲ್ಲಿ ಮಾತ್ರ, ಉದಾಹರಣೆಗೆ ಕಲ್ಲಿದ್ದಲು ಮತ್ತು ಜವಳಿ, ಉತ್ಪತ್ತಿ ೨೪% ಇದ್ದು, ತೈಲ ಉತ್ಪಾದನೆ ೪೧% ತಲುಪಿತ್ತು. ಆರ್ಥಿಕ ಬಿಕ್ಕಟ್ಟಿನಿಂದಲೂ, ಪಶ್ಚಿಮ ದೇಶಗಳ ನಿರ್ಬಂಧನೆಯಿಂದಲೂ, ರಷ್ಯಾ ದೇಶವು ಕುಸಿದುಹೋಗಲು ಸಿದ್ಧವಾಗಿತ್ತು. ಟರ್ಕಿಸ್ತಾನ್‌ನಿಂದ ಬರುವ ಹತ್ತಿ, ಎಸ್ತೋನಿಯಾ ಮತ್ತು ಲಿಥುವೇನಿಯಾದ ಅಗಸೆಕಾಳು, ಬಾಕುವಿನ ತೈಲ ಮತ್ತು ಉಕ್ರೇನ್‌ನ ಕಬ್ಬಿಣದ ಅದಿರು, ಎಲ್ಲವೂ ನಿಂತುಹೋದವು. ಇವೆಲ್ಲವೂ ಮೊದಲು ಆ ದೇಶದ ರಾಜನ ಅಧಿಕಾರದಲ್ಲಿದ್ದು, ಜರ್ಮನಿಯ ಜೊತೆ ಆದ ಬ್ರೆಸ್ಟ್–ಲಿಟೋವ್‌ಸ್ಕ್ ಒಪ್ಪಂದದ ಕಾರಣ ಅವನ್ನು ಬಿಟ್ಟುಕೊಡಬೇಕಾಯಿತು.

ತೈಲ ಬಿಕ್ಕಟ್ಟು ಬರೀ ಉದ್ದಿಮೆಗಳ ಮೇಲೆ ಮಾತ್ರವಲ್ಲದೆ, ಜನಜೀವನವನ್ನೂ ಕಷ್ಟಕರವಾಗಿಸಿತು. ಚಳಿಗಾಲದಲ್ಲಿ ತಾಪಮಾನವು ೦ ಡಿಗ್ರಿ , ೪ ಅಥವಾ ೫ ತಿಂಗಳು ಹೀಗೇ ಇರುತ್ತದೆ. ಇತಿಹಾಸ ಸಂಶೋಧಕ



ಇ. ಎಚ್. ಕಾರ್ ಹೇಳಿದಂತೆ '೧೯೧೮-೧೯ ಮತ್ತು ೧೯೧೯-೨೦ ಈ ಇಸವಿಗಳ ಚಳಿಗಾಲದಲ್ಲಿ, ಹಸಿವಿಗಿಂತಲೂ ಚಳಿಯೇ ಜನರ ಸಂಕಟಕ್ಕೆ ಕಾರಣವಾಗಿತ್ತು'.

೧೯೨೧ನೇ ಇಸವಿಯ ಮೇ ತಿಂಗಳಲ್ಲಿ ಲೆನಿನ್ನರು ಹೇಳಿದ್ದು ಹೀಗೆ :

'ಕಾರ್ಮಿಕ ವರ್ಗದವರು ರೈತರ ನಾಯಕರಾಗಿದ್ದಾರೆ.' ಆದರೆ, ಈ ಪರಿಸ್ಥಿತಿಯಲ್ಲಿ ಕಾರ್ಮಿಕರ ಸಂಖ್ಯೆ ಎಷ್ಟು ? ಅವರ ಸಂಖ್ಯೆ ಕಡಿಮೆಯಾಗುತ್ತಲೇ ಇತ್ತು. ೧೯೧೭ರಲ್ಲಿ ೧೦೦% ಇದ್ದಕಡೆ, ೧೯೧೯ರಲ್ಲಿ ೭೬% ಮಾತ್ರವಿದ್ದು, ಕಟ್ಟಡ ನಿರ್ಮಾಣ ಕಾರ್ಯದಲ್ಲಿ ೬೬%, ರೈಲು ಉದ್ದಿಮೆಯಲ್ಲಿ ಬರೀ ೬೩%. ರೈಲು ಉದ್ಯಮದಲ್ಲಿನ ಈ ದೊಡ್ಡ ಕುಸಿತವು ತುಂಬ ಆತಂಕಕಾರಿಯಾಗಿತ್ತು.

ಈ ಇಳಿಮುಖಕ್ಕೆ ಒಂದು ಕಾರಣವೆಂದರೆ ರಷ್ಯನ್ ಕಾರ್ಮಿಕರ ಮೂಲಭೂತ ಸ್ವಭಾವ. ಅವರ ಕೈಗಾರಿಕಾ ಶಿಸ್ತು ಅಷ್ಟೊಂದು ಕಠಿಣವಾಗಿರಲಿಲ್ಲ. ಸಾಧಾರಣವಾಗಿ ರಷ್ಯನ್ ಕಾರ್ಮಿಕರು ರೈತಕುಟುಂಬದಿಂದ ಬಂದವರು. ಸುಗ್ಗಿಯ ಸಮಯದಲ್ಲಿ ಅವರೆಲ್ಲರೂ ಕಾರ್ಖಾನೆಯನ್ನು ಬಿಟ್ಟು, ಸುಗ್ಗಿಯ ನಂತರ ಬಂದು ಸೇರುವ ಸ್ವಭಾವದವರು. ಕಾರ್ಮಿಕ ಒಕ್ಕೂಟದ ಶಿಸ್ತು ಅವರಿಗಿರಲಿಲ್ಲ. ಈ ಅಭ್ಯಾಸವು ಕ್ರಾಂತಿಯ ನಂತರವೂ ಮುಂದುವರಿಯಿತು.

ಲೆನಿನ್ ೧೯೨೨ರಲ್ಲಿ ಕೊಮಿಂಟರ್ನ್‌ನ ೪ನೇ ಸಮಾವೇಶದಲ್ಲಿ ಹೇಳಿದ್ದು ಇದು : 'ಕೃಷಿ ಆರ್ಥಿಕತೆ ಇರುವ ರಷ್ಯಾವನ್ನು ಬರೀ ಒಂದು ಒಳ್ಳೆಯ ಸುಗ್ಗಿ ಕಾಪಾಡುವುದಿಲ್ಲ'. ಆದರೆ, ಕಾರ್ಮಿಕರನ್ನು ಕೆಲಸಕ್ಕೆ ಮತ್ತೆ ತರಲು ಏನು ಮಾಡಬೇಕು ? ಇಲ್ಲಿ, ಕಾರ್ಮಿಕವರ್ಗದ ರಾಜ್ಯ ಕಠಿಣ ಕ್ರಮ ಕೈಗೊಳ್ಳಬೇಕು. 'ಕೆಂಪು ಸೈನ್ಯ'ದ ಸ್ಥಾಪನೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದ ಲಿಯಾನ್ ಟ್ರಾಟ್ ಹೇಳಿದ್ದು : 'ಕಾರ್ಮಿಕ ಮಿಲಿಟರೀಕರಣ.... ಪ್ರತಿಯೊಬ್ಬ ಸೈನಿಕನೂ ತನ್ನನ್ನು ಕಾರ್ಮಿಕ ಸೈನಿಕನೆಂದು ಭಾವಿಸುತ್ತಾನೆ... ತನ್ನ ಕಾರ್ಯವನ್ನು ತ್ಯಜಿಸಿದರೆ, ಕಾರ್ಮಿಕ ದುರ್ಬಳಕೆಯ ಅಪರಾಧಿಯಾಗುತ್ತಾನೆ.'

ಇನ್ನೊಂದು ಪ್ರಶ್ನೆಯೆಂದರೆ, ಕ್ರಾಂತಿಯಿಂದ ಆಗಿರುವ ತಾತ್ಕಾಲಿಕ ಅಡೆತಡೆಗಳನ್ನು ಒಪ್ಪಿಕೊಂಡು, ಸಮಾಜದಲ್ಲಿ ಉತ್ಪಾದಕ ಶಕ್ತಿಗಳನ್ನು ಕಟ್ಟುವುದು. ಈ ಕೆಲಸವನ್ನು ಕಾರ್ಮಿಕ ವರ್ಗವೇ ತುರ್ತಾಗಿ ವಹಿಸಿಕೊಳ್ಳಬೇಕು. ಬರೀ ವ್ಯವಸಾಯ ರಷ್ಯಾವನ್ನು ಕಾಪಾಡಲು ಸಾಧ್ಯವಿಲ್ಲ. ಲೆನಿನ್ ಇದನ್ನು ವಿಶ್ಲೇಷಿಸುತ್ತಾ 'ರೈತರ ಬಳಕೆಗೆ ಸಾಮಗ್ರಿಗಳನ್ನು ತಯಾರಿಸುವುದು ಮಾತ್ರ ಸಾಕಾಗುವುದಿಲ್ಲ. ಇಂತಹ ಲಘು ಉದ್ಯಮಗಳು ಒಳ್ಳೆಯ ಸ್ಥಿತಿಯಲ್ಲಿದ್ದರೂ ಲಾಭವಿಲ್ಲ. ಭಾರೀ ಉದ್ಯಮಗಳ ಅಗತ್ಯ ಅಪಾರ.... ಭಾರೀ ಉದ್ಯಮಗಳಿಗೆ ರಾಜ್ಯದ ಸಬ್ಸಿಡಿ ಅಗತ್ಯ. ಅವು ಇಲ್ಲದಿದ್ದರೆ, ನಾವು ನಾಗರಿಕ ಸಮಾಜವೇ ಅಲ್ಲ. ಸಮಾಜವಾದ ದೂರದ ಕನಸು.' (ಲೆನಿನ್, ೧೯೨೨ರ ಕೊಮಿಂಟರ್ನ್‌ನ, ೪ನೇ ಸಭೆ)

ಹಾಗಾದರೆ, ಠೇವಣಿ ಹೊಂದಿಸುವುದು ದೇಶದ ಅಥವಾ ರಾಜ್ಯದ ಕರ್ತವ್ಯ. ಆದರೆ ಜನಬಲದ ಕಥೆ ಏನು? ಇವು ತಿಳುವಳಿಕೆ, ತಂತ್ರ, ಕೌಶಲ್ಯ ಮತ್ತು ಆವಿಷ್ಕಾರಗಳ ಮಿಶ್ರಣ. ಇಷ್ಟೊತ್ತಿಗಾಗಲೇ, ಇವು ಕೂಡ ರಾಜ್ಯದ ಜವಾಬ್ದಾರಿ ಎಂದು ತೀರ್ಮಾನಿಸಲಾಗಿತ್ತು: ಕಾರ್ಮಿಕ ವರ್ಗದ ನಾಯಕತ್ವವು ಈ ಕೆಳಕಂಡ ಮಾರ್ಗದರ್ಶನಗಳನ್ನು ಪಾಲಿಸಬೇಕೆಂದು ತೀರ್ಮಾನಿಸಲಾಯಿತು. 'ನಮ್ಮಲ್ಲಿ ತಜ್ಞರು ಮತ್ತು ಬುದ್ಧಿಜೀವಿಗಳಿಂದ ತಯಾರಿಸಲ್ಪಟ್ಟ ನಿಖರವಾದ ಪ್ರಣಾಳಿಕೆ ಇದೆ. ಇದು, ನಮ್ಮ ದೇಶದ ವಿಶಿಷ್ಟತೆಯನ್ನು ಗುರುತಿಸಿ, ಇರುವ ಸಂಪನ್ಮೂಲಗಳನ್ನು ಹೇಗೆ ಮತ್ತು ಯಾವ ರೀತಿಯಲ್ಲಿ ಬಳಸಬೇಕೆಂದು ಹೇಳುತ್ತದೆ. ಇವೆಲ್ಲವನ್ನೂ ಬಳಸಿ ಭಾರೀ ಉದ್ಯಮದ ಬುನಾದಿ ಕಟ್ಟಲೇಬೇಕು. ಇದಲ್ಲದೆ, ಸಮಾಜವಾದಿ ಆರ್ಥಿಕ ಜೀವನ ಸಾಧ್ಯವೇ ಇಲ್ಲ.' (ಲೆನಿನ್, ಮೇ ೧೯೨೧).

ಕಾರ್ಮಿಕ ವರ್ಗವು ಆಗಲೇ ಒಂದು ಯೋಜನೆಗೆ ಹೂಡಿಕೆ ಮಾಡಿತ್ತು. ಈ ಯೋಜನೆಗೆ ವಿಜ್ಞಾನದ ಅಗತ್ಯವಿದ್ದು, ವಿಜ್ಞಾನಕ್ಕೆ ಯೋಜನೆ ಬೇಕಾಗಿತ್ತು.

ಈ ದಿಕ್ಕಿನಲ್ಲಿ ಮಾಡಬೇಕಾದದ್ದು : ಝಾರ್ ರಷ್ಯಾದಲ್ಲಿ ಇದ್ದ ಕೆಲವೇ ವಿಜ್ಞಾನಿಗಳನ್ನು ಅಕಾಡೆಮಿಯ ರೀತಿಯಲ್ಲಿ ಒಂದುಗೂಡಿಸಿ, ಒಂದು ನಿರ್ದಿಷ್ಟ ಕಾರ್ಯವನ್ನು ನಿಯೋಜಿಸುವುದು. ಆದರೆ, ಕೆಲ ವಿಜ್ಞಾನಿಗಳು ಕ್ರಾಂತಿಗೆ ವೈರತ್ವವುಳ್ಳವರು. ಅವರ ಸಹಕಾರ ಪಡೆಯುವುದು ಹೇಗೆ ? ಇದು ಸೂಕ್ಷ್ಮವಾದ ಕಾರ್ಯ. ಲೆನಿನ್ ಮತ್ತು ಸಂಗಾತಿಗಳು ಈ ಕಡೆ ಗಮನಕೊಟ್ಟರು. ವೈಜ್ಞಾನಿಕ ರೀತಿಯಲ್ಲಿ ತರಬೇತಿ ಪಡೆದ ದೊಡ್ಡ ಪಡೆಯನ್ನು ಸಿದ್ಧಗೊಳಿಸಲು ತೀರ್ಮಾನಿಸಿದರು. ಇದಕ್ಕೆ, ಅಗತ್ಯವಿದ್ದಲ್ಲಿ, ಕ್ರಾಂತಿಯ ವಿರೋಧಿಗಳಾದ ವಿಜ್ಞಾನಿಗಳಿಂದಲೂ ಸಹಾಯ ಪಡೆಯಲು ಸಿದ್ಧರಿದ್ದರು.

ಯಾರ ಸಹಾಯ ಕೇಳುವುದು ? ಅಕ್ಟೋಬರ್ ಕ್ರಾಂತಿಯ ಹೊತ್ತಿಗೆ ರಷ್ಯಾದಲ್ಲಿ ಕೇವಲ ಕೆಲವು ವಿಜ್ಞಾನಿಗಳು ಮಾತ್ರವಿದ್ದರು. ವಿಶ್ವವಿಖ್ಯಾತನಾಗಿ ನೊಬೆಲ್ ಪ್ರಶಸ್ತಿ ಗೆದ್ದ ಒಬ್ಬ ವಿಜ್ಞಾನಿ ಮಾತ್ರ ಆ ಕಾಲದಲ್ಲಿದ್ದನು. ಆ ವಿಜ್ಞಾನಿಯೇ ಇವಾನ್ ಪಾವ್ಲವ್. ಶರೀರ ಶಾಸ್ತ್ರ ಮತ್ತು ವೈದ್ಯಕೀಯ ಶಾಸ್ತ್ರದ ನೊಬೆಲ್ ಪ್ರಶಸ್ತಿಯನ್ನು ೧೯೦೪ರ ಇಸವಿಗೆ ಅವನಿಗೆ ನೀಡಲಾಯಿತು. ನಿಯಮಾಧೀನ ರಿಫ್ಲೆಕ್ಸ್ ಮತ್ತು ಜೀರ್ಣಕ್ರಿಯೆಯ ಶರೀರವಿಜ್ಞಾನ ಸಂಶೋಧನೆಗೆ ಈ ಪ್ರಶಸ್ತಿ ನೀಡಲಾಯಿತು. ಇದಕ್ಕೆ ಅವರು ನಾಯಿಗಳೊಂದಿಗೆ ಕೆಲಸ ಮಾಡಿದರು. ವಿವಿಧ ಸಂಕೇತಗಳನ್ನು ನೀಡಿ ಅವುಗಳ ಬಾಯಲ್ಲಿ ನೀರೂರುವುದನ್ನು ಗಮನಿಸಿದರು. ಉದಾಹರಣೆ, ಗಂಟೆ ಬಾರಿಸಿದರೆ ಊಟ ಬರುವುದೆಂಬ ಸಂಕೇತ.

ಪಾವ್ಲವ್ ಕಮ್ಯುನಿಸ್ಟ್ ಸಿದ್ಧಾಂತಕ್ಕೆ ಸಂಪೂರ್ಣವಾಗಿ ವಿರೋಧಿಯಾಗಿದ್ದರೂ ಸಹ, ಸೋವಿಯತ್ ರಷ್ಯಾಗೆ (ಸೋವಿಯತ್ ಯೂನಿಯನ್ ಸ್ಥಾಪಿತವಾಗಿದ್ದು ೧೯೨೨ನೇ ಇಸವಿಯಲ್ಲಿ) ಪಾವ್ಲವ್ ಮತ್ತು ವಿಜ್ಞಾನಕ್ಕೆ ಅವರ ನಾಯಕತ್ವದ ಅಗತ್ಯವಿದೆಯೆಂದು ಲೆನಿನ್ ತೀರ್ಮಾನವಾಗಿತ್ತು. ೨೪ನೇ ಜನವರಿ ೧೯೨೧ರಂದು, ಲೆನಿನ್ ಸ್ವತಃ ಸಹಿ ಮಾಡಿದ ಒಂದು ವಿಶೇಷ ಆದೇಶದಂತೆ, ಪಾವ್ಲವ್ ಮಾಡಿದ ಸಂಶೋಧನೆಗೆ ಸಂಪೂರ್ಣ ಸ್ವಾತಂತ್ರ್ಯ ಮತ್ತು ಸೌಲಭ್ಯಗಳನ್ನು ಕೊಡಲಾಯಿತು. ಅವರ ಜೀವನೋಪಾಯವನ್ನು ಸರಳಗೊಳಿಸಲು, ಸಂಬಳವನ್ನು ಹೆಚ್ಚುಮಾಡಿ, ಏಕಾಗ್ರತೆಯಿಂದ ಸಂಶೋಧನೆ ಮಾಡಲು ಅವಕಾಶ ಮಾಡಿಕೊಟ್ಟ. ಸಾಕಷ್ಟು ಹಣಕಾಸು ವ್ಯವಸ್ಥೆಯಿಂದ ಅವರ ಕೆಲಸಗಾರರೆಲ್ಲರಿಗೂ ಅಗತ್ಯ ಸೌಲಭ್ಯ ಒದಗಿಸಲಾಯಿತು. ಆಹಾರದ ಕೊರತೆಯ ಕಾಲದಲ್ಲಿ ಪ್ರತ್ಯೇಕ ಪಡಿತರ ವ್ಯವಸ್ಥೆ ಕಲ್ಪಿಸಿದರು. ಇವೆಲ್ಲವನ್ನೂ ಮಾಡಿದ್ದು, ಕಾರ್ಮಿಕ ರಾಜ್ಯಕ್ಕೆ ವಿಜ್ಞಾನದ ಅಡಿಪಾಯ ಹಾಕಲು, ಪರಿಣತರ ನಿರ್ದೇಶನದಲ್ಲಿ ಮಾನವಸಂಪನ್ಮೂಲ ತಯಾರಿಸುವುದಕ್ಕಾಗಿ. ಇದನ್ನು ಸಾಧಿಸುವುದರಲ್ಲಿ ಕಮ್ಯುನಿಸ್ಟರ ಪರ, ವಿರೋಧ, ಇದಾವುದೂ ಲೆಕ್ಕಕ್ಕೆ ಬರಲಿಲ್ಲ.

ಪಾವ್ಲವ್ ಕಡೆಯವರೆಗೂ ಕಮ್ಯುನಿಸ್ಟರ ವಿರೋಧಿಯಾಗಿಯೇ ಉಳಿದ. ಆದರೆ ಅಂತರರಾಷ್ಟ್ರೀಯ ಖ್ಯಾತಿಯ ಶರೀರವಿಜ್ಞಾನದ ಗುಂಪನ್ನು ತಯಾರಿಸಿದ. ೧೯೩೫ನೇ ಇಸವಿಯಲ್ಲಿ, ಶರೀರವಿಜ್ಞಾನದ ಅಂತರರಾಷ್ಟ್ರೀಯ ಸಮ್ಮೇಳನ ಸೋವಿಯತ್ ಯೂನಿಯನ್ನಿನಲ್ಲಿ ನಡೆಯಿತು. ಪಾವ್ಲವ್ ೧೯೩೬ರಲ್ಲಿ ಮೃತಪಟ್ಟರು. ಬಹಳಷ್ಟು ಕೊರತೆಗಳಿದ್ದರೂ ಸೋವಿಯತ್ ವಿಜ್ಞಾನ ಪಕ್ವವಾಗಿತ್ತು.

ಇಂಥದೇ ಪ್ರಯತ್ನಗಳನ್ನು ವಿವಿಧ ವಿಜ್ಞಾನ ವಿಷಯಗಳಲ್ಲಿ ಸಹ ಮಾಡಲಾಯಿತು. ಅನೇಕ ವೇಳೆ ಪರಿಣತರಿಲ್ಲದೆ ಅಥವಾ ಅಗತ್ಯ ಸಾಮಗ್ರಿಗಳಿಲ್ಲದೆ ತೊಡಕುಗಳು ಆಗುತ್ತಿದ್ದವು. ಕೆಲವೊಮ್ಮೆ, ಸೋವಿಯತ್ ವಿಜ್ಞಾನಿಗಳು ಪ್ರಾರಂಭದಿಂದ ಶುರುಮಾಡಬೇಕಾಗಿತ್ತು. ಅವರು ಕಲಿಯುವುದಲ್ಲದೇ, ಬೇರೆಯವರಿಗೂ ಕಲಿಯುವ ಅವಕಾಶ ಮಾಡಿಕೊಡಬೇಕಾಯಿತು. ಉದಾಹರಣೆ

ಎಂದರೆ, ಭೂಭೌತಶಾಸ್ತ್ರಕ್ಕೆ ಸಂಬಂಧಿಸಿದ ಕುರ್‌ಸ್ಕಿ ಪ್ರದೇಶದ ಕಾಂತೀಯ ಅಸಂಗತತೆ. ಅದರ ಬಗ್ಗೆ ಕೆಳಗೆ ಹೇಳಲಾಗಿದೆ.

ನಮಗೆ ಗೊತ್ತಿರುವ ಹಾಗೆ ಭೂಮಿಯು ಒಂದು ದೈತ್ಯ ಮ್ಯಾಗ್ನೆಟ್. ಆದ್ದರಿಂದಲೇ ತಡೆಯಿಲ್ಲದೆ ತೂಗಾಡುವ ಮ್ಯಾಗ್ನೆಟ್ ಉತ್ತರ–ದಕ್ಷಿಣ ದಿಕ್ಕನ್ನು ಸೂಚಿಸುವುದು. ಇದರಿಂದಲೇ ನಾವಿಕರು ಮ್ಯಾಗ್ನೆಟ್ ದಿಕ್ಸೂಚಿಯನ್ನು ಬಳಸುವ ಮೂಲಕ ತಾವು ಸೇರಬೇಕಾದ ಸ್ಥಳಗಳನ್ನು ತಲುಪುವರು.

ಭೂಮಿಯ ಅಯಸ್ಕಾಂತೀಯ ಕ್ಷೇತ್ರಬಲವು ಸ್ಥಳದಿಂದ ಸ್ಥಳಕ್ಕೆ ವ್ಯತ್ಯಯವಾಗಿರುತ್ತದೆ. ಭೂಮಿಯ ಮೇಲಿನ ಅಯಸ್ಕಾಂತೀಯ ಬಲವು ದುರ್ಬಲವಾಗಿದೆ. ಇದರ ಮೌಲ್ಯ ೦.೨೫–೦.೬೫ ಗೌಸ್‌ಗಳಷ್ಟಿದ್ದು ಗೌಸ್ ಎನ್ನುವುದು ಕಾಂತೀಯ ಕ್ಷೇತ್ರ ಬಲದ ಒಂದು ಮಾಪಕ. ಉದಾಹರಣೆಗೆ, ಮನೆಯಲ್ಲಿರುವ ರೆಫ್ರಿಜರೇಟರ್ ಮೋಟಾರಿನ ಕಾಂತೀಯ ಬಲವು ಭೂಮಿಯ ಅಯಸ್ಕಾಂತೀಯ ಬಲಕ್ಕಿಂತ ೩೦೦–೪೦೦ ಪಟ್ಟು ಹೆಚ್ಚಿರುತ್ತದೆ.

ರಷ್ಯಾದ ದಕ್ಷಿಣ–ಪಶ್ಚಿಮ (ನೈರುತ್ಯ) ಭಾಗದಲ್ಲಿ ಇರುವ ಸ್ಥಳ ಕುರ್‌ಸ್ಕಿ. ಈ ಸ್ಥಳವು ಮಾಸ್ಕೊ ನಗರದ ದಕ್ಷಿಣಕ್ಕೆ ಸುಮಾರು ನಾನ್ನೂರು ಕಿಲೋಮೀಟರ್ ದೂರದಲ್ಲಿದೆ. ೧೭೭೩ರಲ್ಲಿ ಪರಿಶೋಧಕರ ಒಂದು ಗುಂಪು ಈ ಪ್ರದೇಶದಲ್ಲಿನ ಕಾಂತೀಯತೆಯ ಬಲದಲ್ಲಿನ ದೊಡ್ಡ ವ್ಯತ್ಯಾಸಗಳನ್ನು ಪತ್ತೆಹಚ್ಚಿದರು. ಈ ವ್ಯತ್ಯಾಸವು ೦.೨ ಗೌಸ್‌ನಿಂದ ೦.೮ ಗೌಸ್‌ಗಳಷ್ಟು ವ್ಯತ್ಯಯವನ್ನು ಸೂಚಿಸಿತು. ಅದೂ ಅಲ್ಲದೆ, ಇಷ್ಟು ದೊಡ್ಡ ವ್ಯತ್ಯಯವು ೨–೩ ಕಿಲೋಮೀಟರ್‌ನಷ್ಟು ದೂರದಲ್ಲಿ ಕಾಣುವುದು. ನೂರು ವರ್ಷಗಳ ನಂತರ ೧೮೭೪–೧೮೯೮ನೇ ಇಸವಿಗಳಲ್ಲಿ ವಿಸ್ತೃತವಾದ ಪರಿಶೋಧನೆಯನ್ನು ಕೈಗೊಳ್ಳಲಾಯಿತು. ಇದರಿಂದ ಕಂಡುಹಿಡಿದದ್ದೇನೆಂದರೆ ಇಷ್ಟು ದೊಡ್ಡ ಕಾಂತೀಯ ಬಲವು ಅದರ ಜೊತೆಗೂಡಿದ ವ್ಯತ್ಯಾಸವು ಒಂದು ವಿಸ್ತೀರ್ಣವಾದ ಪ್ರದೇಶದಲ್ಲಿ ಅಸ್ತಿತ್ವದಲ್ಲಿದೆಯೆಂಬುದು.

ಈ ಕ್ಲಿಷ್ಟಕರವಾದ ಸಂಶೋಧನೆಯ ಫಲಿತಾಂಶವೆಂದರೆ, ಈ ಅಸಂಗತತೆಯು ಆ ಪ್ರದೇಶವು ಕಬ್ಬಿಣ ಖನಿಜದ ಖನಿಯಾಗಿತ್ತು ಎಂಬುದು. "ನಾವು ಆದಷ್ಟು ಬೇಗ ಈ ಕಾರ್ಯವನ್ನು ಶೀಘ್ರಗತಿಯಲ್ಲಿ ಮುನ್ನಡೆಸಿ ಯಾವುದೇ ಕಾರಣಕ್ಕೂ ಈ ಚಿನ್ನದ ಅವಕಾಶವನ್ನು ಕಳೆದುಕೊಳ್ಳದೆ, ಪ್ರಗತಿಪರಿಶೀಲನೆ ನಡೆಸಿ, ಅದಕ್ಕೆ ಅಗತ್ಯವಾದ ಸಾಮಗ್ರಿಗಳನ್ನು ಅತಿವೇಗದಲ್ಲಿ ಬೇರೆ ದೇಶಗಳಿಂದ ಆಮದು ಮಾಡಿಕೊಳ್ಳಬೇಕು (ಉದಾಹರಣೆಗೆ ವಜ್ರ ಕೊರೆಯುವಂತಹ ಸಾಮಗ್ರಿಗಳು)." ಲೆನಿನ್ – ಗುಬ್ಕಿನ್ ಅವರ ಪರಿಶೋಧನೆಯು ೧೯೨೦ರಿಂದ ೧೯೨೫ರವರೆಗೆ ನಡೆದಿತ್ತು. ೧೯೩೧ರ ಹೊತ್ತಿಗೆ ಈ ಅಪೂರ್ವ ಕಬ್ಬಿಣ ಖನಿಜದ ಅಸ್ತಿತ್ವ ದೃಢೀಕರಿಸಲ್ಪಟ್ಟು ಅಲ್ಲಿನ ಕಬ್ಬಿಣದ ಪ್ರಮಾಣ ೬೦%ಕ್ಕಿಂತ ಹೆಚ್ಚಾಗಿತ್ತು. ಇದರ ವಿಸ್ತೀರ್ಣವು ೧,೨೦,೦೦೦ ಚದರ ಕಿಲೋಮೀಟರ್‌ನಷ್ಟಿದ್ದು – ಇದು ಕರ್ನಾಟಕದ ವಿಸ್ತೀರ್ಣಕ್ಕೆ ಹೋಲಿಸಿದರೆ ಮೂರನೆ ಎರಡರಷ್ಟಿದೆ. ಗುಬ್ಕಿನ್ ಅವರು ಸೋವಿಯತ್ ಸರ್ಕಾರದ ಅನೇಕ ಪ್ರಶಸ್ತಿಗಳನ್ನು ಪಡೆದು ಮಾಸ್ಕೊ ನಗರದಲ್ಲಿ ೧೯೩೭ನೇ ಇಸವಿಯಲ್ಲಿ ಜರುಗಿದ ಅಂತರರಾಷ್ಟ್ರೀಯ ಭೂವಿಜ್ಞಾನದ ಸಮ್ಮೇಳನದ ಅಧ್ಯಕ್ಷರಾಗಿ ಜವಾಬ್ದಾರಿ ನಿರ್ವಹಿಸಿದರು. ಕುರ್‌ಸ್ಕಿ ಗಣಿಯು ೧೯೫೨ನೇ ಇಸವಿಯಲ್ಲಿ ಕಾರ್ಯರೂಪ ತಾಳಿ ಅಲ್ಲಿನ ಕೆಲವು ಗಣಿಗಳಿಗೆ ಗುಬ್ಕಿನ್ ಅವರ ಹೆಸರನ್ನಿಡಲಾಯಿತು. ತೈಲ ಮತ್ತು ನೈಸರ್ಗಿಕ ಅನಿಲಗಳ ಬಗ್ಗೆ ಸಂಶೋಧಿಸುವ ವಿಶ್ವವಿದ್ಯಾಲಯಕ್ಕೆ ಗುಬ್ಕಿನ್ ಅವರ ಹೆಸರನ್ನಿಡಲಾಯಿತು. ಗುಬ್ಕಿನ್ ಕಾಲದಲ್ಲಿ ಈ ಪರಿಶೋಧನೆಗಳನ್ನು ಭೂಪರೀಕ್ಷೆ ಮೂಲಕ ನಡೆಸಲಾಗುತ್ತಿತ್ತು. ಈಗಿನ ಕಾಲದಲ್ಲಿ, ವೈಮಾನಿಕ ಮತ್ತು ಬಾಹ್ಯಾಕಾಶ ಪರಿಕರಗಳು ಇಂತಹ ಅಸಂಗತತೆಗಳನ್ನು ಕಂಡುಕೊಳ್ಳಬಲ್ಲವು.

ಕಡೆಯದಾಗಿ, ಬೋಲ್ಶೆವಿಕ್ ಕ್ರಾಂತಿಯು ಬದಲಾಯಿಸಲು ಅಸಾಧ್ಯವಾದ ಕೆಲವು ಮೌಲ್ಯಗಳನ್ನು ಹೇಗೆ ಬದಲಾಯಿಸಿತೆಂಬುದನ್ನು ತಿಳಿಯೋಣ. ಕಮ್ಯುನಿಸ್ಟರೂ, ಕಷ್ಟವೆನಿಸಿದರೂ, ಈ ಬದಲಾದ ಪರಿಸ್ಥಿತಿಯನ್ನು ಒಪ್ಪಲೇಬೇಕಾಯಿತು. ಪಿಯೊಡೊರ್ ಗ್ಲಾಡ್ಕಾವ್ ೧೯೨೫ರಲ್ಲಿ ಬರೆದ 'ಸಿಮೆಂಟ್' ಕಾದಂಬರಿ, ಅವತ್ತಿನ ಬದಲಾದ ಜಗತ್ತಿನ ಬಗ್ಗೆ ಹೇಳುತ್ತದೆ. ಕೆಂಪುಸೈನ್ಯದ ಹೋರಾಟಗಾರ ಗ್ಲೆಬ್, ಬಿಳಿಯ ಪ್ರತಿ–ಕ್ರಾಂತಿಕಾರರನ್ನು ಸೋಲಿಸಿ, ಮನೆಗೆ ಬರುತ್ತಾನೆ. ಅವನ ಹೆಂಡತಿ ದಾಶಾ ಸಂತೋಷದಿಂದ ಅವನನ್ನು ಬರಮಾಡಿಕೊಂಡರೂ, ಪಕ್ಷವು ನಿಯೋಜಿಸಿದ್ದ ಕೆಲಸಕ್ಕಾಗಿ ಬೇರೆಕಡೆ ಹೋಗಬೇಕಾಗುತ್ತದೆ. ಅವಳು ಕೆಲಸದಲ್ಲಿ ಮುಳುಗಿ ಹೋಗಿರುತ್ತಾಳೆ. ಯುದ್ಧಕ್ಕೆ ಮುಂಚೆಯಿದ್ದ ಪರಿಸ್ಥಿತಿ ಈಗ ಬದಲಾಗಿದೆ. ಗ್ಲೆಬ್‌ಗೆ, ಹೆಂಡತಿಯಿಲ್ಲದ ಈ ಬದಲಾವಣೆಗೆ ರಾಜಿಯಾಗುವುದು ಕಷ್ಟವಾಗುತ್ತದೆ. ಗ್ಲೆಬ್ ಯುದ್ಧಕ್ಕೆ ಹೊರಟಮೇಲೆ, ದಾಶಾ ಹತಾಶಳಾದರೂ, ಕೆಂಪು ಸೈನ್ಯವನ್ನು ಸೇರಿ, ಕ್ರಾಂತಿಯಲ್ಲಿ ಒಂದಾಗುತ್ತಾಳೆ. ಕ್ರಾಂತಿಯು ಅವಳನ್ನು ಸಂಪೂರ್ಣ ಬದಲಾಯಿಸಿತು. ಈಗ ಅವಳು 'ಅಸಹಾಯ ಹೆಣ್ಣು' ಆಗಿರದೇ, ಯಾರೂ ಅವಳನ್ನು ಮೊದಲಿನ ಸ್ಥಿತಿಗೆ ತರಲು ಸಾಧ್ಯವಿರಲಿಲ್ಲ. 'ನಿನಗೂ ಸಹ ಸಾಧ್ಯವಿಲ್ಲ, ಸಂಗಾತಿ ಗ್ಲೆಬ್'. ಇಬ್ಬರಿಗೂ, ಯುದ್ಧದ ಗೆಲುವನ್ನು ಬಿಡಲು ಸಾಧ್ಯವಾಗದೆಯಿದ್ದರೂ, ಹಣಕಾಸಿನ ವ್ಯವಸ್ಥೆ ಮಾಡಲೇಬೇಕಾಯಿತು. ಗ್ಲೆಬ್ ಮತ್ತು ದಾಶಾ ಸಂಗಾತಿಗಳಾಗಿ ಹಿಂದೆ ಮುಚ್ಚಿಹಾಕಿದ್ದ ಸಿಮೆಂಟ್ ಕಾರ್ಖಾನೆಯನ್ನು, ಕಾರ್ಮಿಕರನ್ನು ಒಟ್ಟುಗೂಡಿಸಿ, ಮತ್ತೆ ಶುರುಮಾಡುತ್ತಾರೆ. ಅವರ ಮನೆಯೂ ರೂಪಾಂತರಗೊಂಡು, ಇಬ್ಬರಿಗೂ ಅದುವೇ ನಿಜವಾದ ಮನೆ ಎನಿಸಿತು. ಕಾರ್ಖಾನೆಯು ಮತ್ತೆ ಕೆಲಸ ಮಾಡಬೇಕೆಂದರೆ, ಜರ್ಮನ್ ಇಂಜನಿಯರ್ ಆದ ಕೈಸ್ಟ್ ಅವರ ಸಹಾಯ ಅಗತ್ಯವಾಗಿತ್ತು. ಆದರೆ, ಈ ಕೈಸ್ಟ್, ಒಬ್ಬ ಶತ್ರುವಾಗಿದ್ದು, ಒಂದು ಕಾಲದಲ್ಲಿ ಗ್ಲೆಬ್ಬನ್ನು ಬಿಳಿಯ ಪ್ರತಿ–ಕ್ರಾಂತಿಗಾರರ ವಶಕ್ಕೆ, ಅವನಿಗೆ ಚಿತ್ರಹಿಂಸೆ ಮಾಡಲು ಒಪ್ಪಿಸಿರುತ್ತಾನೆ. ಗ್ಲೆಬ್ ಪ್ರತೀಕಾರ ಬೇಕೆಂದರೂ, ಅಪಾರ ಮಾನಸಿಕ ತುಮುಲವಿದ್ದರೂ, ಕೈಸ್ಟನ ಸಹಾಯ ಕೇಳಲು ಸಿದ್ಧನಾಗುತ್ತಾನೆ. ಕಾರಣ: ಕಾರ್ಮಿಕನಿಗೆ ಪ್ರತೀಕಾರಕ್ಕಿಂತ ಉತ್ಪಾದನೆಯೇ ಮುಖ್ಯ. ಕೈಸ್ಟನೂ ಕೊನೆಗೆ ಸಹಾಯಕ್ಕೆ ಒಪ್ಪುತ್ತಾನೆ. ಕಾರ್ಮಿಕರು, ಪುರುಷರು, ಸ್ತ್ರೀಯರು, ವಿರಾಮವಿಲ್ಲದೆ ಶ್ರಮಿಸಿ ಉತ್ಪಾದನೆ ಶುರುಮಾಡುತ್ತಾರೆ. ಆ ದಿನ ಯಂತ್ರಗಳ ಶಬ್ದಕ್ಕೆ ಕಾರ್ಮಿಕರ ಅಪಾರ ಸಂಭ್ರಮ ಸೇರಿ ಅದೊಂದು ಉಲ್ಲಾಸಭರಿತ ಕ್ಷಣವಾಗುತ್ತದೆ. ಕಾರ್ಖಾನೆ, ಯಂತ್ರ ಮತ್ತು ಕಾರ್ಮಿಕರು, ಎಲ್ಲರೂ ಸೇರಿ 'ಸಿಮೆಂಟ್' ಮಾಡುತ್ತಾರೆ.

ಸೋವಿಯತ್ ಒಕ್ಕೂಟದ ಆರಂಭದ ದಿನಗಳಲ್ಲಿ ಇಂತಹ ಅನುಭವಗಳು ಹೇರಳವಾಗಿದ್ದವು. ಈ ಅನುಭವಗಳ ಬುನಾದಿಯಿಂದ ಮುಂದೆ ಪಂಚವಾರ್ಷಿಕ ಪ್ರಣಾಳಿಕೆಗಳು ರೂಪುಗೊಂಡವು.

**ಡಾ॥ ಎಸ್. ಚಟರ್ಜಿ**
ಅಧ್ಯಕ್ಷರು, ಅಖಿಲ ಭಾರತ ಪ್ರಜಾ ವಿಜ್ಞಾನ ಜಾಲ, ಬೆಂಗಳೂರು
**ಕನ್ನಡಕ್ಕೆ :** ಎನ್. ಪ್ರಭಾ ಮತ್ತು ವಾಣಿ ಚಟರ್ಜಿ

## ನವಕರ್ನಾಟಕ ಪ್ರಕಾಶನದ ಹೊಸ ದಾಖಲೆ

ಕನ್ನಡ ಸಾಹಿತ್ಯ ಪರಿಷತ್ತಿನ ೨೦೧೬ರ ಸಾಲಿನ ವಿವಿಧ ದತ್ತಿ ಪ್ರಶಸ್ತಿಗಳಲ್ಲಿ ಐದು ಪ್ರಶಸ್ತಿಗಳನ್ನು ಪಡೆದು ನವಕರ್ನಾಟಕ ದಾಖಲೆ ಸೃಷ್ಟಿಸಿದೆ:

೧) ದಿ। ಡಾ. ಎಚ್. ನರಸಿಂಹಯ್ಯ ದತ್ತಿ ಪ್ರಶಸ್ತಿ
**ಸರ್ವಾಂಗೀಣ ಬೆಳವಣಿಗೆಗಾಗಿ ಮಕ್ಕಳಲ್ಲಿ ವೈಜ್ಞಾನಿಕ ಮನೋವೃತ್ತಿ ಪೋಷಕರ ಜವಾಬ್ದಾರಿ**
*– ಎಂ. ಅಬ್ದುಲ್ ರೆಹಮಾನ್ ಪಾಷ*

೨) ವಸುದೇವ ಭೂಪಾಲಂ ದತ್ತಿ ಪ್ರಶಸ್ತಿ (ಅನುವಾದಕ್ಕಾಗಿ)
**ಒಂಟಿ ಸೇತುವೆ** *– ಸ. ರಘುನಾಥ*

೩) ದಿ। ಡಾ. ಎ. ಎಸ್. ಧರಣೇಂದ್ರಯ್ಯ ಮನೋವಿಜ್ಞಾನ ದತ್ತಿ ಪ್ರಶಸ್ತಿ
**ಅಪರಾಧಿಯ ಅಂತರಂಗ** *– ಡಾ. ಮಹಾಬಲೇಶ್ವರ ರಾವ್*

೪) ಬಿಸಲೇರಿ ಜಯಣ್ಣ ಮತ್ತು ಬಿಸಲೇರಿ ಬ್ರದರ್ಸ್ ದತ್ತಿ ಪ್ರಶಸ್ತಿ
**ಆರೋಗ್ಯ ಆಶಯ** *– ಡಾ. ಶ್ರೀನಿವಾಸ ಕಕ್ಕಿಲ್ಲಾಯ ಬೇವಿಂಜೆ*

೫) ಶ್ರೀಮತಿ ಸುಮನ್ ಸೋಮಶೇಖರ್ ಸೋಮವಾರಪೇಟೆ ದತ್ತಿ ಪ್ರಶಸ್ತಿ
**ಬೆಂಕಿ ಬಾಣಲೆ** *– ಎಸ್. ಮಂಜುನಾಥ*

Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. 

